# ಮೊದಲನೆ ಮುದ್ರಣದ ಮುನ್ನುಡಿ

ಇದು 'ಗಾಂಧೀ ವಿಚಾರದೋಹನ' ಎಂಬ ಮೂಲ ಗುಜರಾತೀ ಪುಸ್ತಕದ ಕನ್ನಡ ವೇಷಾಂತರ. ಮೂಲವನ್ನು ಬರೆದವರು ಶ್ರೀ. ಕಿಶೋರ್‌ಲಾಲ್ ಮಶ್ರೂವಾಲಾ. ಯುಗಪುರುಷರೂ ಅದ್ವಿತೀಯ ಮಹಿಮಾಶಾಲಿಗಳೂ ಅನುಪಮ ಚಾರಿತ್ರ್ಯವಂತರೂ ಜೀವನಸಮಸ್ಯೆಗಳನ್ನು ಸತ್ಯ ಮತ್ತು ಅಹಿಂಸೆ ಎಂಬ ಎರಡು ಕಣ್ಣುಗಳಿಂದ ನೋಡಿ ಬಿಡಿಸಿ ತಮ್ಮ ಅಂತಃಪ್ರೇರಣೆಯಂತೆ ಸದೈವ ನಡೆಯುತ್ತಿರುವವರೂ ಆದ ಮಹಾತ್ಮಾ ಗಾಂಧಿಯವರ ತತ್ವಗಳನ್ನು ಆಮೂಲಾಗ್ರವಾಗಿ ತಿಳಿದುಕೊಂಡು, ಅರಗಿಸಿ, ಆಚರಣೆಯಲ್ಲಿ ತಂದ ಸಾತ್ವಿಕ ಶಿರೋಮಣಿಗಳಲ್ಲಿ ಕಿಶೋರ್‌ಲಾಲರು ಒಬ್ಬರು. ಆದುದರಿಂದ ಈ ಪುಸ್ತಕವನ್ನು ಬರೆಯಲು ಅವರು ಯಥಾ ಯೋಗ್ಯರು.

ಕಿಶೋರ್‌ಲಾಲರು ಅತ್ಯಂತ ಸರಳವಾದ ಶೈಲಿಯಲ್ಲಿ ಗಾಂಧೀವಿಚಾರಗಳನ್ನು ಜನರೆದುರಿಗೆ ಇಡಲು ಯತ್ನಿಸಿದ್ದಾರೆ. ಆ ಯತ್ನಕ್ಕೆ ಮಹಾತ್ಮರ ಆಶೀರ್ವಾದವೂ ದೊರೆತಿದೆ. ಇಂಥ ಪುಸ್ತಕವನ್ನು ಕನ್ನಡಿಸುವ ಧೈರ್ಯವನ್ನು ಶ್ರೀ.ಗುರುನಾಥ ಜೋಶಿಯವರು ಮಾಡಿರುವರು. ತಮ್ಮ ಶಕ್ತಿಮೀರಿ ಯತ್ನಿಸಿ ಅವರು ಮೂಲದಲ್ಲಿರುವ ಸರಲತೆ ಸುಲಭತೆಗಳನ್ನು ತಮ್ಮ ಭಾಷೆಯಲ್ಲಿಯೂ ತರಲೆತ್ನಿಸಿದ್ದಾರೆ. ಹಾಗು ಆ ಕಾರ್ಯದಲ್ಲಿ ಒಳ್ಳೆ ಯಶಸ್ಸನ್ನು ಸಂಪಾದಿಸಿದ್ದಾರೆ.

ಗಾಂಧಿಜಿಯವರ ವಿಚಾರಸರ್ವಸ್ವದ ತಿರುಳನ್ನು ಒತ್ತಟ್ಟಿಗೆ ನೋಡಬೇಕಾಗಿದ್ದರೆ ಇದರ ಹೊರತು ಇನ್ನೊಂದು ಪುಸ್ತಕವಿಲ್ಲ. ಇಂಥ ಪುಸ್ತಕವು ಈ ಹೊತ್ತು ಕನ್ನಡ ರೂಪವನ್ನು ತಾಳುತ್ತಿರುವುದು ಕನ್ನಡಿಗರ ಸುದೈವವೆ ಎಂದು ಹೇಳಬಹುದು. ಈ ಹೊತ್ತು ಗಾಂಧೀಜಿಯವರು ಕೇವಲ ಒಂದೇ ಒಂದು ಹಿಂದುಸ್ತಾನದವರಲ್ಲ; ಅವರು ಜಗದ್ವ್ಯಕ್ತಿಗಳು. ಅವರ ತತ್ವ, ವಿಚಾರ, ಜೀವನ, ಆಚಾರ ಇವುಗಳ ಅಭ್ಯಾಸವು ಈಗ ಪ್ರತಿ ದೇಶದಲ್ಲಿ ಆಸ್ಥೆಯಿಂದ ಆಗುತ್ತಿರುವುದು. ಇಂಥ ಸಮಯದಲ್ಲಿ ಕೇವಲ ಕನ್ನಡವನ್ನೆ ಬಲ್ಲವರಿಗೆ ಈ ಪುಸ್ತಕವು ಅಮೌಲಿಕವಾದ ಸೊತ್ತು ಸಿಕ್ಕಂತೆಯೆ ಸರಿ.

ಆದರೆ ಈ ಪುಸ್ತಕವೆಂದರೊಂದು ಸ್ಮೃತಿಗ್ರಂಥವೆಂದು ಮಾತ್ರ ಯಾರೂ ತಿಳಿಯಕೂಡದು. ಗಾಂಧೀಜಿಯವರು ವಿಕಸನಶೀಲರಾದ ಅತ್ಯಂತ ತೇಜಸ್ವಿ ಜೀವ ಎಂದು ಹೇಳಬಹುದು. ತಮ್ಮದೊಂದು ಸಾಂಪ್ರದಾಯವಿಲ್ಲ, ಹಾಗೂ ಅಂಥ ಸಾಂಪ್ರದಾಯವಾಗಕೂಡದು ಎಂದು ಅವರು

ಯಾವಾಗಲೂ ಎಚ್ಚರಪಡುತ್ತಿರುವರು. ಆದುದರಿಂದ ಅವರು ಜೀವದಿಂದಿರುವಾಗಲೇ ಗ್ರಂಥಸ್ಥವಾದ ಹಲವು ಮಾತುಗಳನ್ನು ನಾವು ಶಾಸ್ತ್ರದಂತೆ ಮನ್ನಿಸಲಾರಂಭಿಸುವುದು ಅವರ ಮನಸ್ಸಿಗೆ ಬರುವುದಿಲ್ಲ. ಈ ಪುಸ್ತಕವೆಂದರೆ ಅವರ ವಿಚಾರಗಳ ದಿಕ್ಕನ್ನು ತೋರುವ ಕೈದೀಪ, ಅವರು ಹೋಗುತ್ತಿರುವ ಮಾರ್ಗವನ್ನು ನಿರ್ದೇಶಿಸುವ ಕೈಗಂಬ.

ಅವರ ನಿಜವಾದ ಜಾಜ್ವಲ್ಯ ಜೀವನತೇಜವನ್ನು ಗ್ರಹಿಸಬೇಕಾದರೆ ಅವರ ನಿತ್ಯಜೀವನದ ಕಡೆಗೆಯೆ ನೋಡಿ, ನಮಗೆ ಬೇಕಾದ ಪ್ರಶ್ನೆಗಳನ್ನು ಅವರೆದುರಿಗೆ ಇಟ್ಟು ನಾವು ಸಮಾಧಾನ ಮಾಡಿಕೊಳ್ಳಬೇಕು. ಹಾಗೂ ಸ್ಫೂರ್ತಿ ಶಕ್ತಿಗಳನ್ನು ಪಡೆದು ನಮ್ಮ ಜೀವನವನ್ನೂ ಪ್ರಕಾಶಮಾನ ಮಾಡಿಕೊಳ್ಳಬೇಕು. ಹಾಗೆ ಮಾಡುವಾಗ ಈ ಪುಸ್ತಕವು ಅತ್ಯಂತ ಉಪಯುಕ್ತವು, ಮಾರ್ಗದರ್ಶಕವು ಎಂಬಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಇಷ್ಟೇ ಹೇಳಿ ಈ ಸತ್ಕೃತಿಯನ್ನು ಮನ್ನಿಸಬೇಕೆಂದು ಕನ್ನಡಿಗರಿಗೆ ಬಿನ್ನವಿಸುತ್ತೇನೆ.

ಬೆಳಗಾವಿ, ೩-೬-೩೬ — **ರಂ. ರಾ. ದಿವಾಕರ**

## ೨ನೆ ಮುದ್ರಣದ ಮುನ್ನುಡಿ

ಮೊದಲನೆ ಮುದ್ರಣವಾಗಿ ೯ ವರುಷಗಳಾಗಿ ಹೋದವು. ತತ್ವವಿಚಾರದಲ್ಲಿ ಯಾವ ಬದಲೂ ಮಾಡುವ ಪ್ರಸಂಗವಿಲ್ಲ. ಆದರೆ ೧೯೪೦ರಲ್ಲಿ ಪ್ರಕಟವಾದ ಮರಾಠೀ ಅನುವಾದವನ್ನು ನೋಡಿ ಮೂಲ ಲೇಖಕರು ಮಾಡಿದ ಹಲವು ಮಾರ್ಪಾಟುಗಳನ್ನು, ಬರೆದ ಹೆಚ್ಚಿನ ವಿಷಯವನ್ನು ಈ ಮುದ್ರಣದಲ್ಲಿ ಸೇರಿಸಿರುವೆ. ಅಲ್ಲದೆ ಪುಸ್ತಕವನ್ನು ಆಮೂಲಾಗ್ರವಾಗಿ ಪರಿಶೋಧಿಸಿ ಹೆಚ್ಚು ಸುಲಭ, ಸ್ಪಷ್ಟ, ಸರಳ ಆಗುವಂತೆ ಸಂಪಾದಿಸಿದ್ದೇನೆ. ಗಾಂಧೀ ವಿಚಾರಗಳನ್ನು ಸೂತ್ರರೂಪದಿಂದ ತಿಳಿದುಕೊಳ್ಳಲು ಇದು ಅಮೌಲಿಕ ಸಾಧನವಿಶೇಷವು.

೨೫-೧೧-೪೪ — **ರಂಗನಾಥ ದಿವಾಕರ**

# ಮೂರನೆಯ ಮುದ್ರಣಕ್ಕೆ ಎರಡು ಮಾತು

ಮಾನ್ಯ ದಿವಾಕರ ರಂಗರಾಯರು, ಮೊದಲನೆಯ ಆವೃತ್ತಿಯ ಪುಸ್ತಕವನ್ನು ಪರಿಶೋಧಿಸಿ ಶೈಲಿಯು ಹೆಚ್ಚು ಸುಲಭ, ಸ್ಪಷ್ಟ, ಸರಳ ಆಗುವಂತೆ ಸಂಪಾದಿಸಿರುವುದಾಗಿ ಎರಡನೆಯ ಮುದ್ರಣದ ಮುನ್ನುಡಿಯಲ್ಲಿ ಹೇಳಿದ್ದಾರೆ. ಮೊದಲನೆಯ ಆವೃತ್ತಿಯ ಶೈಲಿಯೊಳಗಿನ ದೋಷಗಳು ನುಸುಳಿಕೊಂಡು ಇನ್ನೂ ಕೆಲವು ಉಳಿದಿರುವುದಾಗಿ ತೋರಿದ್ದರಿಂದ ಮತ್ತೆ ಅನಿವಾರ್ಯವಾಗಿ ಅಲ್ಲಲ್ಲಿ ತಿದ್ದಬೇಕಾಯಿತು. ಹಾಗೆ ತಿದ್ದುವಾಗ ಪ್ರಾದೇಶಿಕ ಮತ್ತು ಕನ್ನಡೇತರ ಶೈಲಿಯನ್ನೂ ಪ್ರಯೋಗಗಳನ್ನೂ ಶಬ್ದಗಳನ್ನೂ ಬಿಟ್ಟುಕೊಟ್ಟು ಆ ಸ್ಥಳದಲ್ಲಿ ಕನ್ನಡದ ಶೈಲಿ, ಪ್ರಯೋಗಗಳು, ಶಬ್ದಗಳು, ಮುಂತಾದ್ದಕ್ಕೆ ಪ್ರಾಶಸ್ತ್ಯ ಕೊಟ್ಟಿದೆ. ಈ ಆವೃತ್ತಿಯ ಮುದ್ರಣದಲ್ಲಿ ಅನಿವಾರ್ಯವಾಗಿ ಕೆಲವೊಂದು ತಪ್ಪುಗಳು ಉಳಿದಿವೆ. ಓದುಗರಿಗೆ ಸುಲಭವಾಗಿ ತಿಳಿಯಬಹುದಾದವುಗಳನ್ನು ಬಿಟ್ಟುಕೊಟ್ಟು ಉಳಿದವುಗಳ ಒಪ್ಪೋಲೆಯನ್ನು ಕೆಳಗೆ ಕೊಟ್ಟಿದೆ.

ಪ್ರಕಾಶಕ

## ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೯ | ೨೦ | ಆಸ್ತೇಯ | ಅಸ್ತೇಯ |
| ೧೮ | ೪ | ಬಾರಕೋಲು | ಬಾರುಕೋಲು |
| ೧೮ | ೧೫ | ಕೋಡಬಳೆ | ಕೋಡುಬಳೆ |
| ೧೯ | ೪ | ಸ್ಥಿತಿಯಂದು | ಸ್ಥಿತಿಯೆಂದು |
| ೧೯ | ೧೭ | ದೊಡ್ಡವನಾಗಲಿ | ದೊಡ್ಡವರಾಗಲಿ |
| ೨೦ | ೭ | ಕಟ್ಟುನಿಟ್ಟು | ಕಟ್ಟುನಿಟ್ಟೂ |
| ೨೫ | ೭ | ಮೂಲ | ಮೂಲಕ |
| ೩೨ | ೨೬ | ಪಾಲಿಸುವನು | ಪಾಲಿಸುವವನು |
| ೩೫ | ೫ | ಒಳಪಟ್ಟವರು | ಒಳಪಟ್ಟವರು, |
| ೩೫ | ೭ | ಹುಟ್ಟಿದ್ದರಿಂದ | ಹುಟ್ಟಿದ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೪೭ | ೩ | ದ್ವೇಶವು | ದ್ವೇಷವು |
| ೪೮ | ೧೩ | ಸ್ವಲ್ಪವಾದರೂ | ಸ್ವಲ್ಪವಾದರೂ |
| ೫೪ | ೧-೨ | ಮಾಡಿದ ದೋಷಗಳಿಗಾಗಿ | ಮಾಡಿದ |
| ೫೪ | ೨ | ಪ್ರಾಶ್ಚಿತ್ತ | ಪ್ರಾಯಶ್ಚಿತ್ತ |
| ೫೫ | ೩ | ಪೀಡಿಸಲೂ | ಪೀಡಿಸಲು |
| ೫೮ | ೨೩ | ಭಾಗವನ್ನು | ಭಾಗವನ್ನೂ |
| ೬೫ | ೩೪ | ಇಂಗ್ಲಿಷ | ಇಂಗ್ಲಿಷ್ |
| ೭೪ | ೩೭ | ಯೋಜನೆ | ಯೋಜನೆ |
| ೭೫ | ೪ | ರಾಜ್ಯಶಾಸನವು ಮತ್ತು | ಮತ್ತು ರಾಜ್ಯಶಾಸನವು |
| ೭೬ | ೪ | ಜಾತಿಗಳಲ್ಲಿ ಐಕ್ಯ | ಜಾತಿಜಾತಿಗಳಲ್ಲಿ ಐಕ್ಯ |
| ೭೭ | ೭ | ದೂರಮಾಡುವುದು | ದೂರಮಾಡುವುದು, |
| ೮೨ | ೧೭ | ಆಶೆಯೆನ್ನಿಟ್ಟು | ಆಶೆಯನ್ನಿಟ್ಟು |
| ೮೨ | ೨೯ | ಮಂಡಲಗಳಿಗೇ. | ಈ ಮಂಡಲಗಳಿಗೇ. |
| ೮೮ | ೨೮ | ಲಕ್ಷಾಧಿಪತಿಗಳಾಗಲೂ | ಲಕ್ಷಾಧಿಪತಿಗಳಾಗಲು |
| ೮೮ | ೨೮ | ಜಮಿನಾನುದಾರರಾಗಲೂ | ಜಮಿನಾನುದಾರರಾಗಲು |
| ೯೧ | ೨ | ತಿಳಿದುಕೊಂಡು ಅದನ್ನು | ಅದನ್ನು |
| ೯೧ | ೩ | ಧರ್ಮವೆಂದು | ಧರ್ಮವೆಂದೂ |
| ೯೧ | ೯ | ತ್ರೀಮಂತ | ಶ್ರೀಮಂತ |
| ೯೫ | ೪ | ಸ್ಥಿತಿಗೆ ನಾವು | ಸ್ಥಿತಿಗೆ |
| ೯೬ | ೧೮ | ಪವೃತ್ತಿಗೆ | ಪ್ರವೃತ್ತಿಗೆ |
| ೧೦೭ | ೨೫ | ನಯಡೆಬಲ್ಲದು. | ನಡೆಯಬಲ್ಲದು |

೧೩೬ನೇ ಪುಟದಲ್ಲಿ ಆರಂಭವಾದ ಅಡಿಟಿಪ್ಪಣಿ ೧೩೭ನೇ ಪುಟದಲ್ಲಿ ಆರಂಭವಾಗಬೇಕು

| | | | |
|---|---|---|---|
| ೧೩೭ ಕೆಳಗಿನಿಂದ ೭ | | ಇಂತರವಿತ್ತು | ಅಂತರವಿತ್ತು |
| ೧೩೦ | ೧ | ಹೂರಡಬೇಕಾದರೆ | ಹೊರಡಬೇಕಾದರೆ |
| ೧೪೦ | ೧೦ | ಪಾಲಿಸತಕ್ಕದ್ದು: | ಪಾಲಿಸತಕ್ಕದ್ದು: |
| ೧೫೬ | ೧೪ | ಶೂಚನೀಯ | ಶೋಚನೀಯ |
| ೧೬೦ | ೧೯ | ವಿದಾರ್ಥಿಗಳ | ವಿದ್ಯಾರ್ಥಿಗಳ |

# ಗಾಂಧೀಜಿಯವರ ಒಪ್ಪಿಗೆ



ಈ ವಿಚಾರದೋಹನವನ್ನು ನಾನು ಓದಿ ಮುಗಿಸಿದ್ದೇನೆ. ಬಂಧು ಕಿಶೋರ್‌ಲಾಲರಿಗೆ ನನ್ನ ವಿಚಾರಗಳ ಅಸಾಧಾರಣ ವಾದ ಪರಿಚಯವಿದೆ. ಪರಿಚಯವಿರುವಂತೆಯೆ ಅವರ ಗ್ರಹಣ ಶಕ್ತಿಯೂ ಅಸಾಧಾರಣವಾಗಿದೆ. ಅತಃ ನಾನು ತೀರ ಕಡಿಮೆ ಸ್ಥಾನಗಳಲ್ಲಿ ತಿದ್ದುಪಡೆ ಮಾಡಬೇಕಾಯಿತು. ನಮ್ಮಿಬ್ಬರಲ್ಲಿ ಅನೇಕ ವಿಷಯಗಳನ್ನು ಕುರಿತು ವಿಚಾರಗಳ ಐಕ್ಯವಿರುವುದ ರಿಂದ, ಭಾಷೆಯು ಮಾತ್ರ ಬಂಧು ಕಿಶೋರ್‌ಲಾಲರದಾದರೂ ಪ್ರತಿಯೊಂದು ಪ್ರಕರಣಕ್ಕೆ ಒಪ್ಪಿಗೆಯನ್ನು ಕೊಡಲು ನನಗೆ ಯಾವ ಅಡ್ಡಿಯೂ ಎನಿಸಲಿಲ್ಲ. ಬಹಳ ವಿಷಯಗಳನ್ನು ಸ್ವಲ್ಪದರಲ್ಲಿ ಹೇಳಲು ಬಂಧು ಕಿಶೋರ್‌ಲಾಲರು ಸಮರ್ಥ ರಾಗಿದ್ದಾರೆ. ಇದೇ ಈ ದೋಹನದ ವೈಶಿಷ್ಟ್ಯ.

ಬೋರ್‌ಸದ್
೨೦–೫–೧೯೩೫

**ಮೋಹನದಾಸ ಕರ್ಮಚಂದ ಗಾಂಧಿ**

# ಶ್ರೀ. ಕಿಶೋರ್‌ಲಾಲರ ನಿವೇದನ

ವಿಲೆಪಾರ್ಲೆಯ ಗಾಂಧೀ ವಿದ್ಯಾಲಯವೆ ಈ ಚಿಕ್ಕ ಹೊತ್ತಿಗೆಯ ಉತ್ಪತ್ತಿಗೆ ನಿಮಿತ್ತ ಕಾರಣವು. ಹಳ್ಳಿಗಳಿಗೆ ಹೋಗಿ ಹಳ್ಳಿಗರ ಸೇವೆ ಮಾಡಲು ಬಯಸುವ ತರುಣರಿಗೋಸ್ಕರ ಈ ವಿದ್ಯಾಲಯದಲ್ಲಿ ಒಂದು ಶಿಕ್ಷಣವರ್ಗವು ತೆರೆಯಲ್ಪಟ್ಟಿತ್ತು. ಕೆಲವು ತಿಂಗಳ ಪಟ್ಟಿಗೆ ಈ ವಿದ್ಯಾಲಯದಲ್ಲಿ ಮಹಾರಾಷ್ಟ್ರೀಯ ವಿದ್ಯಾರ್ಥಿಗಳು ಹೆಚ್ಚಾಗಿ ಇದ್ದರು. ಗಾಂಧೀಜಿಯವರ ವಿಚಾರಗಳ ಪರಿಚಯವು ಗುಜರಾತಿನಲ್ಲಿದ್ದಷ್ಟು ಮಹಾರಾಷ್ಟ್ರದಲ್ಲಿಲ್ಲ. ಅತಃ ಈ ವಿದ್ಯಾಲಯದಲ್ಲಿ ' ಗಾಂಧೀಜಿಯವರ ಸಿದ್ಧಾಂತ ಹಾಗೂ ವಿಚಾರಗಳ ಪರಿಚಯ'ವೆಂಬ ವಿಷಯವೂ ಪಾಠಕ್ರಮದಲ್ಲಿತ್ತು. ಈ ವಿಷಯವನ್ನು ಹೇಳುವುದು ನನ್ನ ಪಾಲಿಗೆ ಬಂತು. ಈ ವಿಷಯನಿರೂಪಣೆಗಾಗಿ ನಾನು ಯಾವ ಸಿದ್ಧತೆ ಮಾಡಬೇಕಾಯಿತೊ ಅದರೊಳಗಿಂದಲೆ ಈ ಪುಸ್ತಕದ ಉತ್ಪತ್ತಿಯಾಗಿದೆ.

ಬಳಿಕ ಈ ಪುಸ್ತಕದ ವಿಷಯವನ್ನು ಕಾಕಾಸಾಹೇಬರ ಎದುರಿಗಿಟ್ಟೆ. ಅದು ಅವರ ಮನಸ್ಸಿಗೆ ಒಪ್ಪಿಗೆಯಾಯಿತು. ಅವರೊಡನೆ ಚರ್ಚೆ ಮಾಡುವಾಗ 'ಇದನ್ನು ಬರೆದರೆದಂತೆ ಇದರ ಪ್ರಕರಣಗಳನ್ನು ಗಾಂಧೀಜಿಯವರಿಗೆ ಕಳಿಸುತ್ತ ಹೋಗಬೇಕು. ಗಾಂಧೀಜಿಯವರು ಅವನ್ನು ಪರಿಶೀಲಿಸಿ ತಮ್ಮ ಪ್ರಮಾಣಭೂತ ಒಪ್ಪಿಗೆಯನ್ನು ಕೊಟ್ಟರೆ ಅವರ ವಿಚಾರಸರಣಿಯನ್ನು ಜನರೆದುರಿನಲ್ಲಿ ಸಾದರಪಡಿಸುವಂಥ ಒಂದು ಚಿಕ್ಕ ಪುಸ್ತಕವು ಸಿದ್ಧವಾಗುವುದು ' ಎಂದು ನಿಶ್ಚಯವಾಯಿತು.

ಗಾಂಧೀಜಿಯವರು ಇದಕ್ಕೆ ತಮ್ಮ ಒಪ್ಪಿಗೆಯನ್ನು ಕೊಟ್ಟರು. ಆದರೆ ದೇಶದ ಮತ್ತು ಪರದೇಶದ ಕಾರ್ಯಭಾರವು ಅವರ ಮೇಲೆ ವಿಶೇಷವಾಗಿದ್ದುದರಿಂದ ಎಲ್ಲ ಪ್ರಕರಣಗಳನ್ನೂ ಪರಿಶೀಲಿಸಲು ಅವರಿಗೆ ಸಮಯವು ಸಿಕ್ಕಲಿಲ್ಲ. ಅಲ್ಲದೆ ಅವರು ೧೯೩೨ ನೇ ಜನೇವರಿ ೪ಕ್ಕೆ ಸೆರೆಹಿಡಿಯಲ್ಪಟ್ಟರು. ಹೀಗಾಗಿ ಈ ಪುಸ್ತಕದ ಮೊದಲನೆಯ ಆವೃತ್ತಿಯನ್ನು ಅವರ ತಿದ್ದುಪಡೆ ಇಲ್ಲದೆ ಮುದ್ರಿಸಬೇಕಾಯಿತು. ಆದರೆ ಈಗ ಗಾಂಧೀಜಿಯವರು ಇದನ್ನು ಆಮೂಲಾಗ್ರವಾಗಿ ಪರಿಶೀಲಿಸಿರುವರಲ್ಲದೆ ತಿದ್ದುಪಡೆಯನ್ನು ಮಾಡಿದ್ದಾರೆಂದು ತಿಳಿಸಲು ಆನಂದವೂ ಸಂತೋಷವೂ ಆಗುತ್ತದೆ. ಅವರು ಮಾಡಿದ ಎಲ್ಲ ತಿದ್ದುಪಾಟುಗಳೂ ಇದರಲ್ಲಿ ಅಡಕವಾಗಿವೆಯೆಂದು ಹೇಳಲು

ಸಂದೇಹವೇನಿದೆ? ಪುನಃ ನಾನೂ ನನ್ನ ಗೆಳೆಯರೂ ಇನ್ನೊಂದು ಸಲ ಇದನ್ನು ನಿರೀಕ್ಷಿಸಿದೆವು, ಭಾಷೆಯಲ್ಲಿ ಮಾರ್ಪಾಟು ಮಾಡಿ ಹೊಸ ಪ್ರಕರಣ ಗಳನ್ನು ಜೋಡಿಸಿದೆವು; ಅಲ್ಲದೆ ಹಳೆಯ ಎಷ್ಟೋ ಪ್ರಕರಣಗಳನ್ನು ಮತ್ತೆ ಮೊದಲಿನಿಂದ ಬರೆದೆವು. ಆ ಮೇಲೆ ಅವೆಲ್ಲವುಗಳನ್ನೂ ಗಾಂಧೀಜಿಯವರು ಮತ್ತೊಮ್ಮೆ ನೋಡಿದ್ದಾರೆ.

ಈ ಪುಸ್ತಕದಲ್ಲಿ ಗಾಂಧೀಜಿಯವರ ಲೇಖನಗಳ ಉದ್ಧರಣವು ಸ್ವಲ್ಪವೇ ಇದೆ. ಆದುದರಿಂದ ಇದು ಅವರ ಭಾಷೆ ಹಾಗೂ ಶಬ್ದಗಳ ದೋಹನವೆಂದು ಎನ್ನಲಾಗುವುದಿಲ್ಲ. ಎಷ್ಟೋ ಜನಗಳಿಗೆ ಗಾಂಧೀಜಿಯವರ ಲೇಖನ ಗಳಲ್ಲಿ ಇವನ್ನು ತಾವು ಓದಿಯೆ ಇಲ್ಲವೆಂದೂ ಎನಿಸಬಹುದು. ವಾಸ್ತವಿಕ ವಾಗಿ ನಾನು ಗಾಂಧೀಜಿಯವರ ಹೃದಯವನ್ನೂ ವಿಚಾರಗಳನ್ನೂ ಯಾವ ರೀತಿಯಾಗಿ ಅರಿತುಕೊಂಡಿದ್ದೇನೊ ವಿಶೇಷತಃ ಅವನ್ನು ಆ ನನ್ನ ರೀತಿ ಮತ್ತು ನನ್ನ ಭಾಷೆಯಲ್ಲಿಯೆ ಈ ಪುಸ್ತಕದಲ್ಲಿ ಮಂಡಿಸಿದ್ದೇನೆ. ಆದ್ದರಿಂದ ಈ ಪುಸ್ತಕವು ಗಾಂಧೀಜಿಯವರಿಂದ ಪರಿಶೀಲಿಸಲ್ಪಟ್ಟಿದ್ದರೂ ಅವರ ಲೇಖನಗಳಷ್ಟೆ ಪ್ರಮಾಣಭೂತವಾದದ್ದೆಂದು ಎಣಿಸಲಾಗದು.

ಗಾಂಧೀಜಿಯವರ ಪ್ರೇರಣೆಯಿಂದ ಈ ಯುಗದಲ್ಲಿ ಎಷ್ಟೋ ಸಣ್ಣಪುಟ್ಟ ಸಂಸ್ಥೆಗಳು ಜನ್ಮತಾಳಿವೆ. ಅವುಗಳಲ್ಲಿ ಅನೇಕ ಕಾರ್ಯಕರ್ತರು ವಿವಿಧ ರಚನಾ ತ್ಮಕ ಪ್ರವೃತ್ತಿಗಳನ್ನೂ ಹುಟ್ಟಿಸಿದ್ದಾರೆ. ಅಲ್ಲದೆ ಆತ್ಮಶುದ್ಧಿಗಾಗಿಯೂ ಸ್ವರಾಜ್ಯಕ್ಕಾಗಿಯೂ ತಳಮಳಿಸುತ್ತಿರುವ ಬಹುಜನ ಸಮುದಾಯವು ಗಾಂಧೀಜಿಯವರ ವಿಚಾರಗಳನ್ನು ಅರಿತುಕೊಳ್ಳಲು ತವಕಪಡುತ್ತಿದೆ. ಇದು ಅಂಥವರಿಗೋಸ್ಕರ ಅನೇಕ ಬಗೆಯಿಂದ ಉಪಯೋಗಿಯೂ ಮಾರ್ಗ ದರ್ಶಕವೂ ಆಗುವಂಥ ಸಂಪೂರ್ಣ ಪ್ರಮಾಣಭೂತ ಪುಸ್ತಕವಾಗದಿದ್ದರೂ ಇಂದಿನ ಪ್ರಶ್ನೆ ಪ್ರಮೇಯಗಳನ್ನು ಕುರಿತು ಗಾಂಧಿಯವರ ವಿಚಾರಸರಣಿ ಯನ್ನು ಚನ್ನಾಗಿ ವ್ಯಕ್ತಮಾಡುವಂಥದ್ದೆಂದು ನಿರ್ವಿವಾದವಾಗಿ ಹೇಳ ಬಹುದು.

ಮೊದಲನೆಯ ಆವೃತ್ತಿಯು ಪ್ರಕಟವಾಗುವ ಮೊದಲೇ ಇದರ ಎರಡು ಖಂಡಗಳಿಗೆ 'ಗುಜರಾತೀ' ಪತ್ರಿಕೆಯ ವ್ಯವಸ್ಥಾಪಕರು ಅದರ 'ಗಾಂಧೀ ಸಂಚಿಕೆ'ಯಲ್ಲಿಯೂ 'ದೀಪಾವಳೀ ಸಂಚಿಕೆ'ಯಲ್ಲಿಯೂ ಸ್ಥಾನ ಕೊಟ್ಟು ಪುಸ್ತಕದ ಪ್ರಸಿದ್ಧಿಗೆ ಕೊಂಚ ನೆರವಾದರು. ಇದಕ್ಕಾಗಿ ನಾನು ಅವರಿಗೆ ಅಭಿನಂದನೆಗಳನ್ನು ಅರ್ಪಿಸುತ್ತೇನೆ.

ಶ್ರೀ ಗೋಕುಲಭಾಯಿ ಭಟ್ಟರು ಗಾಂಧೀವಿದ್ಯಾಲಯವನ್ನು ಪ್ರಾರಂಭಿಸಲು ಹಟ ತೊಡದಿದ್ದರೆ, ಕಾಕಾಜಿಯವರು ಅದಕ್ಕೆ ಆಗ್ರಹದ ಒತ್ತಾಯ ಮಾಡದಿದ್ದರೆ, ಈ ಪುಸ್ತಕದ ಕಲ್ಪನೆಯು ಕೂಡ ಹುಟ್ಟುತ್ತಿರಲಿಲ್ಲವೆನ್ನಬಹುದು. ಆದ್ದರಿಂದ ಇವರಿಬ್ಬರಿಗೂ, ನನಗೆ ಮೊದಲನೆಯ ಆವೃತ್ತಿಯ ಕಾಲಕ್ಕೆ ಅತ್ಯಂತ ಪ್ರೋತ್ಸಾಹನೆ ಕೊಟ್ಟ ಸ್ವಾಮೀ ಆನಂದರಿಗೂ ನಾನು ಋಣಿಯಾಗಿದ್ದೇನೆ. ಈ ಪುಸ್ತಕದ ಮೊದಲನೆಯ ಆವೃತ್ತಿಯನ್ನು ಮುದ್ರಿಸುವ ಹೊಣೆಯನ್ನು ಒಪ್ಪಿಕೊಂಡದ್ದಕ್ಕಾಗಿಯೂ ಎರಡನೆ ಆವೃತ್ತಿಯನ್ನು ಪ್ರಸಿದ್ಧಿಸಲು ನವಜೀವನ ಪ್ರಕಾಶನ ಮಂದಿರದವರಿಗೆ ಒಪ್ಪಿಸಿ ತಮ್ಮ ಉದಾರತೆಯನ್ನು ತೋರಿಸಿದ್ದಕ್ಕಾಗಿಯೂ ಬಂಧು ರಣಛೋಡ್‌ಜೀ ಮಿಶ್ರಿಯವರಿಗೆ ಋಣಿಯಾಗಿದ್ದೇನೆ.

ಗಾಂಧೀಜಿಯವರ ಲೇಖನಗಳಲ್ಲಿ ಇಲ್ಲದ್ದು ಎಷ್ಟೋ ಈ ಪುಸ್ತಕದಲ್ಲಿ ಇದೆಯೆಂದು ಎಷ್ಟೋ ಜನಗಳಿಗೆ ಎನಿಸುವುದು. ಇದು ಗಾಂಧೀಜಿಯವರ ಅಂತರಂಗದ ಮಂಡಳಿದಲ್ಲಿ ಆಗುತ್ತಿರುವ ಚರ್ಚೆಯೊಳಗಿನದೇ? – ಎಂದು ಯಾರಿಗಾದರೂ ಸಂದೇಹ ಬರಬಹುದು. ಆದರೆ ಹೀಗೇನೂ ಅಲ್ಲವೆಂದು ಇಲ್ಲಿ ಹೇಳಬಯಸುತ್ತೇನೆ. ಯಾವುದೇ ಸತ್ಪುರುಷರ ವಿಚಾರಗಳನ್ನು ಬರಿಯ ಅವರ ಪುಸ್ತಕಗಳ ಅಭ್ಯಾಸದಿಂದ ಸಂಪೂರ್ಣವಾಗಿ ತಿಳಿದುಕೊಳ್ಳಲಾಗುವುದಿಲ್ಲವೆಂದು ನನ್ನ ಮತ. ಇದಕ್ಕಾಗಿ ಅವರ ಸಹವಾಸ ಬೇಕು. ಸಹವಾಸವು ದೊರೆತ ಬಳಿಕ ಅವರ ಹೃದಯವನ್ನು ಅರಿತುಕೊಳ್ಳಲು ಮತ್ತು ಅವರ ಸಮಗ್ರ ವಿಚಾರಸರಣಿಯ ಮೂಲವನ್ನು ಕಂಡುಹಿಡಿಯಲು ಪ್ರಯತ್ನ ಬೇಕು. ಭೂಮಿತಿಯ ಒಂದು ಸಿದ್ಧಾಂತದಿಂದ ಹೇಗೆ ಅನೇಕ ಸಿದ್ಧಾಂತಗಳು ಗೊತ್ತಾಗುವವೊ ಹಾಗೆಯೆ ಒಮ್ಮೆ ಅವರ ವಿಚಾರಸರಣಿಯ ಮೂಲವು ಗೊತ್ತಾಯಿತೆಂದರೆ ಅವರ ಸಮಗ್ರ ವಿಚಾರದ ದೃಷ್ಟಿಯು ಗೊತ್ತಾಗುವುದು. ಗಾಂಧೀಜಿಯವರನ್ನು ನಾನು ಅರಿತದ್ದು ಈ ಮಾರ್ಗದಿಂದ. ನನಗೆ ಇದರಲ್ಲಿ ಸಫಲತೆಯು ಎಷ್ಟು ಸಿಕ್ಕಿದೆಯೆಂಬುದನ್ನು ಗಾಂಧೀಜಿಯವರೂ ನನ್ನಂತೆಯೆ ಅವರ ಜೊತೆಯಲ್ಲಿ ಇದ್ದವರೂ ಹೇಳಬಲ್ಲರು.

ಈ ಪುಸ್ತಕವನ್ನು ಬರೆಯಲು ನಾನು ಪಟ್ಟ ಪ್ರಯತ್ನದ ಮುಖಾಂತರವಾಗಿಯೆ ಗಾಂಧೀಜಿಯವರನ್ನು ಸ್ಪಷ್ಟವಾಗಿ ಕಂಡಿದ್ದೇನೆ. ಈ ಪ್ರಯತ್ನದಿಂದ ನನಗೆ ಲಾಭವಾಗಿದೆ. ಆದ್ದರಿಂದ ವಾಚಕರಿಗೂ ಇದು ಲಾಭದಾಯಕವಾಗುವುದೆಂದು ಆಶಿಸುತ್ತೇನೆ.

ಕೊನೆಯಲ್ಲಿ, ನಾನು ಯಾರ ವಿಚಾರಗಳ ದೋಹನವನ್ನು ಮಾಡಲು ಯತ್ನ ಮಾಡಿರುವೆನೊ ಯಾರ ಪ್ರೇಮ ಮತ್ತು ಸಮಾಗಮದಿಂದ ಸದಾ ಅನುಗ್ರಹೀತನಾಗಿರುವೆನೊ ಆ ಪೂಜ್ಯ ಬಾಪೂಜಿಯವರ ಚರಣಗಳಲ್ಲಿ ನಮ್ರತೆಯಿಂದ ವಂದಿಸುವೆನು.

-ಕಿಶೋರ್‌ಲಾಲ್ ಘ. ಮಶ್ರೂವಾಲಾ

# ಅನುವಾದಕರ ನಾಲ್ಕು ಮಾತು

ಮಹಾತ್ಮಾ ಗಾಂಧೀಜಿಯವರ ತಪಃಪ್ರಭಾವದಿಂದ ೧೯೩೨ರಲ್ಲಿ ಹಿಂದುಸ್ಥಾನದ ಸೆರೆಮನೆಗಳು ಸಾಧುಸತ್ಪುರುಷರ ಯೋಗಿತ್ಯಾಗಿಗಳ ಶಾಂತಿ ನಿಕೇತನಗಳಾದವು. ಇವುಗಳಲ್ಲಿ ಹೆಸರುವಾಸಿಯಾದುದು ಎರವಡಾ ಮಂದಿರವು. ಅದನ್ನು ಕಾಣುವ, ಹಾಗೂ ಅದರಲ್ಲಿ ಕೆಲವೊಂದು ಕಾಲ ವಾಸಿಸುವ ಸೌಭಾಗ್ಯವು ನನಗೆ ದೊರಕಿತು. ಅಲ್ಲಿ ಸಾಬರಮತಿಯ ಸತ್ಯಾಗ್ರಹಾಶ್ರಮದ ಕೆಲ ಸತ್ಯಾನ್ವೇಷಿಗಳ ದರ್ಶನ ಪರಿಚಯಗಳಾಗಿ ನಾನು ಗುಜರಾತೀ ಭಾಷೆಯನ್ನು ಕಲಿತೆನು. ಮಹಾತ್ಮಾಜಿಯವರ ನಗು ಹೇಗೊ ಹಾಗೆಯೆ ಅವರ ಭಾಷೆಯು ಕೂಡ ಅಷ್ಟು ಸರಳ, ಅಷ್ಟು ಮನೋಹರ. ಅವರು ತಮ್ಮ ಆಶ್ರಮವಾಸಿಗಳನ್ನು ಕುರಿತು ಬರೆದ ‘ ಮಂಗಲ ಪ್ರಭಾತ ’, ‘ ಆಶ್ರಮವಾಸೀ ಪ್ರತ್ಯೆ ’ ಎಂಬ ಪತ್ರಗಳ ಸಂಗ್ರಹವನ್ನು ಓದಿದೆನು. ಅವುಗಳಿಂದ ನನಗೆ ಒಂದು ಬಗೆಯ ಆನಂದವುಂಟಾಯಿತು. ಅಲ್ಲದೆ ಮಹಾತ್ಮರ ವಿಚಾರಗಳನ್ನು ಆಮೂಲಾಗ್ರವಾಗಿ ಓದಬೇಕು, ಅರಿತು ಕೊಂಡು ಆನಂದಹೊಂದಬೇಕು, ಮಹಾತ್ಮರ ವಿಚಾರಗಳನ್ನು ಸಂಪೂರ್ಣವಾಗಿ ಅರಿಯದ ನನ್ನ ಕನ್ನಡ ಬಂಧುಗಳಿಗೆ ತಿಳಿಸಿಕೊಡಬೇಕು ಎಂಬ ಹಂಬಲು ಹೆಚ್ಚಾಯಿತು. ಆದರೆ ಅವರ ವಿಚಾರಗಳೆಲ್ಲ ಒಂದೆಡೆ ಸಿಕ್ಕುವುದೆಲ್ಲಿ? ಗುಜರಾತೀ ಬಂಧುಗಳನ್ನು ವಿಚಾರಿಸಿದೆ. ನಾನು ಸೆರೆಮನೆಯಿಂದ ಹೊರಬಿದ್ದು ತವರೂರಿಗೆ ಬರುತ್ತಲೆ ಅವರು ಪ್ರಸ್ತುತ ಪುಸ್ತಕದ ಪ್ರಥಮ ಸಂಸ್ಕರಣದ ಪ್ರತಿಯೊಂದನ್ನು ಕಳಿಸಿಕೊಟ್ಟರು. ಅದನ್ನು ಅಭ್ಯಸಿಸುತ್ತ ಕನ್ನಡಕ್ಕೆ ಪರಿವರ್ತಿಸಿ ಮುಗಿಸುವಷ್ಟರಲ್ಲಿಯೆ ಎರಡನೆಯ ಆವೃತ್ತಿಯು ಹೊರಟಿತು. ಅದರಲ್ಲಿ ಗಾಂಧೀಜಿಯವರು ಅಲ್ಲಲ್ಲಿ ತಿದ್ದುಪಾಟುಗಳನ್ನು ಮಾಡಿ ಕೆಲವು ಹೊಸ ಪ್ರಕರಣಗಳನ್ನು ಜೋಡಿಸಿದ್ದರಿಂದ ಎರಡನೆ ಆವೃತ್ತಿಯು ಸುಮಾರು ನೂರು ಪುಟಗಳಷ್ಟು ಬೆಳೆದುಹೋದದ್ದರಿಂದಲೂ ಆದರಣೀಯ ದಿವಾಕರರು ನನ್ನ ಮೊದಲನೆಯ ಅನುವಾದವನ್ನು ನೋಡಿ ಕೆಲವು ಅಮೂಲ್ಯವಾದ ಸಲಹೆಗಳನ್ನು ಕೊಟ್ಟದ್ದರಿಂದಲೂ ಪುನಃ ಪುಸ್ತಕವನ್ನು ಮೊದಲಿನಿಂದ ಕೊನೆಯ ವರೆಗೂ ಅನುವಾದಿಸಬೇಕಾಗಿ ಬಂತು. ಇಲ್ಲದೆ ಹೋಗಿದ್ದರೆ ಈ ಪುಸ್ತಕವು ಕನ್ನಡಿಗರ ಕೈಸೇರಿ ಒಂದು ವರ್ಷದ ಮೇಲಾಗುತ್ತಿತ್ತು. ಇರಲಿ. ಗುಜರಾತಿಯಿಂದ ಕನ್ನಡಕ್ಕೆ ನಾನು

ಅನುವಾದಿಸಿದ ಮೊಟ್ಟಮೊದಲನೆಯ ಗ್ರಂಥವು ಇದಾಗಿರುವುದರಿಂದ ಅನು ವಾದದಲ್ಲಿಯೂ ಭಾಷೆಯಲ್ಲಿಯೂ ತಪ್ಪುಗಳಾಗಿರಲು ಸಾಕು. ಅವೆಲ್ಲವು ಗಳಿಗೂ ನಾನು ಹೊಣೆಗಾರನೆ ಹೊರತು ಮೂಲ ಲೇಖಕರಲ್ಲ. ಕರ್ನಾ ಟಕದ ಬುಧಸಂಕುಲವು ತಪ್ಪುಗಳನ್ನು ತೋರಿಸಿಕೊಟ್ಟರೆ ಮುಂದಿನ ಸಂಸ್ಕರಣದಲ್ಲಿ ತಿದ್ದಿಕೊಳ್ಳುವೆನು. ಅನುವಾದಿಸುವುದು ಹಗುರಾದ ಕಾರ್ಯ ವಲ್ಲ. ಅದರಲ್ಲಿಯೂ ಇಂಥ ಪುಸ್ತಕವನ್ನು ಅನುವಾದಿಸುವುದಂತೂ ಇನ್ನಷ್ಟು ಬಿಗಿಯಾದ ಕೆಲಸ. ಈ ಅನುವಾದದಲ್ಲಿ ನನಗೆಷ್ಟು ಸಫಲತೆಯು ಸಿಕ್ಕಿದೆ ಎಂಬುದನ್ನೂ ವಾಚಕರೆ ಹೇಳಬೇಕು.

ಈ ಕಾರ್ಯದಲ್ಲಿ ನನಗೆ ಅನೇಕರು ಅನೇಕ ರೀತಿಯಿಂದ ನೆರವಾದರು. ಅವರೆಲ್ಲರ ಉಪಕಾರವನ್ನು ಸ್ಮರಿಸಿ ಅವರಿಗೆ ಅಭಿನಂದನೆಗಳನ್ನು ಅರ್ಪಿಸು ವುದು ನನ್ನ ಕರ್ತವ್ಯ. ನನಗೆ ಗುಜರಾತಿಯನ್ನು ಕಲಿಸಿ, ಈ ಪುಸ್ತಕವನ್ನು ಕಳಿಸಿ ಕನ್ನಡಕ್ಕೆ ಪರಿವರ್ತಿಸಲು ಗುಜರಾತೀ ಬಂಧುಗಳು ಪ್ರೋತ್ಸಾಹಿಸಿ ದರು. ಶ್ರೀಮಾನ್ ಕಿಶೋರ್‌ಲಾಲ್ ಮಶ್ರುವಾಲಾರವರು ಈ ಅನುವಾದ ಕಾರ್ಯಕ್ಕೆ ಸಂತೋಷದಿಂದ ಒಪ್ಪಿಗೆ ಕೊಟ್ಟು ಕರುಣಿಸಿದರು. ಶ್ರೀಮಂತ ದೊಡ್ಡಮೇಟಿ ಅಂದಾನೆಪ್ಪನವರು ಅನುವಾದಕ್ಕೆ ಸಮಯವನ್ನು ಒದಗಿಸಿ ಕೊಟ್ಟು ಪುಸ್ತಕವನ್ನು ಬೇಗನೆ ಮುಗಿಸಲು ಪ್ರೀತಿಯಿಂದ ಒತ್ತಾಯಪಡಿಸಿ ದರು. ಶ್ರೀ. ಕರಮರಕರ ದತ್ತರಾಯರು ಅನೇಕ ಯೋಗ್ಯ ಸಲಹೆಗಳನ್ನು ಕೊಟ್ಟರು. ಸನ್ಮಾನನೀಯ ದಿವಾಕರ ರಂಗನಾಥರಾಯರು ನನ್ನ ಮೇಲಿನ ಪ್ರೀತಿಯಿಂದ ತಮ್ಮ ಅಮೂಲ್ಯ ಸಮಯವನ್ನು ವೆಚ್ಚಮಾಡಿ ಅನುವಾದ ವನ್ನು ತಿದ್ದಿ, ಸುಂದರವಾದ ಮುನ್ನುಡಿಯನ್ನು ಬರೆದುಕೊಟ್ಟು ಅನುಗ್ರಹಿ ಸಿದರು. ಈ ಬಗೆಯಿಂದ ನನಗೆ ನೆರವಾದ ಮಹನೀಯರುಗಳಿಗೆ ನನ್ನ ಕೃತಜ್ಞತಾಪೂರ್ವಕ ಅಭಿನಂದನೆಗಳು. ತನ್ನ ಓರ್ವ ವಿದ್ಯಾರ್ಥಿಯ ಮೇಲಿನ ಮಮತೆ ಮತ್ತು ಅಭಿಮಾನದಿಂದ ಈ ಪುಸ್ತಕವನ್ನು ಅಚ್ಚು ಹಾಕಿಸಿ ಪ್ರೋತ್ಸಾಹಿಸಿ ಕನ್ನಡನಾಡು ನುಡಿಯ ಸೇವೆಗಾಗಿ ನನ್ನನ್ನು ಅಣಿ ಮಾಡಿದ ನನ್ನ ಮಾತೃಸಂಸ್ಥೆಯಾದ ಕರ್ನಾಟಕ ಶಿಕ್ಷಣ ಸಮಿತಿಗೆ ನಾನು ಚಿರ ಋಣಿಯಾಗಿರುವೆನು.

ಜಕ್ಕಲಿ
೨೪—೪—೧೯೩೬

ಕನ್ನಡಿಗರ ಸೇವಕ
**ಗುರುನಾಥ ಜೋಶಿ**

# ಪರಿವಿಡಿ

# ಗಾಂಧೀ ವಿಚಾರದೋಹನ

## ಪ್ರಥಮ ಖಂಡ

## ಧರ್ಮ

### ೧ ಪರಮಾತ್ಮ

೧ ಪರಮಾತ್ಮನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವದೊಂದೇ ಮಾನವೀ ಜೀವನದ ಯೋಗ್ಯವಾದ ಗುರಿಯು. ಜೀವನದ ಉಳಿದ ಎಲ್ಲ ಕಾರ್ಯಕಲಾಪಗಳು ಈ ಗುರಿಯನ್ನು ಸಾಧಿಸುವದಕ್ಕಾಗಿಯೆ ಇರತಕ್ಕದ್ದು.

೨ ಈ ಗುರಿಗೆ ವಿರುದ್ಧವಿರುವ ಎಲ್ಲ ಪ್ರವೃತ್ತಿಗಳು ಸ್ಥೂಲದೃಷ್ಟಿಯಿಂದ ಎಷ್ಟೇ ಫಲವನ್ನು ಕೊಡುವಂತಹವೂ ಮನವನ್ನು ಸೆಳೆಯುವಂತಹವೂ ಲಾಭಕರವೂ ಎನಿಸಿದರೂ ಅವು ತ್ಯಾಜ್ಯವೆಂದೇ ತಿಳಿಯತಕ್ಕದ್ದು.

೩ ಈ ಗುರಿಗೆ ಸಾಧನೀಭೂತವಾಗಿರುವ ಪ್ರವೃತ್ತಿ ಹಾಗೂ ಕಾರ್ಯಗಳು ಎಷ್ಟೇ ಕಠಿಣ, ಸಂಕಟಮಯ, ಸ್ಥೂಲದೃಷ್ಟಿಯಿಂದ ಹಾನಿಕರವೆನಿಸಿದರೂ ಅವು ಅವಶ್ಯವಾಗಿ ಆಚರಿಸಲು ಯೋಗ್ಯವೆಂದು ತಿಳಿಯತಕ್ಕದ್ದು.

೪ ಪರಮಾತ್ಮಸ್ವರೂಪವು ವಾಙ್ಮನಕ್ಕಗೋಚರವು. ಅವನು ಅನಂತನೂ ಅನಾದಿಯೂ ಏಕರೂಪನೂ ವಿಶ್ವಕ್ಕೆ ಆತ್ಮರೂಪನೂ ಅಥವಾ ಆಧಾರ ರೂಪನೂ ಮತ್ತು ವಿಶ್ವದ ಕಾರಣನೂ ಇರುವನು. ಅವನು ಚಿನ್ಮಯನು ಅಥವಾ ಜ್ಞಾನಸ್ವರೂಪನು. ಅವನು ಮಾತ್ರ ಸನಾತನನು. ಅವನ ಹೊರ ತಾಗಿ ಉಳಿದುದೆಲ್ಲವೂ ನಶ್ವರವು. ಒಂದು ಚಿಕ್ಕ ಶಬ್ದದಿಂದ ಅವನನ್ನು ಅರಿತುಕೊಳ್ಳುವದಕ್ಕಾಗಿ ನಾವು ಅವನನ್ನು ಸತ್ಯ ಎಂದು ಸಂಬೋಧಿಸುವಾ.

೫ ಇಂತು ಪರಮಾತ್ಮನೇ ಸತ್ಯವು ಮತ್ತು ಸತ್ಯವೆ ಪರಮಾತ್ಮನು.

೬ ಈ ಜ್ಞಾನವು ಸತ್ಯರೂಪ ಪರಮಾತ್ಮನ ನಿರ್ಗುಣ ಸ್ವರೂಪವು.

೭ ನನಗೆ ಯಾವದು ಇವತ್ತು ಧರ್ಮವೂ ನ್ಯಾಯವೂ ಯೋಗ್ಯವೂ ಎಂದು ಎನಿಸುವದೊ, ಯಾವದನ್ನು ಮಾಡಲು, ಸ್ವೀಕರಿಸಲು ಮತ್ತು

ಪ್ರಕಟಿಸಲು ನಾಚಿಕೆಯಾಗುವದಿಲ್ಲವೊ, ಯಾವದನ್ನು ನಾನು ಮಾಡಲೇ ಬೇಕಾಗುವದೊ, ಯಾವುದನ್ನು ನಾನು ಮಾಡದಿದ್ದರೆ ಕತ್ತನ್ನೆತ್ತಿಕೊಂಡು ತಿರುಗಾಡಲಾರೆನೊ ಅದೇ ನನ್ನ ಮಟ್ಟಿಗೆ ಸತ್ಯವು. ಅದೇ ನನಗಾಗಿ ಪರಮಾತ್ಮನ ಸಗುಣ ಸ್ವರೂಪವು.

೮ ಸತ್ಯವನ್ನು ಎಡೆಬಿಡದೆ ಹುಡುಕಾಡುತ್ತಿರುವದು, ತಿಳಿದಷ್ಟು ಮಟ್ಟಿಗೆ ಅದನ್ನು ಸತತ ತನುಮನದಿಂದ ಕಾರ್ಯರಂಗಕ್ಕೆ ತರುವದು, ಇದೇ ಸತ್ಯದ ಆಗ್ರಹವು. ಇದು ಪರಮಾತ್ಮಸಾಕ್ಷಾತ್ಕಾರದ ಸಾಧನಪಥವು.

೯ ಸತ್ಯವು ಅನಂತವು ಹಾಗೂ ವಿಶ್ವವು ಅಪಾರವಾಗಿರುವದರಿಂದ ಈ ಸತ್ಯಶೋಧಕ್ಕೆ ಕೊನೆಯೇ ಇಲ್ಲ. ಈ ರೀತಿ ನೋಡಿದರೆ ಪರಮೇಶ್ವರನನ್ನು ಸಂಪೂರ್ಣವಾಗಿ ಸಾಕ್ಷಾತ್ಕರಿಸುವದು ಸಾಮಾನ್ಯತಃ ಸಾಧ್ಯವೆಂದೆನಿಸುವ ದಿಲ್ಲ. ಸಾಧಕನು ಈ ಮೂಲಕ ನಿರುತ್ಸಾಹಿಯಾಗಕೂಡದು; ಮತ್ತು ಅಪಾರನಾದ ಪರಮಾತ್ಮನನ್ನು ಬೇಕುಬೇಕಾದಲ್ಲಿ ಹುಡುಕುತ್ತ ಕುಳಿತು ಕೊಳ್ಳಕೂಡದು. ಆದರೆ ತನ್ನ ಜೀವನದಲ್ಲಿ ಮಾಡಬೇಕಾಗಿರುವ ಸಣ್ಣ ದೊಡ್ಡ, ಮಹತ್ವದ ಮತ್ತು ಕ್ಷುಲ್ಲಕ ಪ್ರವೃತ್ತಿಗಳಲ್ಲಿ ಹಾಗೂ ಕ್ರಿಯೆಗಳಲ್ಲಿಯೆ ಸತ್ಯವನ್ನು ಹುಡುಕಬೇಕು ಮತ್ತು ಸತ್ಯದ ಪ್ರಯೋಗಗಳನ್ನು ಮಾಡ ಬೇಕು. ಎಂದರೆ 'ಯಥಾ ಪಿಂಡೇ ತಥಾ ಬ್ರಹ್ಮಾಂಡೇ' ಎಂಬ ನ್ಯಾಯ ದಂತೆ ಅವನಿಗೆ ಸತ್ಯದ ಅನುಭವವು ಬರುತ್ತಹೋಗುವದು.

೧೦ ತನ್ನ ಸುತ್ತುಮುತ್ತಲು ನಡೆಯುತ್ತಿರುವ ಅನ್ಯಾಯ, ಅಸತ್ಯ, ಅಥವಾ ಅಧರ್ಮ ಇವುಗಳನ್ನು ಉದಾಸೀನವೃತ್ತಿಯಿಂದ ನೋಡುತ್ತಿರುವ ಮನುಷ್ಯನು ಸತ್ಯದ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಲಾರನು. ಆದ್ದರಿಂದ ಸತ್ಯಶೋಧಕನು ಅಸತ್ಯ, ಅನ್ಯಾಯ ಮತ್ತು ಅಧರ್ಮ ಇವುಗಳ ಸಂಪೂರ್ಣ ನಾಶವನ್ನು ಮಾಡಲು ಹೆಣಗುವನು ಮತ್ತು ಸತ್ಯಾದಿ ಸಾಧನಗಳಿಂದ ಇವು ಗಳನ್ನು ನಷ್ಟಪಡಿಸುವ ಕಾರ್ಯದಲ್ಲಿ ಯಶಸ್ಸು ಸಿಕ್ಕುವ ವರೆಗೆ ಸತ್ಯದ ಸಾಧ ನೆಯು ಅಪೂರ್ಣವೆಂದೆ ತಿಳಿಯುವನು. ಆದ್ದರಿಂದ ಅಸತ್ಯ, ಅನ್ಯಾಯ ಮತ್ತು ಅಧರ್ಮ ಇವುಗಳ ಪ್ರತಿಕಾರವು ಕೂಡ ಸತ್ಯಾಗ್ರಹದ ಅಂಗವೆ ಇರುವದು.

೧೧ ಅಸತ್ಯ ಹಿಂಸೆ ಮುಂತಾದವುಗಳಿಂದ ಯುಕ್ತವಾದ ಸಾಧನಗಳಿಂದ ಸತ್ಯದ ಸಾಕ್ಷಾತ್ಕಾರವು ಅಶಕ್ಯವೆಂದು ಎಲ್ಲ ಧರ್ಮಗಳು ಹೇಳುತ್ತವೆ, ಇತಿಹಾಸವು ಸಾಕ್ಷಿ ಕೊಡುತ್ತದೆ ಮತ್ತು ಅನುಭವವೂ ಹೀಗೆಯೆ ಇದೆ. ಅದೇ ರೀತಿ ಸಂಯಮ, ವ್ರತ, ಉಪಾಸನೆ ಮುಂತಾದ ಚಿತ್ತಶುದ್ಧಿಯ

ಮಾರ್ಗಗಳ ಹೊರತು ಸತ್ಯದ ಜ್ಞಾನವಾಗಲಾರದು. ಆದ್ದರಿಂದ ಇನ್ನು ಮುಂದೆ ಹೇಳಿದ ವ್ರತ ಮುಂತಾದವು ಪರಮಾತ್ಮನ ಸಾಕ್ಷಾತ್ಕಾರಕ್ಕೆ ಅತ್ಯವಶ್ಯವಾದ ಸಾಧನಗಳೆಂದು ಎಣಿಸಲ್ಪಟ್ಟಿವೆ.

## ೨ ಸತ್ಯ

೧ ಸತ್ಯವೆಂದರೆ ಪರಮಾತ್ಮನು. ಇದು ಸತ್ಯದ ಪರ ಅಥವಾ ಉಚ್ಚವಾದ ಅರ್ಥವಾಯಿತು. ಇದರ ಅಪರ ಅಥವಾ ಸಾಧಾರಣ ಅರ್ಥವು ಸತ್ಯವೆಂದರೆ ಸತ್ಯ ವಿಚಾರ, ಸತ್ಯ ಉಚ್ಚಾರ, ಮತ್ತು ಸತ್ಯ ಆಚಾರ ಎಂದಾಗುವದು.

೨ ದೂರದೃಷ್ಟಿಯಿಂದ ನೋಡಿದರೆ ಸತ್ಯವಿದ್ದುದೆ ಒಳಿತಾದುದೂ ಹಿತಕರವಾದುದೂ ಇರುವದು. ಆದುದರಿಂದ ಸತ್ಯ ಅಥವಾ|ಸತ್ ಇನ ಅರ್ಥವು ಒಳಿತು ಎಂದು ಆಗುವದು; ಯಾವ ಆಗ್ರಹವು, ವಿಚಾರವು, ಉಚ್ಚಾರವು ಮತ್ತು ಆಚಾರವು ಸತ್ಯವಿರುವದೊ ಅದೇ ಸದಾಗ್ರಹವು, ಸದ್ವಿಚಾರವು, ಸದ್ವಾಣಿಯು, ಸತ್ಕರ್ಮವು ಎನಿಸುವದು.

೩ ಯಾವ ಸತ್ಯ ಮತ್ತು ಸನಾತನ ನಿಯಮಗಳಿಂದ ವಿಶ್ವದ ಜಡ ಚೇತನ ಯಂತ್ರವು ನಡೆಯುವದೊ ಅದನ್ನು ಶೋಧಿಸುತ್ತಿರುವದು ಮತ್ತು ಅವುಗಳಂತೆ ತನ್ನ ಜೀವನವನ್ನು ಮಾರ್ಪಡಿಸುತ್ತಿರುವದು ಹಾಗೂ ಅಸತ್ಯವನ್ನು ಸತ್ಯಾದಿ ಸಾಧನಗಳಿಂದ ಪ್ರತಿಭಟಿಸುವದು ಸತ್ಯಾಗ್ರಹವೆನಿಸುವದು.

೪ ಕೊನೆಯವರೆಗೆ, ಇಲ್ಲವೆ ಕಲ್ಪಿಸಬಹುದಾದ ಆ ಆ ಪ್ರಸಂಗಗಳಲ್ಲಿ ಶಕ್ಯವಿದ್ದಷ್ಟು ಬಹುಕಾಲದ ವರೆಗೆ, ನಮ್ಮ ರಾಗದ್ವೇಷರಹಿತ, ನಿಷ್ಪಕ್ಷಪಾತಿಯಾದ, ಶ್ರದ್ಧಾಭಕ್ತಿಯುಕ್ತ ಬುದ್ಧಿಗೆ ಯೋಗ್ಯವೂ ನ್ಯಾಯವೂ ಎನಿಸಿದ ವಿಚಾರವೇ ನಮ್ಮ ಮಟ್ಟಿಗೆ ಸತ್ಯ ವಿಚಾರವು.

೫ ಹೇಳುವ ಕರ್ತವ್ಯವು ಒದಗಿದಾಗ ನಮಗೆ ಗೊತ್ತಿದ್ದ ಸಂಗತಿಯನ್ನು ಇದ್ದಕ್ಕಿದ್ದ ಹಾಗೆ ನುಡಿಯುವಂತಹ ವಾಣಿಯು, ಅದರಲ್ಲಿ ಬೇರೆ ಆಭಾಸವು ಹುಟ್ಟುವಂತೆ ಎಳ್ಳಷ್ಟು ಹೆಚ್ಚು-ಕಡಿಮೆ ಸಹ ಮಾಡಲು ಪ್ರಯತ್ನಿಸದಂತಹ ವಾಣಿಯು ಸತ್ಯ ವಾಣಿಯು, ಸತ್ಯ ಉಚ್ಚಾರವು.

೬ ವಿಚಾರದಿಂದ ಸತ್ಯವೆಂದೆನಿಸಿದುದನ್ನು ವಿವೇಕದಿಂದ ಆಚರಿಸುವದೆ ಸತ್ಕರ್ಮವು, ಸದಾಚಾರವು.

೭ ಪರಸತ್ಯವನ್ನು-ಪರಮಾತ್ಮನನ್ನು- ಅರಿತುಕೊಳ್ಳಲು ಅಪರಸತ್ಯವು

ಸಾಧನವಿರುವದೆಂದು ಎನ್ನಬಹುದು; ಅಥವಾ ಸತ್ಯ ವಿಚಾರ, ಸತ್ಯ ವಾಣಿ, ಮತ್ತು ಸತ್ಯ ಕರ್ಮ ಇವುಗಳ ಮೂಲಕ ಅಪರ ಸತ್ಯದ ಪಾಲನೆಮಾಡಿ ದೊರೆತ ಪೂರ್ಣ ಸಿದ್ಧಿಯೆ ಪರಮಾತ್ಮನ ಸಾಕ್ಷಾತ್ಕಾರವು ಎನ್ನಲು ಯಾವ ಅಡ್ಡಿಯೂ ಬಾರದು. ಸಾಧಕನ ಮಟ್ಟಿಗೆ ಇವೆರಡರಲ್ಲಿ ಭೇದವಿಲ್ಲ.

## ೩ ಅಹಿಂಸೆ

೧ ಸಾಮಾನ್ಯವಾಗಿ ಜನರು ಸತ್ಯವೆಂದರೆ ಸತ್ಯ ಮಾತಾಡುವದು ಎಂದು ಸ್ಥೂಲವಾಗಿ ತಿಳಿಯುವರು. ಆದರೆ ಬರೀ ಸತ್ಯ ನುಡಿಯುವದರಿಂದ ಸತ್ಯದ ಪೂರ್ಣ ಪಾಲನೆಯಾಗುವದಿಲ್ಲ. ಅದೇ ರೀತಿ ಸಾಮಾನ್ಯವಾಗಿ ಬೇರೆ ಜೀವವನ್ನು ಕೊಲ್ಲದಿರುವದೇ ಅಹಿಂಸೆ ಎಂದು ಜನರು ತಿಳಿಯುವರು. ಆದರೆ ಪ್ರಾಣವನ್ನು ತೆಗೆದುಕೊಳ್ಳದೆ ಇರುವದರಿಂದ ಮಾತ್ರ ಅಹಿಂಸೆಯ ಸಾಧನೆಯು ಪೂರ್ಣವಾಗುವದಿಲ್ಲ.

೨ ಅಹಿಂಸೆಯು ಬರೀ ಆಚರಿಸಲು ಬರುವಂತಹ ಒಂದು ಕೇವಲ ಸ್ಥೂಲವಾದ ನಿಯಮವಲ್ಲ. ಆದರೆ ಅದು ಮನಸ್ಸಿನ ಒಂದು ವೃತ್ತಿಯು. ಯಾವ ವೃತ್ತಿಯಲ್ಲಿ ದ್ವೇಷದ ಗಂಧವು ಕೂಡ ಇರುವದಿಲ್ಲವೋ ಅದೇ ಅಹಿಂಸೆಯು.

೩ ಇಂತಹ ಅಹಿಂಸೆಯು ಸತ್ಯದಷ್ಟೇ ವ್ಯಾಪಕವಿರುವದು. ಇಂತಹ ಅಹಿಂಸೆಯ ಸಿದ್ಧಿಯಾದ ಹೊರತು ಸತ್ಯದ ಸಿದ್ಧಿಯು ಆಗದು. ಆದ್ದರಿಂದ ಎರಡನೆ ದೃಷ್ಟಿಬಿಂದುವಿನಿಂದ ನೋಡಿದರೆ ಸತ್ಯವು ಅಹಿಂಸೆಯ ಪರಾಕಾಷ್ಠೆಯೆ ಇರುವದು. ಪೂರ್ಣ ಸತ್ಯ ಮತ್ತು ಪೂರ್ಣ ಅಹಿಂಸೆ ಇವುಗಳಲ್ಲಿ ಭೇದವಿಲ್ಲ. ಆದ್ದರಿಂದ ಅರಿತುಕೊಳ್ಳಲು ಅನುಕೂಲವಾಗಬೇಕೆಂದು ಸತ್ಯವು ಸಾಧ್ಯವೆಂದೂ ಅಹಿಂಸೆಯು ಸಾಧನವೆಂದೂ ಎಣಿಸಲಾಗಿದೆ.

೪ ಒಂದೇ ನಾಣ್ಯದ ಇಕ್ಕೆಲಗಳಂತೆ ಸತ್ಯ ಮತ್ತು ಅಹಿಂಸೆ ಇವು ಒಂದೇ ಸನಾತನ ವಸ್ತುವಿನ ಇಕ್ಕೆಲಗಳು ಇರುವವು.

೫ ಪರಮಾತ್ಮನು ಪ್ರೇಮಸ್ವರೂಪನಿರುವನೆಂದು ಅನೇಕ ಧರ್ಮಗಳಲ್ಲಿ ಹೇಳಿದೆ. ಆ ಪ್ರೇಮ ಮತ್ತು ಈ ಅಹಿಂಸೆ ಭಿನ್ನವಲ್ಲ.

೬ ಪ್ರೇಮದ ಶುದ್ಧ ವ್ಯಾಪಕ ಸ್ವರೂಪವೆ ಅಹಿಂಸೆಯು. ಯಾವ ಪ್ರೇಮದಲ್ಲಿ ಅನುರಾಗದ ಅಥವಾ ಮೋಹದ ಬೆರಿಕೆ ಇರುವದೊ ಅದು ಅಹಿಂಸೆಯಲ್ಲ. ರಾಗ–ಮೋಹಗಳಿದ್ದೆಡೆ ದ್ವೇಷದ ಬೀಜವು ಇದ್ದೇ ಇರುವದು.

ಪ್ರೇಮದಲ್ಲಿ ಬಹಳ ಸಲ ರಾಗದ್ವೇಷಗಳು ಕಂಡುಬರುವವು. ಆದುದರಿಂದ ತತ್ವಜ್ಞಾನಿಗಳು ಪ್ರೇಮ ಶಬ್ದವನ್ನು ಉಪಯೋಗಿಸದೆ ಅಹಿಂಸಾ ಶಬ್ದವನ್ನು ಯೋಜಿಸಿ ಅದನ್ನು ಪರಮಧರ್ಮವೆಂದು ಕರೆದಿರುವರು.

೭ ಎರಡನೆಯವರ ಶರೀರಕ್ಕೆ ಅಥವಾ ಮನಸ್ಸಿಗೆ ದುಃಖವನ್ನು ಅಥವಾ ನೋವನ್ನುಂಟುಮಾಡದಿರುವದಷ್ಟೇ ಅಹಿಂಸಾಧರ್ಮವಲ್ಲ. ಆದರೆ ಅದು ಅಹಿಂಸಾಧರ್ಮದ ಕಣ್ಣಿಗೆ ಕಾಣಿಸುವಂತಹ ಲಕ್ಷಣವೆಂದು ಸಾಮಾನ್ಯವಾಗಿ ಹೇಳಬಹುದು. ಯಾವದೊಂದು ಕರ್ಮದಿಂದ ಬೇರೆಯವರಿಗೆ ಸ್ಥೂಲ ದೃಷ್ಟಿಯಿಂದ ನೋಡಿದರೆ ನೋವಾಗುತ್ತಿರುವದೆಂಬ ಜ್ಞಾನವು ನಮಗೆ ಇದ್ದರೂ ನಾವು ಶುದ್ಧ ಅಹಿಂಸೆಯ ಪಾಲನೆಯನ್ನು ಮಾಡುತ್ತಿರುವದು ಶಕ್ಯವುಂಟು. ಆದರೆ ಇದಕ್ಕೆ ಪ್ರತಿಯಾಗಿ ದುಃಖವನ್ನು ಅಥವಾ ನೋವನ್ನುಂಟುಮಾಡಿದ ಆಕ್ಷೇಪಣೆಗೆ ನಾವು ಗುರಿಯಾಗದಿದ್ದರೂ ಹಿಂಸಾ ದೋಷಕ್ಕೆ ಪಾತ್ರರಾಗಬಹುದು. ಅಹಿಂಸಾವೃತ್ತಿಯು ಕಣ್ಣಿಗೆ ಕಾಣು ವಂತಹ ಪರಿಣಾಮದಲ್ಲಿಯೆ ಇರುವದೆಂದಲ್ಲ. ಆದರೆ ಅದು ಅಂತಃಕರಣದ ರಾಗದ್ವೇಷ ರಹಿತವಾದ ಸ್ಥಿತಿಯಲ್ಲಿ ಇರುವದು.

೮ ಆದಾಗ್ಯೂ ಕಣ್ಣಿಗೆ ಕಾಣುವಂತಹ ಪರಿಣಾಮಗಳ ಕಡೆಗೆ ನಾವು ದುರ್ಲಕ್ಷಮಾಡುವ ಹಾಗಿಲ್ಲ. ಏಕೆಂದರೆ ಅದು ಸ್ಥೂಲವಾದ ಸಾಧನ ವಿದ್ದರೂ ತನ್ನ ಅಥವಾ ಬೇರೆಯವರ ಹೃದಯದಲ್ಲಿ ಅಹಿಂಸಾವೃತ್ತಿಯು ಎಷ್ಟು ವಿಕಾಸಗೊಂಡಿರುವದು ಎಂಬುದು ಈ ಲಕ್ಷಣದಿಂದ ಸಾಧಾರಣವಾಗಿ ಗೊತ್ತಾಗುವದು. ಸಾಮಾನ್ಯ ಜೀವನದಲ್ಲಿ ಇತರ ಭೂತಪ್ರಾಣಿಗಳಿಗೆ ಉದ್ವೇಗವನ್ನುಂಟುಮಾಡುವಂತಹ ಎಷ್ಟು ಕರ್ಮ ಹಾಗೂ ವಾಣಿ ಕಂಡು ಬರುತ್ತದೊ ಅದರ ಮೇಲಿಂದ ಆ ಆ ಮನುಷ್ಯನಲ್ಲಿ ಅಹಿಂಸೆಯು ಅಷ್ಟು ವಿಕಾಸ ಹೊಂದಿರುವದು ಎನ್ನುವದನ್ನು ಪ್ರತ್ಯಕ್ಷವಾಗಿ ಗುರುತಿಸಲಿಕ್ಕಾಗು ವದು. ಅಹಿಂಸಾಮಯವಾದ ದುಃಖವನ್ನೀಯುವಂತಹ ಪ್ರಸಂಗವು ಅಪರೂಪವಾಗಿಯೆ ಬರುವದು; ಆದರೆ ಆಗ ಅವನಲ್ಲಿದ್ದ ಅಹಿಂಸೆಯು ಸ್ಪಷ್ಟವಾಗಿ ಗೋಚರವಾಗುವದು. ಸ್ವಾರ್ಥದ ಲೇಶಮಾತ್ರವಿದ್ದಲ್ಲಿ ಅಹಿಂಸೆಯಿರುವುದು ಅಸಂಭವನೀಯ.

೯ ಆದರೆ ಇಷ್ಟರಿಂದಲೆ ಅಹಿಂಸೆಯ ಸಾಧನೆಯು ಪೂರ್ಣವಾಯಿ ತೆಂದು ಭಾವಿಸಬಾರದು. ಅಹಿಂಸೆಯ ಸಾಧಕನು ಪ್ರಾಣಿಗಳಿಗೆ ಕೇವಲ ಉದ್ವೇಗವನ್ನು ಹುಟ್ಟಿಸುವಂತಹ ನುಡಿಯನ್ನಾಡದಿದ್ದರೆ ಅಥವಾ ಅಂತಹ

ಕೆಲಸವನ್ನು ಮಾಡದಿದ್ದರೆ ಮತ್ತು ಮನದಲ್ಲಿ ಭೂತಮಾತ್ರದ ವಿಷಯವಾಗಿ ದ್ವೇಷಭಾವನೆಯನ್ನು ಬರಗೊಡದಿದ್ದರೆ ತಾನು ಯಶಸ್ಸನ್ನು ಪಡೆದೆನೆಂದು ಸಂತೋಷಪಡಕೂಡದು; ಆದರೆ ಜಗತ್ತಿನಲ್ಲಿ ಪ್ರಚಲಿತವಿದ್ದ ದುಃಖ ಗಳನ್ನು ತಾನು ಅರಿತುಕೊಂಡು, ಅವುಗಳನ್ನು ಹೋಗಲಾಡಿಸುವ ಉಪಾಯಗಳನ್ನು ಸತತ ಯೋಜಿಸುತ್ತಿರಬೇಕು. ಅಹಿಂಸೆ ಎಂಬುದು ಕೇವಲ ನಿವೃತ್ತಿರೂಪ ಕರ್ಮವಲ್ಲ ಅಥವಾ ನಿಷ್ಕ್ರಿಯೆಯಲ್ಲ. ಅದು ಬಲವಾದ ಪ್ರವೃತ್ತಿಯೂ ಪ್ರಕ್ರಿಯೆಯೂ ಇರುವದು.

೧೦ ಅಹಿಂಸೆಯಲ್ಲಿ ಕಾರ್ಯವನ್ನು ಅತ್ಯಂತ ಬೇಗನೆ ಸಾಧಿಸುವ ಶಕ್ತಿಯಿದೆ. ಇದರಲ್ಲಿರುವ ಅಪಾರ ಶಕ್ತಿಯ ಸಂಪೂರ್ಣ ಸಂಶೋಧನೆಯು ಈ ವರೆಗೂ ಆಗಿಲ್ಲ. 'ಅಹಿಂಸೆಯ ಪ್ರಭಾವವು ವ್ಯಕ್ತವಾದಾಗ ಎಲ್ಲ ಕಪಟವೈರಗಳು ತಣ್ಣಗಾಗಿ ಹೋಗುತ್ತವೆ' ಎಂಬ ಸೂತ್ರವು ಪುಸ್ತಕ ದೊಳಗಿನ ಶಬ್ದಮಾತ್ರವಲ್ಲ; ಅದು ಋಷಿಗಳ ಅನುಭವವಾಕ್ಯವಿದೆ. ಈ ಶಕ್ತಿಯ ಸಂಪೂರ್ಣ ವಿಕಾಸವನ್ನು ಹೇಗೆ ಮಾಡಬೇಕು ಮತ್ತು ಸರ್ವಕಾರ್ಯ ಹಾಗೂ ಪ್ರಸಂಗಗಳಲ್ಲಿ ಹೇಗೆ ಆಚರಿಸಬೇಕು ಈ ಬಗೆಗೆ ಇನ್ನೂ ಪೂರ್ಣ ಪ್ರಯೋಗಗಳಾಗಿಲ್ಲ. ಹಿಂಸೆಯ ಮಾರ್ಗವನ್ನು ನಿಷ್ಕಂಟಕ ಮಾಡಲು ಜನರು ಎಷ್ಟು ದೀರ್ಘ ಉದ್ಯೋಗ ಮಾಡುವರೊ ಮತ್ತು ಅವುಗಳಿಗೆ ಶಾಸ್ತ್ರಸ್ವರೂಪವನ್ನು ತಂದುಕೊಡುವ ವಿಷಯದಲ್ಲಿ ಎಷ್ಟು ಯಶಸ್ಸನ್ನು ಪಡೆದಿರುವರೊ ಅಷ್ಟೇ ಉದ್ಯೋಗವನ್ನು ಅಹಿಂಸೆಯ ಶಕ್ತಿಯನ್ನು ಬೆಳೆಸುವ ಗೋಸುಗ ಮಾಡಿದರೆ, ಮನುಷ್ಯ ಜಾತಿಯ ದುಃಖಗಳ ನಿವಾರಣೆಗಾಗಿ ಎಂದೆಂದಿಗೂ ವ್ಯರ್ಥವಾಗದಂತಹ, ಉಭಯಪಕ್ಷಗಳ ಕಲ್ಯಾಣವಾಗು ವಂತಹ ಒಂದು ಅಮೂಲ್ಯ ಸಾಧನವು ಸಿದ್ಧವಾಗುವದು.

೧೧ ಯಾವ ಪ್ರಕಾರ ವಿಜ್ಞಾನಿಯು ಶ್ರದ್ಧೆ ಮತ್ತು ಉದ್ಯೋಗದಿಂದ ಸೃಷ್ಟಿಯ ಶಕ್ತಿಗಳ ಶೋಧನೆ ಮಾಡಿ ಅವುಗಳನ್ನು ನಾನಾ ರೀತಿಯಿಂದ ವ್ಯವಹಾರದಲ್ಲಿ ಉಪಯೋಗಿಸಲು ಪ್ರಯತ್ನಿಸುತ್ತಾನೊ ಅದೇ ರೀತಿಯ ಶ್ರದ್ಧೆ ಮತ್ತು ಉದ್ಯೋಗದಿಂದ ಅಹಿಂಸೆಯ ಶಕ್ತಿಯನ್ನು ಶೋಧಿಸುವದು ಮತ್ತು ಅದರ ನಿಯಮಗಳನ್ನು ವ್ಯವಹಾರದಲ್ಲಿ ತರುವದು ಅವಶ್ಯಕ.

## ೪ ಬ್ರಹ್ಮಚರ್ಯ

೧ ಯಾವ ಪ್ರಕಾರ ಅಹಿಂಸೆಯ ಹೊರತು ಸತ್ಯದ ಸಾಕ್ಷಾತ್ಕಾರ

ವಾಗುವ ಸಂಭವವಿಲ್ಲವೊ ಅದೇ ಪ್ರಕಾರ ಬ್ರಹ್ಮಚರ್ಯದ ಹೊರತು ಸತ್ಯದ ಹಾಗೂ ಅಹಿಂಸೆಯ ಪೂರ್ಣ ಆಚರಣವು ಅಶಕ್ಯ.

೨ ಬ್ರಹ್ಮಚರ್ಯವೆಂದರೆ ಬ್ರಹ್ಮನ ಅಥವಾ ಪರಮಾತ್ಮನ ಕಡೆಗೆ ಸಾಗುವದು. ಅರ್ಥಾತ್ ಪರಮಾತ್ಮನನ್ನು ಪಡೆಯುವ ಸಾಧನಮಾರ್ಗ ದಲ್ಲಿ ಇಂದ್ರಿಯ ಮನಗಳನ್ನು ತೊಡಗಿಸುವದು.

೩ ರಾಗಾದಿ ವಿಕಾರಗಳ ಹೊರತು ಅ–ಬ್ರಹ್ಮಚರ್ಯವು, ಎಂದರೆ ಇಂದ್ರಿಯ ಪರಾಯಣತೆಯು, ಸಂಭವಿಸಲಾರದು ಮತ್ತು ವಿಕಾರೀ ಮನು-ಷ್ಯನು ಸತ್ಯದ ಹಾಗೂ ಅಹಿಂಸೆಯ ಪೂರ್ಣ ಪಾಲನೆಯನ್ನು ಮಾಡ ಲಾರನು,ಅಧ್ಯಾತ್ಮಿಕ ಪೂರ್ಣತೆಯನ್ನು ಪಡೆಯಲಾರನು.

೪ ಆದುದರಿಂದ ಬ್ರಹ್ಮಚರ್ಯವೆಂದರೆ ಕೇವಲ ವೀರ್ಯರಕ್ಷಣೆ ಅಥವಾ ಕಾಮಜಯವಷ್ಟೇ ಅಲ್ಲ. ಬ್ರಹ್ಮಚರ್ಯಪಾಲನೆಯಲ್ಲಿ ಸರ್ವೇಂದ್ರಿಯಗಳ ಸಂಯಮ ಆವಶ್ಯಕ.

೫ ಸತ್ಯದ ಸ್ಥೂಲ ಅರ್ಥವು ಸತ್ಯವಾಣಿಯೆಂದೂ ಅಹಿಂಸೆಯ ಸ್ಥೂಲ ಅರ್ಥವು ಪ್ರಾಣವನ್ನು ತೆಗೆದುಕೊಳ್ಳದಿರುವದೆಂದೂ ಜನರು ತಿಳಿದಿರುವಂತೆ ಬ್ರಹ್ಮಚರ್ಯವೆಂದರೆ ಕಾಮಜಯವೆಂದು ಮಾತ್ರ ತಿಳಿದಿರುತ್ತಾರೆ. ಕಾಮ ಜಯವೆ ಕಠಿನತಮವಾದ ಇಂದ್ರಿಯಜಯವೆಂದು ಮನುಷ್ಯನಿಗೆ ಎನಿ ಸುತ್ತಿರುವದೆ ಇದಕ್ಕೆ ಕಾರಣವು.

೬ ವಾಸ್ತವಿಕವಾಗಿ ಅನ್ಯ ಇಂದ್ರಿಯಗಳ ಸ್ವಲ್ಪ ಭೋಗವಾದರೂ ಜೀವನವನ್ನು ಸುಖರೂಪವಾಗಿ ನಡೆಯಿಸಲು ಆವಶ್ಯಕವಿರುವದು. ಆದರೆ ಬ್ರಹ್ಮಚರ್ಯದಿಂದ ಜೀವನವು ಅಶಕ್ಯವಾಗುವದಿಲ್ಲ. ಇಷ್ಟೇ ಅಲ್ಲ, ಅದು ಚನ್ನಾಗಿಯೂ ತೇಜಸ್ವಿಯಾಗಿಯೂ ಸಾಗುವದು.

೭ ಜೀವನದ ಪೂರ್ಣತೆ ಮತ್ತು ಪರಮಾನಂದದ ಪ್ರಾಪ್ತಿ ಇವುಗಳನ್ನು ಪಡಕೊಳ್ಳಲು ಆಜೀವ ನೈಷ್ಠಿಕ ಬ್ರಹ್ಮಚಾರಿಗೆ ಯಾವ ಆಶೆ ಅನುಕೂಲತೆ ಗಳು ಇರುವವೊ ಅವು ಅ–ಬ್ರಹ್ಮಚಾರಿಗೆ ಇರುವದಿಲ್ಲ. ಇಂಥ ಸ್ತ್ರೀ ಪುರುಷರ ಜೀವನವು ಅವಿವಾಹಿತರಿಗೆ ಹಾಗೂ ವಿವಾಹಿತರಿಗೆ ಕೈದೀಪ ದಂತೆಯೆ ಇರುತ್ತದೆ.

೮ ಮನುಷ್ಯನು ಆಹಾರ ವಿಹಾರದಲ್ಲಿ ಅನ್ಯ ಪ್ರಾಣಿಗಳಿಗಿಂತ ಹೆಚ್ಚು ಸ್ವಾತಂತ್ರ್ಯವನ್ನು ಭೋಗಿಸುವನು. ಆದುದರಿಂದಲೆ ಅವನು ಸರ್ವ ವಿಷಯ ಗಳ ಭೋಗವನ್ನೂ ವಿಶೇಷವಾಗಿ ಮಾಡುವನು. ಈ ಮೂಲಕ ಅವನಿಗೆ

ಕಾಮದ ಉದ್ರೇಕವು ವರ್ಷದ ವಿಶಿಷ್ಟ ದಿನಗಳಲ್ಲಿ ಉಂಟಾಗದೆ ಅವನಲ್ಲಿ ಕಾಮವಿಕಾರವು ನಿರಂತರ ತೋರುವದು. ಇಂತು ಕಾಮವಿಕಾರವು ಅವನ ನಿರಂತರ ರೋಗವಾಗಿರುವದರಿಂದ ಅದನ್ನು ಜಯಿಸುವದು ಅತ್ಯಂತ ಕಠಿಣ ವಿಷಯವಾಗಿರುವದು.

೯ ಅನ್ಯ ಇಂದ್ರಿಯಗಳನ್ನು ಪೋಷಿಸದಿದ್ದರೆ ಕಾಮಕ್ಕೆ ಹೆಚ್ಚು ಪೋಷಣೆ ಸಿಕ್ಕುವದಿಲ್ಲವೆಂದೂ ಅನ್ಯ ಇಂದ್ರಿಯಗಳನ್ನು ಗೆದ್ದ ಹೊರತು ಕಾಮವನ್ನು ಗೆಲ್ಲುವ ಆಶೆ ಮಾಡುವದು ವ್ಯರ್ಥವೆಂದೂ ವಿಚಾರೀ ಪುರುಷನು ಅರಿತುಕೊಳ್ಳುವನು.

೧೦ ಈ ರೀತಿ ಪ್ರಯತ್ನಶೀಲರಾದ ಸ್ತ್ರೀಪುರುಷರಿಗೆ ಬ್ರಹ್ಮಚರ್ಯ ಪಾಲನೆಯು ಈಗ ಜನರು ತಿಳಿದಿರುವಷ್ಟು ಕಠಿಣವಿಲ್ಲ.

## ೫ ಅಸ್ವಾದ

ಈ ತೆರನಾಗಿ ಒಂದು ವ್ರತವು ಇನ್ನೊಂದರೊಳಗಿಂದ ಹುಟ್ಟುವದು.

೧ ಒಂದು ಇಂದ್ರಿಯವು ಸ್ವಚ್ಛಂದವಾದರೆ ಅದು ಇತರ ಇಂದ್ರಿಯಗಳ ಮೇಲಿನ ಹಿಡಿತವನ್ನು ಕೂಡ ಸಡಲಿಸಿಬಿಡುವದು. ಮೇಲಾಗಿ ಬ್ರಹ್ಮ ಚರ್ಯದ ದೃಷ್ಟಿಯಿಂದ ಎಲ್ಲ ಇಂದ್ರಿಯಗಳಿಗಿಂತಲೂ ಸ್ವಾದೇಂದ್ರಿಯವು ಗೆಲ್ಲಲು ಕಠಿಣವಾದದ್ದು ಮತ್ತು ಮಹತ್ವದ್ದು. ಇದರ ಕಡೆಗೆ ಚನ್ನಾಗಿ ಲಕ್ಷವಿರಬೇಕೆಂದು ವ್ರತಗಳಲ್ಲಿ ಸ್ವಾದಜಯಕ್ಕೆ ವಿಶಿಷ್ಟವಾದ ಸ್ಥಾನವು ಕೊಡಲ್ಪಟ್ಟಿರುವದು.

೨ ಶರೀರದೊಳಗಿನ ಸವೆದು ಹೋಗುತ್ತಲಿರುವ ತತ್ವಗಳನ್ನು ಪುನಃ ಪೂರೈಸಲಿಕ್ಕೂ ಕೆಲಸ ಮಾಡುವಂತಹ ಸ್ಥಿತಿಯಲ್ಲಿ ದೇಹವನ್ನು ಇಡುವ ದಕ್ಕೂ ಆಹಾರದ ಅವಶ್ಯಕತೆಯು ಇರುವದು. ಆದ್ದರಿಂದ ಎದುರಿಗೆ ಇದೇ ಉದ್ದೇಶವನ್ನಿಟ್ಟುಕೊಂಡು ಯಾವ ತರದ ಆಹಾರವು ಎಷ್ಟು ಆವಶ್ಯಕ ವಿರುವದೋ ಅದನ್ನು ಅಷ್ಟೇ ಸೇವಿಸಬೇಕು. ಸ್ವಾದದ ಸಲುವಾಗಿ– ನಾಲಿಗೆಯು ಬೇಡುವದೆಂದು–ಏನನ್ನಾದರೂ ಉಣ್ಣುವದು ಅಥವಾ ರುಚಿ ಗಾಗಿ ಆಹಾರದಲ್ಲಿ ಏನನ್ನಾದರೂ ಕೂಡಿಸುವದು ಅಥವಾ ಹೆಚ್ಚು ಆಹಾರ ವನ್ನು ತೆಗೆದುಕೊಳ್ಳುವದು ಅಸ್ವಾದವ್ರತಕ್ಕೆ ಭಂಗವನ್ನು ತರುವದು.

೩ ಅಸ್ವಾದವ್ರತವನ್ನು ಆಚರಿಸುತ್ತಿರುವಾಗ ಆ ವೃತ್ತಿಯಿಂದ ಆಹಾರ ವನ್ನು ಸಿದ್ಧಪಡಿಸುತ್ತಿರುವ ಅಡಿಗೆಯ ಮನೆಗೆ ಹೋಗಿ ಅಲ್ಲಿ ಸಿದ್ಧವಾದ

ಆಹಾರದೊಳಗಿಂದ ನಾವು ಬಿಟ್ಟುಕೊಡದೆ ಇದ್ದ ಆಹಾರವನ್ನು ತೆಗೆದು ಕೊಂಡು, ಅದು ಪರಮಾತ್ಮನ ಅನುಗ್ರಹವೆಂದು ಭಾವಿಸಿ, ಮನಸ್ಸಿನಲ್ಲಿ ಕೂಡ ಟೀಕೆ ಮಾಡದೆ ಸಂತೋಷಪೂರ್ವಕವಾಗಿ ಹಾಗೂ ಶರೀರಕ್ಕೆ ಅವಶ್ಯ ವಿದ್ದಷ್ಟು ಮಾತ್ರ ಉಣ್ಣುವದು ಅಸ್ವಾದವ್ರತಕ್ಕೆ ಹೆಚ್ಚು ಸಹಾಯ ವನ್ನೀಯುವದು.

## ೬ ಅಸ್ತೇಯ

೧ ಅಸ್ತೇಯವೆಂದರೆ ಅನ್ಯರ ಒಡೆತನದ ವಸ್ತುವನ್ನು ತೆಗೆದುಕೊಳ್ಳ ದಿರುವವದಷ್ಟೇ ಅಲ್ಲ; ತನ್ನದೆಂದು ಎಣಿಸಲ್ಪಟ್ಟದ್ದರೂ ತನಗೆ ಅವಶ್ಯವಿಲ್ಲದ ವಸ್ತುವನ್ನು ಉಪಯೋಗಿಸುವದು ಕೂಡ ಕಳ್ಳತನವೇ ಸೈ. ಅನ್ಯರ ಒಡವೆ ಗಳ ಮೇಲೆ ಲೋಭದೃಷ್ಟಿಯನ್ನಿಡುವದು ಮಾನಸಿಕ ಕಳ್ಳತನವೆನಿಸುವದು. ಅನ್ಯರ ವಿಚಾರವನ್ನು ಅಥವಾ ಶೋಧವನ್ನು ಅರಿತುಕೊಂಡು ಅದು ತನ್ನ ದೆಂದು ಹೇಳುವದು ಕೂಡ ವಿಚಾರದ ಕಳ್ಳತನವೇ ಇರುವದು.

೨ ಜಗತ್ತಿನೊಳಗಿನ ಎಲ್ಲ ವಸ್ತುಗಳು ಪರಮಾತ್ಮನ ಒಡೆತನಕ್ಕೆ ಒಳ ಪಟ್ಟವೆಂದು ನಾವು ಭಾವಿಸಬೇಕು. ಪ್ರಾಣಿಮಾತ್ರವೆಲ್ಲವೂ ಅವನ ಸರ್ವಾಧಿ ಕಾರಕ್ಕೊಳಗಾದ ವಿಶಾಲ ಕುಟುಂಬವೆಂದು ಭಾವಿಸಬೇಕು. ಎಂದರೆ ಮಾತ್ರ ಜಗತ್ತಿನೊಳಗಿನ ಎಲ್ಲ ಅವಶ್ಯ ವಸ್ತುಗಳ ಉಪಭೋಗವನ್ನು ಮಾಡಲು ನಮಗೆ ಅಧಿಕಾರವು ಉಂಟಾಗುವದು. ಅವುಗಳ ಮೇಲೆ ತನ್ನ ಅಧಿಕಾರವು ಇದಕ್ಕಿಂತ ಅಧಿಕವಿರುವದೆಂದು ತಿಳಿಯುವದು ಸಹ ಕಳ್ಳತನವು.

## ೭ ಅಪರಿಗ್ರಹ

೧ ಅಸ್ತೇಯ ಮತ್ತು ಅಪರಿಗ್ರಹ ಇವುಗಳ ನಡುವೆ ಬಹು ಅಲ್ಪ ಭೇದ ವಿರುವದು. ತನಗೆ ಇವತ್ತು ಅಗತ್ಯವಿಲ್ಲದ ವಸ್ತುವು ನಾಳೆ ಬೇಕಾಗುವ ದೆಂದು ಅಥವಾ ಮುಂದೆ ಬೇಕಾಗುವದೆಂದು ಯೋಚಿಸಿ ಅದನ್ನು ಸಂಗ್ರ ಹಿಸಿ ಇಡುವದು ಪರಿಗ್ರಹವೆನಿಸುವದು. ಪರಮಾತ್ಮನನ್ನು ನೆಚ್ಚಿದವನು ಅತ್ಯಂತ ಆವಶ್ಯಕವಿದ್ದ ವಸ್ತುಗಳನ್ನು ಅತ್ಯಂತ ಅವಶ್ಯಕತೆಯುಂಟಾದಾಗ ಪರಮಾತ್ಮನು ತಾನೇ ಒದಗಿಸಿಕೊಡುವನೆಂದು ತಿಳಿದುಕೊಳ್ಳುವನು. ಆದುದರಿಂದಲೆ ಅವನು ಯಾವ ವಸ್ತುವನ್ನೂ ಸಂಗ್ರಹಿಸಿಡುವ ಗೊಂದಲ ದಲ್ಲಿ ಬೀಳುವದಿಲ್ಲ.

೨ ಶಕ್ತಿಯಿದ್ದರೂ ಕೆಲಸಮಾಡದಿರುವವನ ಆವಶ್ಯಕತೆಗಳನ್ನೂ ಪರಮಾತ್ಮನು ಪೂರೈಸಿಕೊಡುವನೆಂದು ಇದರ ಅರ್ಥವಲ್ಲ. ಶ್ರಮವನ್ನು ಮಾಡಲು ಮುಂದಾಗದಿರುವವನು ಅಥವಾ ಶ್ರಮವು ಒಂದು ದೊಡ್ಡ ಕುತ್ತೆಂದು ಭಾವಿಸುವವನು ತನಗೆ ಪರಮಾತ್ಮನು ಆವಶ್ಯವಿದ್ದ ವಸ್ತುಗಳನ್ನು ಒದಗಿಸಿಕೊಡುವನೆಂಬುದನ್ನು ನಂಬದೆ ತನ್ನ ಪರಿಗ್ರಹಶಕ್ತಿಯನ್ನೇ ಅವಲಂಬಿಸುವನು. ಆದರೆ ಬಲವಿರುವ ವರೆಗೆ ಪೂರ್ಣಶ್ರಮವನ್ನು ಮಾಡುವವನ ಹಾಗೂ ಶ್ರಮ ಮಾಡುವದರಲ್ಲಿ ಸ್ವಾಭಿಮಾನವೂ ಪ್ರತಿಷ್ಠೆಯೂ ಇರುವದೆಂದು ಅರಿಯುವವನ ಮತ್ತು ವಸ್ತುಗಳನ್ನು ಸಂಗ್ರಹಿಸಿ ಇಡುವ ಗೋಜಿಗೆ ಹೋಗದವನ ನಿರ್ವಾಹದ ಚಿಂತೆಯನ್ನು ಪರಮಾತ್ಮನೆ ಮಾಡುವನು.

೩ ಆದರೆ ಸಮಾಜದಲ್ಲಿದ್ದುಕೊಂಡು ಅಪರಿಗ್ರಹ ವ್ರತದ ಪಾಲನೆಯನ್ನು ಮಾಡಲು ಬಯಸುವಂತಹ ಮನುಷ್ಯನು ತನ್ನ ಕಡೆಗೆ ಇರುವ ಮತ್ತು ಬರುವ ವಸ್ತುಗಳನ್ನು ಬೀದಿಯ ಮೇಲೆ ಬಿಸುಡಬೇಕೆಂದು ಇಲ್ಲವೆ ಅವನ್ನು ಕೆಡಗೊಡಬೇಕೆಂದು ಇದರ ಅರ್ಥವಾಗುವದಿಲ್ಲ. ತಾನು ಆ ವಸ್ತುಗಳ ಸಂರಕ್ಷಕನಿರುವನೆಂದು ತಿಳಿದುಕೊಂಡು ಅವುಗಳನ್ನು ಅವನು ಚನ್ನಾಗಿ ಜೋಪಾನದಿಂದ ಇಡಬೇಕು. ಆದರೆ ಒಂದು ನಿಮಿಷವಾದರೂ ತಾನು ಅವುಗಳ ಒಡೆಯನೆಂದು ಭಾವಿಸಕೂಡದು. ಆ ವಸ್ತುಗಳು ಯಾರಿಗೆ ಅತ್ಯಂತ ಆವಶ್ಯಕವಿರುವವೊ ಅವರಿಗೆ ಉಪಯೋಗಿಸಲು ಅವುಗಳನ್ನು ಯಾವುದೇ ಅಡ್ಡಿಯಿಲ್ಲದೆ ಕೊಡಬೇಕು. ತನ್ನ ಅಥವಾ ತನ್ನ ಮಕ್ಕಳುಮರಿಗಳ ಉಪಯೋಗಕ್ಕೆ ಬರುವದೆಂದು ಭಾವಿಸಿ ಒಂದು ಚಿಂದೆಯನ್ನು ಕೂಡ ಕಟ್ಟಿಡುವಂತಹ ಹಾಗೂ ಬೇರೆಯವರಿಗೆ ಅವು ಅತ್ಯಂತ ಅವಶ್ಯವಿದ್ದರೂ ಅವನ್ನು ಅನ್ಯರಿಗೆ ಕೊಡದಿರುವಂತಹ ಮನುಷ್ಯನು ಪರಿಗ್ರಹಿಯು ಇರುವನು. ಇಂತಹ ವೃತ್ತಿಯಿಲ್ಲದ ಮನುಷ್ಯನು ಲಕ್ಷಗಟ್ಟಲೆ ರೂಪಾಯಿಗಳ ಒಡೆಯನಾಗಿದ್ದರೂ ಅವನು ಅಪರಿಗ್ರಹಿಯು.

## ೮ ಶಾರೀರಿಕ ಶ್ರಮ

೧ ಜೀವನಕ್ಕೆ ಅವಶ್ಯವಿದ್ದ ಪದಾರ್ಥಗಳನ್ನು ಉತ್ಪನ್ನ ಮಾಡಲು ಸ್ವತಃ ಶಾರೀರಿಕ ಶ್ರಮವನ್ನು ಮಾಡತಕ್ಕದ್ದು ಎಂಬ ನಿಯಮವು ಅಸ್ತೇಯ ಮತ್ತು ಅಪರಿಗ್ರಹ ಇವೆರಡು ತತ್ವಗಳಿಂದ ಸಹಜವಾಗಿಯೆ ಹೊರಡುವದು.

ಪರಿಶ್ರಮವನ್ನು ಮಾಡಿದ ವಿನಃ ಯಾವ ಪದಾರ್ಥಗಳು ಹುಟ್ಟುವದಿಲ್ಲವೊ ಮತ್ತು ಯಾವ ಪದಾರ್ಥಗಳ ವಿನಃ ಜೀವನನಿರ್ವಾಹವು ಸಾಗುವದಿಲ್ಲವೊ ಅವುಗಳ ಉತ್ಪನ್ನಕ್ಕಾಗಿ ಸ್ವತಃ ಶಾರೀರಿಕ ಶ್ರಮವನ್ನು ಮಾಡದೆ ಅವುಗಳ ಉಪಭೋಗ ಮಾಡಿದರೆ ನಾವು ಕಳ್ಳರೆಂದೆನಿಸುವೆವು.

೨ ಇಂತಹ ಪರಿಶ್ರಮವನ್ನು ಪಾರಮಾರ್ಥಿಕ ಭಾವನೆಯಿಂದ ಮಾಡುವದೆ ಯಜ್ಞವೆಂದೆನಿಸುವದು. ತಾನು ಮಾಡಿದ ಶಾರೀರಿಕ ಶ್ರಮದಿಂದ ಉತ್ಪನ್ನವಾದ ಪದಾರ್ಥಗಳ ಉಪಭೋಗವನ್ನು ತಾನೇ ಮಾಡಬೇಕೆಂದು ಅಭಿಲಾಷೆಗೊಂಡರೆ ಅದಕ್ಕೆ ಸಕಾಮ ಕರ್ಮವೆಂದೆನ್ನುವರು. ಆ ಅಭಿಲಾಷೆಯನ್ನು ತೊರೆದು ಇಷ್ಟು ಪದಾರ್ಥಗಳು ಜಗತ್ತಿನ ಸಲುವಾಗಿ ಉತ್ಪನ್ನವಾಗಲೇಬೇಕೆಂದು ಅವುಗಳಿಗಾಗಿ ಪರಿಶ್ರಮವನ್ನು ಮಾಡಿದರೆ ಅದು ನಿಷ್ಕಾಮ ಕರ್ಮವಾಗುವದು. ಅದೇ ಯಜ್ಞವು.

೩ ಕಸಕಡ್ಡಿ ಮುಂತಾದ ಹೊಲಸು ಹಾಗೂ ಹಾನಿಕರವಾದ ಪದಾರ್ಥಗಳ ಯೋಗ್ಯ ವ್ಯವಸ್ಥೆಗಾಗಿ ಮಾಡಿದ ಪರಿಶ್ರಮವು ಕೂಡ ಯಜ್ಞದ ಒಂದು ಪ್ರಕಾರವೇ ಎನಿಸುವದು. ಇಂತಹ ಪರಿಶ್ರಮವನ್ನು ಪ್ರತಿಯೊಬ್ಬನೂ ಮಾಡತಕ್ಕದ್ದು.

೪ ಈ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ಸುಶಿಕ್ಷಿತರಾದ ನಾವು ನಮ್ಮ ಶಾರೀರಿಕ ಶ್ರಮದಿಂದ ಉತ್ಪನ್ನ ಮಾಡಬಲ್ಲ ಪದಾರ್ಥಗಳಿಗಿಂತ ಹೆಚ್ಚು ಪದಾರ್ಥಗಳನ್ನು ಉಪಭೋಗಿಸುವೆವು. ಅಲ್ಲದೆ ನಿರರ್ಥಕವಾಗಿ ಸಂಗ್ರಹಿಸಿ ಇಡುವೆವು. ಅನರ್ಥಕಾರಿಯಾದ ವಸ್ತುಗಳ ಯೋಗ್ಯ ವ್ಯವಸ್ಥೆಗಾಗಿ ಕೂಡ ನಾವು ಅಪರೂಪವಾಗಿ ದುಡಿಯುವೆವು. ಇದರಿಂದ ಅನೇಕ ಪ್ರಾಣಿಗಳಿಗೆ ಕೊರತೆಯುಂಟಾಗಿ ಅವು ಬೇನೆಯಿಂದ ಬಳಲಬೇಕಾಗುವದು. ಇದರಿಂದ ನಾವು ಕ್ಷಣಕ್ಷಣಕ್ಕೆ ಅಸ್ತೇಯ ಮತ್ತು ಅಪರಿಗ್ರಹ ವ್ರತದ ಭಂಗವನ್ನು ಮಾಡಿದಂತಾಗುವದು.

೫ ಆದ್ದರಿಂದ ನಮ್ಮ ಆವಶ್ಯಕತೆಗಳನ್ನೂ ಪರಿಗ್ರಹವನ್ನೂ ಸಾಧ್ಯವಾದಷ್ಟು ಕಡಿಮೆ ಮಾಡುವದು ಮತ್ತು ಉತ್ಪಾದಕ ಶ್ರಮಕ್ಕಾಗಿಯೂ ಹಾನಿಕರವಾದ ಪದಾರ್ಥಗಳ ಯೋಗ್ಯ ವ್ಯವಸ್ಥೆಗಾಗಿಯೂ ಫಲಾಪೇಕ್ಷೆ ಇಲ್ಲದೆ ಯಜ್ಞಬುದ್ಧಿಯಿಂದ ನಿಯಮಿತವಾಗಿ ಕೆಲಸ ಮಾಡುವದು ಅಸ್ತೇಯಾದಿ ವ್ರತಗಳಿಗೆ ಸಹಾಯಕವಾಗುವದು.

೬ ಈ ದೃಷ್ಟಿಯಿಂದ ಇಂದಿನ ಭರತವರ್ಷದ ಸ್ಥಿತಿಯನ್ನು ನೋಡಿ

ನೂಲುವದೂ ಮಲಮೂತ್ರವನ್ನು ಸ್ವಚ್ಛಮಾಡಿ ಅದರ ಯೋಗ್ಯ ವ್ಯವಸ್ಥೆ ಯನ್ನು ಮಾಡುವದೂ ಸತ್ಯಾಗ್ರಹ ಆಶ್ರಮದಲ್ಲಿ ಯಜ್ಞಕರ್ಮಗಳೆಂದು ಎಣಿಸಲ್ಪಟ್ಟಿವೆ. ಇವುಗಳನ್ನು ಕುರಿತು ಮುಂದೆ ಹೆಚ್ಚು ಯೋಚಿಸಲಾಗಿದೆ.

## ೯ ಸ್ವದೇಶಿ

೧ ಶಾರೀರಿಕ ಪರಿಶ್ರಮದ ಸಿದ್ಧಾಂತದಿಂದಲೆ ಸ್ವದೇಶೀ ಧರ್ಮವು ಹುಟ್ಟುವದು.

೨ ಅಸ್ತೇಯ ಮತ್ತು ಅಪರಿಗ್ರಹದ ಗುರಿಯನ್ನಿಟ್ಟುಕೊಂಡ ಮನುಷ್ಯನು ಅನ್ಯರ ಪರಿಶ್ರಮದ ಉಪಭೋಗವನ್ನು ಕ್ವಚಿತ್ತೇ ಮಾಡು ವನು. ಅಡಿಗೆ ಮಾಡುವದು, ಬಟ್ಟೆ ಒಗೆಯುವದು, ಮಲಮೂತ್ರ ಸ್ವಚ್ಛ ಮಾಡುವದು, ಪಾತ್ರೆ ತಿಕ್ಕುವದು, ಕ್ಷೌರ ಮಾಡಿಕೊಳ್ಳುವದು, ಕಸ ಗುಡಿಸುವದು ಮುಂತಾದ ಕಾರ್ಯಗಳು ಕೀಳೆಂದು ಬಗೆದು ಎರಡನೆಯವ ರಿಂದ ಮಾಡಿಸಿಕೊಳ್ಳಬಾರದು; ಮತ್ತು ಇವುಗಳನ್ನು ಮಾಡಿಸಿಕೊಳ್ಳು ವದರಲ್ಲಿಯೆ ಸ್ವಾಭಿಮಾನವೂ ಪ್ರತಿಷ್ಠೆಯೂ ಇರುವದೆಂದು ತಿಳಿದುಕೊಳ್ಳ ಕೂಡದು. ತಾನು ಅಶಕ್ತನಿದ್ದಾಗ, ಗೆಳೆಯರು ಪ್ರೇಮದಿಂದ ಮಾಡಿದರೆ, ಇಲ್ಲವೆ ಕೆಲವರು ಸೇರಿ ಹಂಚಿಕೊಂಡು ಕೆಲಸ ಮಾಡುವಾಗ ಈ ಕಾರ್ಯ ಗಳನ್ನು ಅನ್ಯರಿಂದ ಮಾಡಿಸಿಕೊಳ್ಳಬಹುದು. ಆದರೆ ಇವುಗಳಲ್ಲಿ ಒಂದು ಕೆಲಸವು ಚಿಕ್ಕದು, ಒಂದು ಕೀಳು, ಇನ್ನೊಂದು ಮೇಲು, ಉಚ್ಚವಾದ ಕೆಲಸವನ್ನು ಮಾಡುವವನು ಮನ್ನಣೆಗೆ ಯೋಗ್ಯನು, ಉಳಿದವರೆಲ್ಲರೂ ತುಚ್ಛರು ಎಂಬ ಭಾವನೆಯು ಎಳ್ಳಷ್ಟೂ ಇರಕೂಡದು.

೩ ಮೇಲೆ ಸೂತ್ರರೂಪದಿಂದ ಹೇಳಿದ ಸಿದ್ಧಾಂತಗಳು ಆದರ್ಶ ಗಳಾದವು. ಆದರೆ ಸಹಕಾರತತ್ವದ ದೃಷ್ಟಿಯಿಂದ ಮತ್ತು ಜಗತ್ತಿನ ವ್ಯವಹಾರದ ದೃಷ್ಟಿಯಿಂದ ವಿಚಾರಿಸಿ ನೋಡಿದರೆ ನಮ್ಮ ಎಷ್ಟೋ ಅವಶ್ಯ ಕತೆಗಳನ್ನು ಪೂರೈಸಿಕೊಳ್ಳುವದಕ್ಕಾಗಿ ಪರಿವಾರದವರ ಅಥವಾ ಗೆಳೆಯರ ಸಹಕಾರೀ ಶ್ರಮವಷ್ಟೆ ಸಾಕಾಗುವದಿಲ್ಲ. ನೆರೆಹೊರೆಯವರ ಮತ್ತು ಗ್ರಾಮ ನಿವಾಸಿಗಳ ಸಂಗಡ ಸಹಕಾರ ಮಾಡಿ ಅವರೊಡನೆ ಕೆಲಸ ಮಾಡ ಬೇಕಾಗುವದು. ಇದರಿಂದಲೆ ಸ್ವದೇಶೀಧರ್ಮವು ಅಂಕುರಿಸುವದು.

೪ ಸ್ವದೇಶೀವ್ರತವು ಕೇವಲ ದೇಶಾಭಿಮಾನದ ವಿಚಾರದಿಂದ ಹುಟ್ಟಿಲ್ಲ. ಆದರೆ ಅದು ಧಾರ್ಮಿಕ ವಿಚಾರದಿಂದ ಹುಟ್ಟಿದೆ. ವಿಶ್ವಬಂಧುತ್ವವನ್ನು ಬೆಳೆ

ಸುವದಕ್ಕಾಗಿ ನಾವು ಪ್ರಯತ್ನವನ್ನು ಮಾಡಬೇಕು. ಆದರೆ ಇದಕ್ಕೂ ಪೂರ್ವದಲ್ಲಿ ನಾವು ಯಾವ ನೆರೆಹೊರೆಯವರ ಮಧ್ಯದಲ್ಲಿ ಹಗಲೂ ಇರುಳೂ ಜೀವನವನ್ನು ಕಳೆಯುವೆವೋ ಮತ್ತು ಯಾರೊಡನೆ ನೂರಾರು ಕಾರ್ಯ ಗಳಲ್ಲಿ ನಮ್ಮ ಸಂಬಂಧಗಳು ಉಂಟಾಗುವವೂ ಅವರೊಡನೆ ಯೋಗ್ಯರೀತಿ ಯಿಂದ ವ್ಯವಹಾರವನ್ನು ಮಾಡತಕ್ಕದ್ದು ನಮ್ಮ ಧರ್ಮವು. ಇದನ್ನು ಬಿಟ್ಟು ವಿಶ್ವಬಂಧುತ್ವವನ್ನು ಸ್ಥಾಪಿಸಲು ಹೊರಟರೆ ಅದು ದಂಭಾಚಾರ ವಾಗುವದು. ಅಲ್ಲದೆ ವಿಶ್ವದೊಡನೆ ಬಂಧುತ್ವವೂ ಬೆಳೆಯಲಾರದು.

೫ ಕೇವಲ ರಾಷ್ಟ್ರೀಯ ಭಾವನೆಯಿಂದ ಉದ್ಭವಿಸಿದ ಸ್ವದೇಶಿಯ ವೃತ್ತಿಯು ಪರದೇಶೀಯರ ಹಿತದ ಕಡೆಗೆ ದುರ್ಲಕ್ಷ್ಯ ಮಾಡಬಹುದು ಹಾಗೂ ಅವರಿಗೆ ಅಹಿತವನ್ನು ಮಾಡುವ ಪ್ರಸಂಗಗಳನ್ನು ಕೂಡ ಹುಡುಕುವ ಸಂಭವವುಂಟು. ಆದರೆ ಧರ್ಮಭಾವನೆಯಿಂದ ಹುಟ್ಟಿದ ಸ್ವದೇಶಿಯು ಸ್ವದೇಶದ ಕಲ್ಯಾಣವನ್ನು ಮಾಡುತ್ತಿದ್ದರೂ ಪರರಾಷ್ಟ್ರಗಳ ಅಕಲ್ಯಾಣವನ್ನು ಬಯಸದು ಹಾಗೂ ಅಹಿತವನ್ನು ಮಾಡದು.

## ೧೦ ಅಭಯ

೧ ತನ್ನ ಮನಸ್ಸಿನ ವಿಕಾರಗಳಿಗಂಜದೆ ಉಳಿದ ಆಪತ್ತುಗಳಿಗೆ ಅಂಜುವ ಮನುಷ್ಯನು ಅಹಿಂಸೆಯನ್ನು ಪಾಲಿಸಲಾರನು. ಅಭಯವು ದೈವೀಸಂಪತ್ತುಗಳಲ್ಲಿ ಒಂದು ಪ್ರಧಾನಗುಣವು. ಅದನ್ನು ಮೊಟ್ಟಮೊದಲು ಪ್ರಾಪ್ತಮಾಡಿಕೊಳ್ಳತಕ್ಕದ್ದು.

೨ ಮನುಷ್ಯನು ಸಾಧಾರಣವಾಗಿ ಸಾವು, ಬೇನೆ, ಧನನಾಶ, ಕಲಹ, ಬಲಾತ್ಕಾರ, ಅತ್ಯಾಚಾರ, ಮಾನಹಾನಿ, ಲೋಕನಿಂದೆ, ಕುಟುಂಬಕ್ಲೇಶ ಅಥವಾ ಕುಟುಂಬಿಗಳಿಗೆ ದುಃಖವಾಗುವದೆಂಬ ಚಿಂತೆ ಮತ್ತು ಕಾಲ್ಪನಿಕ ಸಂಶಯ ಮುಂತಾದವುಗಳಿಗೆ ಅಂಜುತ್ತಿರುವನು. ಅಂಜುವ ಮನುಷ್ಯನು ಧರ್ಮಾಧರ್ಮದ ಆಳವಾದ ವಿಚಾರವನ್ನು ಮಾಡಲು ಅಸಮರ್ಥನು. ಅವನು ಸತ್ಯವನ್ನು ಶೋಧಿಸಲಾರನು. ಶೋಧಿಸಿದರೂ ಅದಕ್ಕೆ ಅಂಟಿಕೊಂಡಿರ ಲಾರನು. ಇಂತು ಸತ್ಯದ ಪಾಲನೆಯು ಅಂಜುಬುರುಕನಿಂದಾಗದು.

೩ ಮನುಷ್ಯನು ಹೆದರಬೇಕು ಒಂದೇ ಒಂದು ವಸ್ತುವಿಗೆ, ಅದಾವುದ ಕ್ಕೆಂದರೆ ತನ್ನ ವಿಕಾರೀಚಿತ್ತಕ್ಕೆ. ಆ ಹೆದರಿಕೆಗೆ ಪರಮಾತ್ಮನ ಹೆದರಿಕೆ, ಅಧರ್ಮದ ಅಂಜಿಕೆ, ಅಥವಾ ತನ್ನ ವಿಕಾರರೂಪೀ ಶತ್ರುವಿನ ಭಯ ಎನ್ನ

ಬಹುದು. ಅದು ಎಲ್ಲವೂ ಒಂದೇ. ವಿಕಾರಗಳಿಲ್ಲದಿದ್ದರೆ ಅಧರ್ಮವು ಆಗ ಲಾರದು; ಅಧರ್ಮವು ಆಗದಿದ್ದರೆ ಪರಮಾತ್ಮನ ಹೆದರಿಕೆ ಎಲ್ಲಿಯದು?

## ೧೧ ನಮ್ರತೆ

೧ ನಮ್ರತೆಯು ಅಹಿಂಸೆಯ ಒಂದು ಅಂಗವೆನಿಸುವದು; ಅಹಂಕಾರ ದಿಂದ ನಮ್ರತೆಗೆ ಕುಂದು ಬರುವದು; ಅಹಂಕಾರಿಯು ಸರ್ವಾತ್ಮಭಾವವನ್ನಿ ಡಲಾರನು ಮತ್ತು ಇದರಿಂದ ಅವನ ಅಹಿಂಸಾವ್ರತಕ್ಕೆ ಕುಂದುಬರುವುದು.

೨ ಶೂನ್ಯದಂತೆ ಇರುವದು ನಮ್ರತೆಯ ಪರಾಕಾಷ್ಠೆಯು. ತಾನು ಒಬ್ಬ ಹೆಚ್ಚಿನವನು; ತನ್ನಲ್ಲಿ ವೈಶಿಷ್ಟ್ಯವಿದೆ; ತನ್ನ ಶರೀರ, ಮನಸ್ಸು, ಬುದ್ಧಿ, ವಿದ್ಯೆ, ಕಲೆ, ಚಾತುರ್ಯ, ಪಾವಿತ್ರ್ಯ, ಜ್ಞಾನ, ಭಕ್ತಿ, ವೈರಾಗ್ಯ, ಔದಾರ್ಯ, ವ್ರತಪಾಲನೆ, ಇವು ಶ್ರೇಷ್ಠ; ವಿನಯಾದಿ ಗುಣಗಳೂ ತನ್ನ ಲ್ಲುಂಟು ಎಂದು ಅಭಿಮಾನಪಡುವದು ಅಹಂಕಾರವು. ಈ ಮೂಲಕ ತನ್ನ ಅಸ್ತಿತ್ವವು ಒಂದು ಭಾರವೆ ಎಂದೆನಿಸಿದರೆ ಅದೂ ಅಹಂಕಾರವು. ತನ್ನ ಅವಯವಗಳು ಆರೋಗ್ಯದಿಂದ ಇದ್ದಾಗ ಹೇಗೆ ಅವುಗಳ ಭಾರ ವೆನಿಸುವದಿಲ್ಲವೊ ಹಾಗೆಯೆ ಈ ಗುಣಗಳ ಬಗೆಗೆ ಅತ್ಯಂತ ಕಡಿಮೆ ಅಭಿ ಮಾನವಿರುವದೂ ಶೂನ್ಯವತ್ ಸ್ಥಿತಿಯು. ಅದೇ ನಮ್ರತೆಯು.

೩ ಇಂತಹ ನಮ್ರತೆಯನ್ನು ಕಲಿತು ಪಡೆಯುವದು ಅಶಕ್ಯವು. ಆದರೆ ಇದು ಸದ್ಗುಣಮಯ ಮತ್ತು ವಿಚಾರಮಯ ಜೀವನದಿಂದ ತನ್ನಷ್ಟಕ್ಕೆ ತಾನೆ ಸ್ವಭಾವದಲ್ಲಿ ಒಡಮೂಡುವದು. ನಮ್ರ ಮನುಷ್ಯನಿಗೆ ತನ್ನ ನಮ್ರ ತೆಯ ಅರಿವು ಕೂಡ ಇರುವದಿಲ್ಲ.

೪ ಎಷ್ಟೋ ಸಲ ವ್ಯಕ್ತವಾಗುವ ನಮ್ರತೆಯ ಮರೆಯಲ್ಲಿ ಸೂಕ್ಷ್ಮ ಮತ್ತು ತೀವ್ರ ಅಭಿಮಾನವು ಅಡಗಿರುವದು. ಇದು ನಮ್ರತೆಯಲ್ಲ.

೫ ತನ್ನ ಯೋಗ್ಯತೆಯನ್ನರಿತುಕೊಂಡು ಅದರ ಎಲ್ಲೆಯನ್ನು ಮೀರದೆ ಅದರಲ್ಲಿಯೆ ಇರುವದೊಂದು ನಮ್ರತೆಯ ಆವಶ್ಯಕ ಲಕ್ಷಣವು.

೬ ನಮ್ರ ಮನುಷ್ಯನು ಜಗತ್ತಿನ ಎಲ್ಲ ಕಾರ್ಯಗಳನ್ನೂ ಮಾಡಿಬಿಡುವೆ ನೆಂಬ ಹೆಮ್ಮೆಯವನಿರಬಾರದು ಮತ್ತು ತನ್ನ ಯೋಗ್ಯತೆಯನ್ನು ಅರಿತು, ತನ್ನ ಕಾರ್ಯದಲ್ಲಿ ಯೋಗ್ಯತೆಯನ್ನು ಪಡೆಯುವ ವರೆಗೆ ಮುಂದಕ್ಕೆ ಹೆಜ್ಜೆಯನ್ನಿಡಬಾರದು.

೭ ಸತ್ಯ, ಅಹಿಂಸೆ, ಬ್ರಹ್ಮಚರ್ಯ ಮುಂತಾದ ವ್ರತಗಳ ಸಾಧಕನು

ಅವನ್ನು ಪಾಲಿಸುವಾಗ ತನ್ನ ಶಕ್ತಿಯು ಎಷ್ಟಿದೆಯೆಂಬುದನ್ನು ತಿಳಿದು ಕೊಂಡರೆ ಅವನು ತಾನಾಗಿಯೆ ನಮ್ರನಾಗುವನು.

೮ ಸಾಧಕನು ಸತ್ಯ, ಅಹಿಂಸೆ ಮುಂತಾದವುಗಳಲ್ಲಿಯ ಶಕ್ತಿಯ ಬಗೆಗೆ ಇದ್ದ ತನ್ನ ಶ್ರದ್ಧೆಯನ್ನು ಕಡಿಮೆ ಆಗಗೊಡುವದಿಲ್ಲ ಮತ್ತು ಅವುಗಳ ಪರಾಕಾಷ್ಠೆಯನ್ನು ಮುಟ್ಟುವದಕ್ಕೆ ತನ್ನ ಶಕ್ತಿಯು ಸಾಕಾಗದೆಂಬುದನ್ನು ನೋಡಿ ಎಂದೂ ನಿರುತ್ಸಾಹಿಯಾಗುವದಿಲ್ಲ. ಆದರೆ ನಮ್ರತೆಯಿಂದ ತನ್ನ ಆಳವನ್ನರಿತುಕೊಂಡು ಸರ್ವ ಜೀವನದಲ್ಲಿಯೂ ನಮ್ರತೆಯುಂಟಾ ಗುವಂತೆ ಮಾಡಲು ಪ್ರಯತ್ನಿಸುತ್ತಿರುವನು.

೯ ಆದರ್ಶವನ್ನು ಮುಟ್ಟಬೇಕೆನ್ನುವ ನಮ್ರ ಮನುಷ್ಯನು ತನ್ನ ಕುಂದುಕೊರತೆಗಳ ಕಡೆಗೆ ಅಲಕ್ಷ ಮಾಡುವದಿಲ್ಲ. ಅವನು ತನ್ನ ಕೊರತೆ ಗಳನ್ನು ಒಪ್ಪಿಕೊಳ್ಳುವನು, ಅವನ್ನು ಮುಚ್ಚಿಕೊಳ್ಳಲು ಬಯಸುವದಿಲ್ಲ.

## ೧೨ ವ್ರತ-ಪ್ರತಿಜ್ಞೆ

೧ ತನ್ನ ಯಾವ ಆಚರಣೆಯು ಸತ್ಯವಿಚಾರವನ್ನು ಅನುಸರಿಸುವಂತಹ ದೆಂದು ಎನಿಸುವದೊ ಅದಕ್ಕೇ ಅಂಟಿಕೊಂಡು ವಿರುದ್ಧವಾದ ಆಚರಣೆ ಯನ್ನು ಮಾಡುವದಿಲ್ಲ ಎಂದು ಮಾಡಿದ ಪ್ರತಿಜ್ಞೆಯೆ ವ್ರತವೆನಿಸುವದು.

೨ ಈ ವ್ರತಾಚರಣೆಯಲ್ಲಿ ಎಷ್ಟು ಸಡಿಲು ಉಂಟಾಗುವದೊ ಅಷ್ಟು ಸತ್ಯದ ಸಾಕ್ಷಾತ್ಕಾರಕ್ಕೆ ತಡೆಯುಂಟಾಗುವದು.

೩ ಯಾವಾಗಲೂ ಸತ್ಯರೂಪಿ ಪರಮಾತ್ಮನಲ್ಲಿಯೆ ಲೀನವಾಗಿರುವದ ಕ್ಕಾಗಿ ಅರ್ಥಾತ್ ಮನವಚನಕರ್ಮದಿಂದ ಸತ್ಯನಿಷ್ಠನಾಗಿ ಇರುವದಕ್ಕಾಗಿ ಇಂತಹ ಪ್ರತಿಜ್ಞೆಗಳನ್ನು ಮಾಡುವದು ಆವಶ್ಯಕವು.

೪ ಅರಿವು ಇಲ್ಲದಿರುವಾಗ ಅಥವಾ ದುಸ್ಸಂಗ ಅಥವಾ ಪೂರ್ವದ ದುಶ್ಚಟ ಹಾಗೂ ಕುಸಂಸ್ಕಾರ ಇವುಗಳ ಮೂಲಕ ಮನಸ್ಸು ತಾನು ಮಾಡಿದ ನಿಶ್ಚಯ ಗಳಂತೆ ಸ್ಥಿರವಾಗಿ ನಿಲ್ಲಲಾರದು. ಆದ್ದರಿಂದ ಮನಸ್ಸನ್ನು ಸ್ಥಿರಪಡಿಸಿ ಕೊಳ್ಳುವದಕ್ಕಾಗಿ ವ್ರತರೂಪೀ ಬೇಡಿಗಳಿಂದ ನಮ್ಮನ್ನು ನಾವೇ ಬಂಧಿಸಿ ಕೊಳ್ಳುವದು ಇಷ್ಟವಾದುದು, ಉತ್ತಮವಾದುದು.

೫ ಆಗ್ರಹ, ವಿಚಾರ, ವಾಣಿ ಮತ್ತು ಕರ್ಮ ಇವು ಸತ್ಯವಾಗಿದ್ದರೆ ಇವು ಗಳ ಪಾಲನೆಗಾಗಿ ವ್ರತಗಳನ್ನು ಹಿಡಿಯಬಹುದು. ಆದರೆ ಅಸತ್ಯ-ಆಗ್ರಹ, ಅಸತ್ಯವಿಚಾರ, ಅಸತ್ಯವಾಣಿ ಮತ್ತು ಅಸತ್ಯಕರ್ಮಗಳನ್ನು ಮಾಡಲು

ಎಂದೂ ವ್ರತವನ್ನು ಹಿಡಿಯಕೂಡದು. ಒಂದು ವೇಳೆ ಹಾಗೆ ವ್ರತವನ್ನು ಹಿಡಿಯದಿದ್ದರೆ ಅದನ್ನು ಬಿಟ್ಟುಬಿಡಬೇಕಾಗುವದು. ಪ್ರತಿ-ವ್ರತದಲ್ಲಿ ಊರ್ಧ್ವಗಮನವಿರತಕ್ಕದ್ದು. ಅಸತ್ಯದಲ್ಲಿಯಾಗಲಿ ಭೋಗದಲ್ಲಿಯಾಗಲಿ ವ್ರತ ಇರಲಾರದು. ಭೋಗವು ವ್ರತವಾಗಲರಿಯದು.

೬ ಅಸತ್ಯವಿಲ್ಲದಿದ್ದರೆ ಒಮ್ಮೆ ಕೈಕೊಂಡ ವ್ರತವನ್ನು ನಾವು ಎಂದಿಗೂ ಬಿಡಕೂಡದು. ಅದನ್ನು ಪಾಲಿಸುವಾಗ ಬಂದ ಸಂಕಟಗಳನ್ನೆಲ್ಲ ಸಾಧಕನು ಸಹಿಸಲೇಬೇಕು.

## ೧೩ ಉಪಾಸನೆ-ಪ್ರಾರ್ಥನೆ

೧ ಉಪಾಸನೆಯೆಂದರೆ ಪರಮಾತ್ಮನ ಸಾನ್ನಿಧ್ಯದಲ್ಲಿರುವದು. ಅವನ ಸಾನ್ನಿಧ್ಯದಲ್ಲಿರುವದೆಂದರೆ ತದ್ರೂಪವಾಗುವದು. ಪರಮೇಶ್ವರನೆಂದರೆ ಸತ್ಯ. ಆದ್ದರಿಂದ ಸತ್ಯರೂಪನಾಗುವದೆ ಉಪಾಸನೆಯು. ಸತ್ಯರೂಪನಾಗುವದಕ್ಕೋಸ್ಕರ ಉತ್ಕಟ ಇಚ್ಛೆಯುಳ್ಳವನಾಗುವದೆ, ಭಗವಂತನನ್ನು ಬಿನ್ನವಿಸಿಕೊಳ್ಳುವದೆ ಪ್ರಾರ್ಥನೆಯು.

೨ ಸತ್ಯರೂಪನಾಗುವದೆಂದರೆ ನಿರ್ವಿಕಾರನಾಗುವದು. ನಿರ್ವಿಕಾರನಾಗಬೇಕಾದರೆ ವಿಕಾರೀ ವಿಚಾರಗಳನ್ನು ಮನಸ್ಸಿನಲ್ಲಿ ಬರಗೊಡಕೂಡದು. ಮನಸ್ಸು ಎಂದೂ ತೆರವು ಇರಲಾರದು. ಅದು ವಿಕಾರೀ ವಿಚಾರಗಳ ಕಡೆಗಾದರೂ ಒಲೆಯುವದು ಇಲ್ಲವೆ ಸತ್ಯದ ಕಡೆಗಾದರೂ ಹೋಗುವದು. ಆದ್ದರಿಂದ ರಾಮಕೃಷ್ಣಾದಿಗಳ ಸ್ಮರಣೆಯನ್ನು ಮಾಡಬೇಕು. ಏಕೆಂದರೆ ಅವರು ಸತ್ಯದ ಮೂರ್ತಿಗಳು. ಅವರ ಸ್ಮರಣೆಯೇ ನಾಮಸ್ಮರಣೆ. ಅಂತಃಕರಣಪೂರ್ವಕ ಅವರನ್ನು ಸ್ಮರಿಸಿದರೆ ಸ್ಮರಿಸುವವನು ತದ್ರೂಪನಾಗುವನು.

೩ ಉಪಾಸನೆಯು ಬುದ್ಧಿಯ ವಿಷಯವಲ್ಲ, ಶ್ರದ್ಧೆಯ ವಿಷಯವು. ಉಪಾಸನೆಯನ್ನು ಮಾಡುತ್ತ ಮಾಡುತ್ತ ಶುದ್ಧನಾಗಿಯೆಬಿಡುವೆನೆಂಬ ಶ್ರದ್ಧೆಯನ್ನಿಟ್ಟುಕೊಂಡು ದಿನವೂ ಉಪಾಸನೆ ಮಾಡಬೇಕು. ಅನ್ನಾದಿಗಳು ಶರೀರವನ್ನು ಪೋಷಿಸುವಂತೆ ಉಪಾಸನೆಯು ಆತ್ಮವನ್ನು ಪೋಷಿಸುವದು.

೪ ಸತ್ಯರೂಪ ಪರಮಾತ್ಮನು ಸರ್ವಾಂತರ್ಯಾಮಿ ಆದ್ದರಿಂದ ಸಾಧಕನು ಜೀವಮಾತ್ರರೊಡನೆ ಐಕ್ಯವನ್ನನುಭವಿಸತಕ್ಕದ್ದು. ಈ ಮೂಲಕ ವ್ಯಕ್ತಿಗತ ಉಪಾಸನೆಯೂ ಬೇಕು, ಸಾಮುದಾಯಿಕ ಉಪಾಸನೆಯೂ ಬೇಕು.

೫ ಜೀವಮಾತ್ರರೊಡನೆ ಐಕ್ಯದ ಅನುಭವವೆಂದರೆ ಜೀವಮಾತ್ರದ

ಸೇವೆ ಮಾಡುವದು. ಆದ್ದರಿಂದ ಜೀವಮಾತ್ರದ ನಿಷ್ಕಾಮ ಸೇವೆಯೂ ಉಪಾಸನೆಯೆಂದೆನಿಸುವದು. *

## ೧೪ ವ್ರತಗಳ ಸಾಧನೆ

೧ ಹಸುವನ್ನು ಬದುಕಿಸುವದಕ್ಕಾಗಿ ಸುಳ್ಳು ಹೇಳಬೇಕೊ ಹೇಳಬಾರದೊ, ಹಾವು ಮುಂತಾದ ಪ್ರಾಣಿಗಳನ್ನು ಕೊಲ್ಲಬೇಕೊ ಕೊಲ್ಲಬಾರದೊ, ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ಮಾಡುವವರನ್ನು ಪಶುಬಲದಿಂದ ವಿರೋಧಿಸಬೇಕೊ ಬಾರದೊ, ಇಂತಹ ತಾರ್ಕಿಕ ಪ್ರಶ್ನೆಗಳಲ್ಲಿ ಮನಸ್ಸನ್ನು ತೊಡಗಿಸುವುದರಿಂದ ವ್ರತಸಾಧನೆಯಾಗಲಾರದು. ಇಂತಹ ಪ್ರಶ್ನೆಗಳನ್ನು ಬುದ್ಧಿ-ಚಾತುರ್ಯದಿಂದ ಬಿಡಿಸುವ ಕಾಲ ಬಂದಾಗ ಬಿಡಿಸಬಹುದು. ಸಾಮಾನ್ಯವಾದ ಹಾಗೂ ದೈನಿಕ ಪ್ರಸಂಗಗಳಲ್ಲಿ ವ್ರತಗಳನ್ನು ಚನ್ನಾಗಿ ಪಾಲಿಸುತ್ತ ಹೋದ ಪಕ್ಷದಲ್ಲಿ ಕಠಿಣ ಪ್ರಸಂಗಗಳಲ್ಲಿ ನಾವೇನು ಮಾಡಬೇಕೆನ್ನುವದು ತಾನಾಗಿಯೆ ಹೊಳೆಯುವದು.

೨ ದೈನಿಕ ಹಾಗೂ ಸಾಮಾನ್ಯವಾದ ಪ್ರಸಂಗಗಳು ಕೆಳಗಿನಂತೆ ಇರುವವು.

(ಅ) ಅಸತ್ಯಾಚರಣೆಯ ಪ್ರಸಂಗಗಳುಃ- ಒಬ್ಬನು ಕೆಟ್ಟವನೆಂದು ಗೊತ್ತಿದ್ದರೂ ಅವನು ಒಳ್ಳೆಯವನೆಂದು ಹೇಳುವದು, ಒಳ್ಳೆಯವನೆಂದು ಎನಿಸಿಕೊಳ್ಳುವ ಇಚ್ಛೆಯಿಂದ ತನ್ನಲ್ಲಿ ಇಲ್ಲದ ಗುಣಗಳ ವಿಷಯವಾಗಿ ಹೇಳಿಕೊಳ್ಳುವದು, ಅತಿಶಯೋಕ್ತಿ ಮಾಡುವದು, ಮಾಡಿದ ದೋಷಗಳನ್ನು ಹೇಳಬೇಕಾದವರ ಎದುರಿನಲ್ಲಿ ಹೇಳದಿರುವದು, ಗೆಳೆಯನ ಮತ್ತು ಹಿರಿಯರ ಪ್ರಶ್ನೆಗಳಿಗೆ ಹಾರಿಕೆಯ ಉತ್ತರಗಳನ್ನೀಯುವದು ಮತ್ತು ಹೇಳಬೇಕಾದುದನ್ನು ಹೇಳದಿರುವದು, ವಿಶ್ವಾಸಭಂಗವನ್ನು ಮಾಡುವದು, ಕೊಟ್ಟಮಾತನ್ನು ಮುರಿಯುವದು ಇತ್ಯಾದಿ.

(ಆ) ಹಿಂಸೆಯ ಪ್ರಸಂಗಗಳುಃ- ಒಬ್ಬರಿಗೆ ಅವಮಾನ ಮಾಡುವದು, ಒಬ್ಬರನ್ನು ತಿರಸ್ಕರಿಸುವದು, ಕೆಟ್ಟ ವಸ್ತುಗಳನ್ನು ಕೊಟ್ಟು ಒಳ್ಳೆಯ ವಸ್ತುಗಳನ್ನು ತೆಗೆದುಕೊಳ್ಳುವದು, ತಾನು ಮಾಡಬೇಕಾದ ಕೆಲಸಗಳನ್ನು ತನ್ನ ಗೆಳೆಯರಿಗೆ ಒಪ್ಪಿಸುವದು, ನೆರೆಹೊರೆಯವರು, ಗೆಳೆಯರು ಕಾಯಿಲೆ

* ಈ ಪ್ರಕರಣವನ್ನು ಗಾಂಧೀಜಿಯವರು ಸ್ವತಃ ಬರೆದಿದ್ದಾರೆ.

ಬಿದ್ದಾಗ ಅವರ ಸೇವೆ ಶುಶ್ರೂಷೆ ಮಾಡದಿರುವದು, ತನ್ನ ಬಳಿಯಲ್ಲಿದ್ದರೂ ಹಸಿದವರಿಗೆ ಅನ್ನ ನೀರು ನೀಡದಿರುವದು, ಅತಿಥಿಸತ್ಕಾರ ಮಾಡದಿರುವದು, ಕೂಲಿಕಾರರೊಡನೆ ಅಸಭ್ಯತನದಿಂದ ವರ್ತಿಸುವದು, ದನಗಳನ್ನು ಬಾರಕೋಲು-ಬೆತ್ತಗಳಿಂದ ಹೊಡೆಯುವದು, ಅನ್ನ ಹಂಜಕ್ಕಿಯಾದರೆ ಬೇಳೆಯಲ್ಲಿ ಉಪ್ಪು ಹೆಚ್ಚಾದರೆ, ಪಲ್ಯ ಮನಸ್ಸಿಗೆ ಬರದಿದ್ದರೆ ವ್ಯರ್ಥವಾಗಿ ಕೋಪಿಸುವದು ಇತ್ಯಾದಿ. ಅನ್ಯ ವ್ರತಗಳ ವಿಷಯವೂ ಇದೇ ರೀತಿ ಇರುವದೆಂದು ತಿಳಿಯಬೇಕು.

೩. ಬ್ರಹ್ಮಚರ್ಯ ಪಾಲಿಸುವಾಗ ಕೆಳಗಿನ ಸೂಚನೆಗಳ ಉಪಯೋಗವಾಗುವದು.

(ಅ) ಬಾಲಬಾಲಿಕೆಯರು ಆಡಂಬರರಹಿತರಾಗಿ ಸ್ವಾಭಾವಿಕ ರೀತಿಯಿಂದ ಆಜನ್ಮ ನಿರ್ಮಲರಾಗಿರತಕ್ಕವರು ಎಂಬ ಭಾವನೆಯ ವಾತಾವರಣದಲ್ಲಿ ಬೆಳೆಯಬೇಕು.

(ಆ) ಮಸಾಲೆ ಹಾಗೂ ಉಷ್ಣ ಪದಾರ್ಥಗಳನ್ನು ಸೇವಿಸಬಾರದು. ಸ್ನಿಗ್ಧ ( fats ) ಮಿಶ್ರಿತವಾದ ಭಾರವಾದ ಆಹಾರ, ಅತಿ ಸಿಹಿಯಾದ ಪಕ್ವಾನ್ನ, ಚಕ್ಕಲಿ, ಕೋಡಬೋಳೆ ಮುಂತಾದ ಕರಿದ ಖಾದ್ಯಪದಾರ್ಥಗಳ ಸೇವನೆಯನ್ನು ಬಿಡಬೇಕು.

(ಇ) ಪತಿ-ಪತ್ನಿಯರು ಬೇರೆ ಬೇರೆ ಕೋಣೆಗಳಲ್ಲಿ ಮಲಗಬೇಕು ಮತ್ತು ಏಕಾಂತ ವಾಸವನ್ನು ಬಿಡಬೇಕು.

(ಈ) ಶರೀರ ಮತ್ತು ಮನವನ್ನು ಸತ್ಕಾರ್ಯಗಳಲ್ಲಿ ತೊಡಗಿಸಬೇಕು.

(ಉ) ಬೇಗನೆ ಮಲಗಿ ಬೇಗನೆ ಏಳುವ ನಿಯಮವನ್ನು ಸರಿಯಾಗಿ ಪಾಲಿಸಬೇಕು.

(ಊ) ಆವುದೇ ತರದ ಬೀಭತ್ಸ ಹಾಗೂ ಕೀಳುತರದ ಸಾಹಿತ್ಯವನ್ನು ಓದಬಾರದು, ಮಲಿನ ವಿಚಾರಗಳಿಗೆ ಔಷಧವೆಂದರೆ ನಿರ್ಮಲ ವಿಚಾರಗಳೇ.

(ಎ) ನಾಟಕ, ಸಿನೇಮಾ ಮುಂತಾದ ಮನೋವಿಕಾರಗಳನ್ನು ಚೇತರಿಸುವ ತಮಾಷೆಗಳನ್ನು ನೋಡಬಾರದು.

(ಏ) ಸ್ವಪ್ನದೋಷವಾದರೆ ಅಂಜಕೂಡದು. ತಣ್ಣೀರಿನ ಸ್ನಾನವೆ ಇದಕ್ಕೆ ಮದ್ದು. ಸ್ವಪ್ನದೋಷವನ್ನು ಹೋಗಲಾಡಿಸುವದಕ್ಕೆ ಆಗಾಗ್ಗೆ ಸ್ತ್ರೀ-ಸಂಗವು ಅವಶ್ಯವಾದುದೆಂದು ತಿಳಿಯುವದು ತೀರ ತಪ್ಪಾದುದು.

(ಐ) ಪತಿ-ಪತ್ನಿಯರು ಸಂಯಮದಿಂದ ಇರುವದು ಕಠಿಣವಾದುದು,

ಒಂದು ವೇಳೆ ಇದ್ದರೆ ಅದರಿಂದ ಶರೀರಕ್ಕೂ ಮನಸ್ಸಿಗೂ ಹಾನಿಯಾಗು ವದು, ಆರೋಗ್ಯದ ದೃಷ್ಟಿಯಿಂದ ವಿಷಯಭೋಗವು ಅವಶ್ಯಕವು ಎಂಬೀ ಮಾತುಗಳಲ್ಲಿ ನಂಬಿಗೆಯನ್ನಿಡಬಾರದು. ಸಂಯಮವು ಸಾಮಾನ್ಯವಾದ ಸ್ವಾಭಾವಿಕವಾದ ಸ್ಥಿತಿಯೆಂದು ತಿಳಿದು ಅದರಂತೆ ವರ್ತಿಸುವದೆ ಮಹತ್ವದ ಸಂಗತಿಯು.

(೭) ಪ್ರಾತಃಕಾಲದಲ್ಲಿ ಏಕಾಗ್ರಮನಸ್ಸಿನಿಂದ ಪಾವಿತ್ರ್ಯವನ್ನೂ ನಿರ್ಮಲ ತೆಯನ್ನೂ ಕೊಡೆಂದು ಪರಮಾತ್ಮನನ್ನು ಪ್ರಾರ್ಥಿಸಬೇಕು. ಇದಕ್ಕಾಗಿ ರಾಮನಾಮದಂಥ ನಾಮದ ಸ್ಮರಣೆ ಮಾಡುವದು ಅತ್ಯುತ್ತಮವಾದುದು. (ಈ ವಿಷಯವನ್ನು ಹೆಚ್ಚಿಗೆ ತಿಳಿದುಕೊಳ್ಳಬೇಕೆನ್ನುವವರು "ನೀತಿನಾಶನೆ ಮಾರ್ಗ" ಎಂಬ ಗುಜರಾಥೀ ಪುಸ್ತಕವನ್ನು ಓದಬೇಕು. )

೮ (ಅ) ಪ್ರಾರ್ಥನೆಯ ಕಾಲದಲ್ಲಿ ನಿದ್ರೆಬಂದರೆ, ಮೈಮುರಿದರೆ, ತದೇಕ ಚಿತ್ತರಾಗದಿದ್ದರೆ, ವಿಚಾರಗಳು ಅತ್ತಿತ್ತ ಹರಿದಾಡಿದರೆ, ಪ್ರಾರ್ಥನೆಯಾಗಲಿಲ್ಲ ವೆಂದೂ ಪ್ರಾರ್ಥನೆಯು ವ್ಯರ್ಥವಾಯಿತೆಂದೂ ಭಾವಿಸಬೇಕು. ಈ ತರದ ಚಿತ್ತಚಾಂಚಲ್ಯ ಮತ್ತು ದೇಹಾಲಸ್ಯವನ್ನು ತಡೆಯಬೇಕು. ಪ್ರಾರ್ಥನೆಗೆ ಹೋಗುವ ಮೊದಲು ಮುಖಮಾರ್ಜನ ಮಾಡಿಕೊಳ್ಳಬೇಕು, ಹಲ್ಲುಜ್ಜಿ ಕೊಳ್ಳಬೇಕು, ಸ್ಫೂರ್ತಿಯಿಂದಿರಲು ಯತ್ನಿಸಬೇಕು. ಇಷ್ಟು ಮಾಡಿದ ಮೇಲೂ ಶರೀರದ ಮೇಲಿನ ಹಿಡಿತವು ತಪ್ಪಿದರೆ ದೊಡ್ಡವನಾಗಲಿ ಚಿಕ್ಕವ ರಾಗಲಿ ನಾಚದೆ ಎದ್ದು ನಿಲ್ಲಬೇಕು.

(ಆ) ಪ್ರಾರ್ಥನೆಗೆ ಹೊಂದಿ ಕುಳಿತುಕೊಳ್ಳಕೂಡದು. ಸರಳವಾಗಿ ಬೆನ್ನೆ ಲುಬನ್ನು ಬಾಗಿಸದೆ ಕುಳಿತುಕೊಳ್ಳಬೇಕು ಮತ್ತು ಸಾವಕಾಶವಾಗಿ ದೀರ್ಘ ವಾಗಿ ಉಸಿರಾಡಿಸುತ್ತಿರಬೇಕು.

(ಇ) ಪ್ರಾರ್ಥನೆಯ ಶ್ಲೋಕ, ಭಜನೆ, ಹಾಡು ಇವುಗಳನ್ನು ಹೇಳುವ ರೀತಿ ಮುಂತಾದವುಗಳನ್ನು ಕಲಿಯಲಿಕ್ಕೆ ಯತ್ನಿಸಬೇಕು. ಧಾಟಿಯು ಚನ್ನಾಗಿ ಬರುವವರೆಗೆ ಪದ್ಯಗಳನ್ನು ಮನದಲ್ಲಿಯೆ ನುಡಿಯುತ್ತಿರಬೇಕು. ಎಷ್ಟು ಯತ್ನಿಸಿದರೂ ಅವು ಬಾರದೆ ಹೋದರೆ ರಾಮನಾಮವನ್ನು ಭಜಿ ಸುತ್ತ ಹೋಗಬೇಕು.

(ಈ) ಪ್ರಾರ್ಥನೆಯಲ್ಲಿ ಅನ್ನುವ ಶ್ಲೋಕ-ಪದ್ಯಗಳ ಅರ್ಥವನ್ನು ತಿಳಿದು ಕೊಳ್ಳಬೇಕು ಮತ್ತು ಮನನಮಾಡಬೇಕು.

(ಉ) ವ್ಯಕ್ತಿಗತ ಪ್ರಾರ್ಥನೆ ಮತ್ತು ಸಾಮುದಾಯಿಕ ಪ್ರಾರ್ಥನೆ ಇವು

ಎರಡೂ ಮಹತ್ವದವುಗಳೆಂದು ಎಣಿಸಲ್ಪಟ್ಟಿವೆ. ಇವು ಒಂದನ್ನೊಂದು ಪೋಷಿಸುವವು. ವ್ಯಕ್ತಿಗತ ಪ್ರಾರ್ಥನೆಯ ಬೆಲೆಯು ತಿಳಿದ ಹೊರತು ಸಾಮೂಹಿಕ ಪ್ರಾರ್ಥನೆಯಲ್ಲಿ ರಸವುಂಟಾಗಲಾರದು. ಆದುದರಿಂದ ಪ್ರತಿಯೊಬ್ಬನು ವ್ಯಕ್ತಿಗತಪ್ರಾರ್ಥನೆಯನ್ನು ನಿಯಮದಿಂದ ಮಾಡುತಿರಬೇಕು.

(ಊ) ಪ್ರಾತಃಕಾಲ ಮತ್ತು ಸಾಯಂಕಾಲ ಇವು ಪ್ರಾರ್ಥನೆಗೆ ತಕ್ಕ ಸಮಯಗಳು. ಕೇವಲ ವ್ಯಕ್ತಿಗತ ಪ್ರಾರ್ಥನೆಗಾಗಿ ಯಾವ ಸಮಯದ ಕಟ್ಟುನಿಟ್ಟು ಇಲ್ಲ. ಪ್ರತಿಯೊಂದು ಕಾರ್ಯದಲ್ಲಿ ಪ್ರತಿನಿಮಿಷಕ್ಕೂ ಪರಮಾತ್ಮನನ್ನು ಸಾಕ್ಷಿಯಾಗಿಟ್ಟುಕೊಂಡು ಮಾಡುವ ಪ್ರಾರ್ಥನೆಯೆ ವ್ಯಕ್ತಿಗತ ಪ್ರಾರ್ಥನೆಯು. ಈ ಪ್ರಾರ್ಥನೆಗೆ ವಿಶೇಷವಾದ ಮಂತ್ರ ಹಾಗೂ ಜಪದ ಅಗತ್ಯವಿಲ್ಲ. ಬೇಕಾದ ಹೆಸರಿನಿಂದ, ಬೇಕಾದ ರೀತಿಯಿಂದ ಪರಮಾತ್ಮನನ್ನು ಸ್ಮರಿಸಿದರೆ ತೀರಿತು. ರಾಮನಾಮವು ನಮ್ಮ ಪ್ರತಿಯೊಂದು ರೋಮರೋಮದಿಂದ ಹೊರಡಬೇಕು, ಪ್ರತಿಯೊಂದು ಶ್ವಾಸದೊಡನೆ ಕೇಳಿಸಬೇಕು. ಪ್ರಾರ್ಥನೆಯಿಂದ ನಾವು ಮುಟ್ಟಬೇಕಾದ ಗುರಿಯು ಇದೇ.

(ಎ) ಹೀಗೆ ಮಾಡುವದರಿಂದ ಸಮಯವು ನಷ್ಟವಾಗುವದೆಂದು ತಿಳಿಯಬಾರದು. ಇದಕ್ಕೆ ಪ್ರತ್ಯೇಕ ವೇಳೆಯ ಅಗತ್ಯವೇ ಇಲ್ಲ; ಇದಕ್ಕೆ ಸಂಪೂರ್ಣ ಅರಿವು, ಎಚ್ಚರವು ಮತ್ತು ಶುದ್ಧತೆಯು ಅತ್ಯಾವಶ್ಯಕವು.

## ದ್ವಿತೀಯ ಖಂಡ

# ಧರ್ಮ ಮಾರ್ಗಗಳು

### ೧ ಸರ್ವಧರ್ಮ ಸಮಭಾವ

೧ ಸತ್ಯದ ಶೋಧಕರು, ಜನತೆಯ ಕಲ್ಯಾಣಕ್ಕಾಗಿ ಹೆಣಗುವ ವಿಭೂತಿಗಳು, ಸಾಧುಗಳು, ಪ್ರತಿಯೊಂದು ಯುಗದಲ್ಲೂ ಪ್ರತಿಯೊಂದು ಜನಾಂಗದಲ್ಲೂ ಹುಟ್ಟುತ್ತಾರೆ. ಆ ಆ ಯುಗದ ಮತ್ತು ಜನಾಂಗದ ಉಳಿದ ಜನರಿಗಿಂತಲೂ ಅವರಿಗೆ ಸತ್ಯದ ಸಾಕ್ಷಾತ್ಕಾರವು ಹೆಚ್ಚಾಗಿ ಆಗಿರುತ್ತದೆ. ಅವರಿಗೆ ಕೆಲವು ಮಟ್ಟಿಗೆ ಸನಾತನ ಸಿದ್ಧಾಂತಗಳ ದರ್ಶನವೂ ಕೆಲಮಟ್ಟಿಗೆ ಆ ಆ

ಪರಿಸ್ಥಿತಿಯ ಮೂಲಕ ಉದ್ಭವಿಸಿದ ಸಿದ್ಧಾಂತಗಳ ದರ್ಶನವೂ ಆಗುತ್ತದೆ. ಅನೇಕ ಸಿದ್ಧಾಂತಗಳು ತಮ್ಮ ಸನಾತನ ಸ್ವರೂಪದಲ್ಲಿಯೆ ಅವರಿಗೆ ತಿಳಿಯು ವವಾದರೂ ಅವುಗಳಂತೆ ಆಚರಿಸುತ್ತ ಹೋಗುವಾಗ ಆ ಆ ಯುಗದ ಮತ್ತು ಜನಾಂಗದ ಪರಿಸ್ಥಿತಿಗೆ ಅನುರೂಪವಾದ ಒಂದು ವಿಶಿಷ್ಟ ಪದ್ಧತಿಯು ಅವ ರಿಗೆ ಹೊಳೆಯುವದು. ಜಗತ್ತಿನ ಭಿನ್ನ ಭಿನ್ನ ಧರ್ಮಗಳು ಈ ಕ್ರಮದ ಮೂಲಕವೆ ಹುಟ್ಟಿರುವವು.

೨ ಈ ರೀತಿ ಯೋಚಿಸುವವನು ಯಾವ ಧರ್ಮದಲ್ಲಿಯೂ ಸತ್ಯವು ಸರ್ವಥಾ ಇಲ್ಲವೆನ್ನಲಾರನು. ಅದೇಪ್ರಕಾರ ಯಾವ ಧರ್ಮವೂ ಸಂಪೂರ್ಣ ಸತ್ಯವೆಂದು ಅವನು ತಿಳಿಯಲಾರನು. ಸರ್ವಧರ್ಮಗಳಲ್ಲಿ ಬದಲಾವಣೆಗೂ ವಿಕಾಸಕ್ಕೂ ಎಡೆ ಇದೆ ಎಂದು ಅವನು ಎಣಿಸುವನು. ಅಲ್ಲದೆ ವಿವೇಕ ಪೂರ್ವಕವಾಗಿ ಪಾಲಿಸಿದರೆ ಪ್ರತಿಯೊಂದು ಧರ್ಮವು ಆ ಆ ಜನಾಂಗದ ಕಲ್ಯಾಣ ವನ್ನು ಮಾಡಲು ಹಾಗೂ ಕಳಕಳಿಯಿದ್ದವನಿಗೆ ಸತ್ಯದ ಸಾಕ್ಷಾತ್ಕಾರವನ್ನು ಮಾಡಿಸಿ ಶಾಂತಿ-ಸಮಾಧಾನಗಳನ್ನೀಯಲು ಸಮರ್ಥವಿದೆಯೆಂದು ಅವನು ಭಾವಿಸುವನು.

೩ ಇಂತಹ ಮನುಷ್ಯನು ತನ್ನ ಧರ್ಮವೆ ಶ್ರೇಷ್ಠವೆಂದೂ ಮಾನವ ರೆಲ್ಲರೂ ತಮ್ಮ ಉದ್ಧಾರಕ್ಕಾಗಿ ತನ್ನ ಧರ್ಮವನ್ನೆ ಸ್ವೀಕರಿಸಬೇಕೆಂದೂ ಹೆಮ್ಮೆಯಿಂದ ಎಂದೂ ಹೇಳಲಾರನು, ತನ್ನ ಧರ್ಮದ ಬಗೆಗೆ ಒಣ ಹೆಮ್ಮೆ ಯನ್ನು ತಾಳಲಾರನು. ಅವನು ತನ್ನ ಧರ್ಮವನ್ನು ಎಂದೂ ಬಿಡನು. ಅದರಲ್ಲಿದ್ದ ದೋಷಗಳ ಕಡೆಗೆ ಎಂದೂ ದುರ್ಲಕ್ಷ ಮಾಡನು. ತನ್ನ ಧರ್ಮದ ಬಗೆಗೆ ತಾಳಿದಷ್ಟು ಆದರಭಾವವನ್ನು ಅನ್ಯಧರ್ಮಗಳ ಹಾಗೂ ಅನ್ಯ ಧರ್ಮಾ ವಲಂಬಿಗಳ ಬಗೆಗೂ ತಾಳುವನು. ಹಾಗೂ ಪ್ರತಿಯೊಬ್ಬನು ತನ್ನ ತನ್ನ ಧರ್ಮದ ಉತ್ತಮೋತ್ತಮವಾದ ಸಿದ್ಧಾಂತಗಳನ್ನು ಸರಿಯಾಗಿ ಪಾಲಿಸ ಬೇಕೆಂದು ಬಯಸುವನು.

೪ ನಿಂದಿಸುವ ಬುದ್ಧಿಯುಳ್ಳವನು ಪರಧರ್ಮದೊಳಗಿನ ಹುಳುಕು ಗಳನ್ನೆ ಹುಡುಕುವನು. ಆದರೆ ಸತ್ಯಶೋಧಕನು ಪ್ರತಿಯೊಂದು ಧರ್ಮ ದಲ್ಲಿ ಪ್ರಕಟವಾದ ಸತ್ಯಾಂಶವನ್ನು ಮಾತ್ರ ಗ್ರಹಿಸುವನು. ಆದುದರಿಂದ ಸತ್ಯಶೋಧಕನು ಪ್ರತಿಯೊಂದು ಧರ್ಮದವರಿಗೆ ಅವರ ಧರ್ಮದ ಸೇವಕ ನಂತೆಯೆ ತೋರುವನು. ಹೀಗೆ ಸತ್ಯಶೋಧಕನು ತನ್ನ ಜನ್ಮಧರ್ಮವನ್ನು ಬಿಡದೆ ಸರ್ವಧರ್ಮಗಳ ಅನುಯಾಯಿಯಂತೆ ಕಂಗೊಳಿಸುವನು.

## ೨ ಧರ್ಮ ಮತ್ತು ಅಧರ್ಮ

೧ ಸತ್ಯಶೋಧಕನು ಸರ್ವಧರ್ಮಗಳು ಸರಿಸಮವೆಂದು ತಿಳಿಯುವನು. ಆದರೆ ತನ್ನ ಧರ್ಮದ ಹೆಸರಿನಿಂದಾಗಲಿ ಅನ್ಯರ ಧರ್ಮದ ಹೆಸರಿನಿಂದಾಗಲಿ ಇಲ್ಲವೆ ಪ್ರತ್ಯೇಕವಾಗಿಯಾಗಲಿ ಎಲ್ಲಿಯಾದರೂ ಅಧರ್ಮವಾಗುತ್ತಿದ್ದರೆ ಅದನ್ನು ವಿರೋಧಿಸುವನು.

೨ ಪ್ರತಿಯೊಂದು ಧರ್ಮದಲ್ಲಿಯೂ ಅಲ್ಪಸ್ವಲ್ಪ ಅಪೂರ್ಣತೆ ಇದ್ದುದರಿಂದ ಪ್ರತಿಯೊಂದು ಧರ್ಮದಲ್ಲೂ ಧರ್ಮದ ಹೆಸರಿನಿಂದ ಅಧರ್ಮ ಸೇರಿಕೊಂಡಿದೆ. ಅದು ಧರ್ಮದ ಹೆಸರಿನಿಂದ ಸೇರಿದ್ದರಿಂದ ಧರ್ಮವಾವುದು ಅಧರ್ಮವಾವುದು ತಿಳಿಯದಂತಾಗಿದೆ. ಆದರೂ ಇದನ್ನು ಅರಿತುಕೊಳ್ಳಲಿಬೇಕು.

೩ ಯಾವುದೊಂದು ಧರ್ಮದಲ್ಲಿ ಆಗಿಹೋದ ಪ್ರಸಿದ್ಧ ವ್ಯಕ್ತಿಗಳ ಜೀವನ ಚರಿತ್ರೆಯಲ್ಲಿ ದೋಷವು ಕಂಡುಬಂದರೆ ಅದನ್ನೆ ಎತ್ತಿ ಆ ಧರ್ಮವನ್ನು ದೂಷಿಸುವದು ನಿಂದಕನ ರೀತಿ. ಆದರೆ ಇಂತಹ ದೋಷವನ್ನೆ ಧರ್ಮದ ಕಟ್ಟಳೆ ಎಂದು ಯಾರಾದರೂ ಆಚರಿಸಲು ಹೇಳಿದರೆ ಅದನ್ನು ವಿರೋಧಿಸಬಹುದು.

೪ ಸಾಮಾನ್ಯವಾಗಿ ಯಾವ ಆಚಾರಗಳು ಸತ್ಯಾದಿ ಯಮ ನಿಯಮಗಳನ್ನು ವಿರೋಧಿಸಿ ಧರ್ಮದ ಬೆಳವಣಿಗೆಯನ್ನು ಮಾಡದೆ ಅದರ ಮಾರ್ಗದಲ್ಲಿ ಅಡ್ಡಬಂದು ಅದನ್ನು ಕೆಡಿಸುವದೋ ಅವು ಅಧರ್ಮವೆನಿಸುವವು. ಇದನ್ನು ನಿಶ್ಚಯಿಸುವದು ಅತ್ಯಂತ ಕಠಿನವಾದುದು. ಆದರೂ ಭಕ್ತಿವಂತ ಹಾಗೂ ವಿವೇಕೀ ಸತ್ಯಶೋಧಕನಿಗೆ ಇದು ಹೊಳೆಯುವದು.

೫ ಸತ್ಯಶೋಧಕನು ಎಲ್ಲಕಡೆಗೂ ಅಧರ್ಮವನ್ನು ವಿರೋಧಿಸುವನು. ಆದರೆ ಅಧರ್ಮವು ಬೇರೆ, ಅಧರ್ಮವನ್ನು ಆಚರಿಸುವಂತಹ ವ್ಯಕ್ತಿಯು ಬೇರೆ ಎಂದು ಅವನು ತಿಳಿಯುವನು. ಅಧರ್ಮವನ್ನು ವಿರೋಧಿಸುತ್ತಿದ್ದರೂ ಅಧರ್ಮವನ್ನು ಆಚರಿಸುವ ವ್ಯಕ್ತಿಯನ್ನು ಅವನು ದ್ವೇಷಿಸುವದಿಲ್ಲ. ಅವನು ಅಧರ್ಮವನ್ನು ಸತ್ಯಮಯ ಮತ್ತು ಅಹಿಂಸಾಮಯ ಮಾರ್ಗಗಳಿಂದಲೆ ವಿರೋಧಿಸುವನು. ಅಧರ್ಮದ ನಾಶಕ್ಕಾಗಿ ಅಸತ್ಯಮಯ ಹಿಂಸಾಮಯಮಾರ್ಗವನ್ನು ಎಂದೂ ಅನುಸರಿಸನು.

## ೩ ಸತ್ಯಾಗ್ರಹ

೧ ಈ ರೀತಿಯಾಗಿ ನಾವು ಯೋಚಿಸುತ್ತ ಸತ್ಯಾಗ್ರಹತತ್ವದವರೆಗೆ

ಬಂದೆವು. ಸತ್ಯಾದಿ ಧರ್ಮಗಳನ್ನು ಸ್ವತಃ ಪಾಲಿಸಲು ಆಗ್ರಹ ಹಿಡಿಯುವದು ಮತ್ತು ಸತ್ಯಾದಿ ಸಾಧನಗಳಿಂದಲೆ ಅಧರ್ಮವನ್ನು ವಿರೋಧಿಸುವದು ಸತ್ಯಾಗ್ರಹವೆನಿಸುವದು. ಇದು ಸತ್ಯಾಗ್ರಹದ ಚಿಕ್ಕ ವ್ಯಾಖ್ಯೆ.

೨ ಅಧರ್ಮವನ್ನು ವಿರೋಧಿಸುವಾಗ ಅಹಿಂಸಾವ್ರತದ ಭಂಗವಾಗುವ ಸಂಭವವುಂಟು. ಆದ್ದರಿಂದ ಅಹಿಂಸಾಮಯ ಸಾಧನಗಳಿಂದಲೆ ಅಧರ್ಮವನ್ನು ವಿರೋಧಿಸುವುದು ಸತ್ಯಾಗ್ರಹವೆಂದು ಒತ್ತಿ ಒತ್ತಿ ಹೇಳಬೇಕಾಗಿದೆ. ಇದು ಇಂದು 'ಸತ್ಯಾಗ್ರಹ'ದ ಹೆಸರಿನಿಂದ ದೇಶದಲ್ಲಿ ನಡೆದಿರುವ ಯುದ್ಧದ ಶುದ್ಧಸ್ವರೂಪದ ಸ್ಥೂಲವಾದ ವ್ಯಾಖ್ಯೆ ಎನ್ನಬಹುದು.

೩ ಅಧರ್ಮವನ್ನು ವಿರೋಧಿಸುವುದಕ್ಕಾಗಿ ಹೂಡಬಹುದಾದ ಸತ್ಯಾಗ್ರಹ ಸಮರವನ್ನು ಕುರಿತು ಸವಿಸ್ತಾರವಾಗಿ ಮುಂದೆ ವಿವೇಚಿಸಿದೆ. ಸತ್ಯಾದಿ ಧರ್ಮಗಳ ಪಾಲನೆಗಾಗಿ ತೊಟ್ಟ ಆಗ್ರಹದಲ್ಲಿ ಸಾಧಕನಿಗೆ ಎಷ್ಟು ಸಿದ್ಧಿಯು ಸಿಗುವುದೊ ಆ ಮಟ್ಟಿಗೆ ಅಧರ್ಮವನ್ನು ವಿರೋಧಿಸಲು, ಸತ್ಯಾಗ್ರಹವನ್ನು ಹೂಡಲು ಅವನಿಗೆ ಶಕ್ತಿಯು ಉಂಟಾಗುವುದು. ಅಲ್ಲದೆ ಸತ್ಯಾಗ್ರಹದ ಯೋಗ್ಯ ರೀತಿಯೂ ಅವನಿಗೆ ಸಕಾಲಕ್ಕೆ ಹೊಳೆಯುವುದು.

೪ ಇಂತಹ ಶಕ್ತಿಯು ಸತ್ಯಾಗ್ರಾಹೀ-ಜೀವನದಿಂದ ದೊರೆಯುವುದು. ಇದೇ ಈ ಜೀವನದ ದೃಶ್ಯಫಲ. ಈ ಫಲವು ದೊರೆಯಲಿ ದೊರೆಯದಿರಲಿ, ಸತ್ಯರೂಪೀ ಪರಮಾತ್ಮನ ಸಾಕ್ಷಾತ್ಕಾರವೇ ಈ ಜೀವನದ ಕೊನೆಯಲ್ಲಿ ದೊರೆಯತಕ್ಕ ಮುಖ್ಯವಾದ ಫಲವು.

## ೪ ಹಿಂದೂ ಧರ್ಮ

೧ ಹಿಂದೂಧರ್ಮಾವಲಂಬಿಗೆ ಹಿಂದೂ ಧರ್ಮವು ಸಾಕಷ್ಟು ಪರಿಪೂರ್ಣವಿದೆ. ತನ್ನ ಅಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲು ಸತ್ಯಶೋಧಕನಿಗೆ ಈ ಧರ್ಮದಲ್ಲಿ ಸಾಕಷ್ಟು ಸಾಧನ-ಸಾಮಗ್ರಿಯು ಸಿಕ್ಕುವುದು.

೨ ಶ್ರುತಿ, ಸ್ಮೃತಿ, ಪುರಾಣ, ಇತಿಹಾಸ, ಸಂತರ ಸಂಸ್ಕೃತ ಪ್ರಾಕೃತ ವಚನಗಳು ಮೊದಲಾದವು ಹಿಂದೂಧರ್ಮದ ಧರ್ಮಗ್ರಂಥಗಳು. ಈ ಗ್ರಂಥಗಳಲ್ಲಿ ಬೇರೆ ಬೇರೆ ಋಷಿಗಳು, ಮುನಿಗಳು, ಕವಿಗಳು ಮತ್ತು ವಿಚಾರಿಗಳು ಧರ್ಮದ ಭಿನ್ನ ಭಿನ್ನ ಅಂಗಗಳನ್ನು ನಾನಾವಿಧದಿಂದ ವಿವೇಚಿಸಿ ತಿಳಿಸಿರುವರು. ಈ ಎಲ್ಲರ ವಚನಗಳ ಬೆಲೆಯು ಒಂದೇ ಸಮನಾಗಿದೆಯೆಂದು ಹೇಳಲಿಕ್ಕಾಗುವದಿಲ್ಲ. ಅವುಗಳಲ್ಲಿ ಗ್ರಹಿಸಲಿಕ್ಕೆ ಯೋಗ್ಯವಾದವುಗಳೂ

ಎಷ್ಟೋ ಉಂಟು. ನೀರಕ್ಷೀರನ್ಯಾಯದಿಂದ ನೋಡುವ ಜಿಜ್ಞಾಸುವಿಗೆ ತನ್ನ ಧರ್ಮಪ್ರವೃತ್ತಿಗೆ ಪೋಷಕವಾಗುವಂತಹ ಸಾಕಷ್ಟು ಸಾಹಿತ್ಯವು ಈ ಧರ್ಮಗ್ರಂಥಗಳಲ್ಲಿ ಸಿಕ್ಕುವದು.

೩ ಸನಾತನ ಹಿಂದೂ ಧರ್ಮಕ್ಕೆ ಓರ್ವ ಸಚ್ಚಿದಾನಂದ ಪರಮಾತ್ಮನೆ ಮಾನ್ಯನು- ಅವನು ಮನಕ್ಕೆ ಮತ್ತು ವಾಣಿಗೆ ನಿಲುಕದವನು. ಎಲ್ಲವೂ ಪರಮಾತ್ಮರೂಪ ಎಂಬುದೊಂದು ಸಿದ್ಧಾಂತವಿದೆ. ಈ ಮೂಲಕ ಹಾಗೂ ವಿಭೂತಿಗಳ ಸಿದ್ಧಾಂತದ ಮೂಲಕ ಹಿಂದೂಧರ್ಮದಲ್ಲಿ ಉಪಾಸಕನು ತನ್ನ ರುಚಿಗನುಸಾರವಾಗಿ ನಾನಾಬಗೆಯ ಕಲ್ಪನೆಗಳಿಂದ ಮತ್ತು ಉಪಮೆಗಳಿಂದ ನಾನಾತರದ ಆದರ್ಶಗಳನ್ನು ತೋರಿಸುವಂತಹ ದೇವದೇವಿಯರನ್ನು ಸ್ತುತಿಸಲಿಕ್ಕೂ ಐತಿಹಾಸಿಕ ಪುರುಷರು ಅವತಾರಿ ಪುರುಷರೆಂದು ವರ್ಣಿಸಲಿಕ್ಕೂ ಅವರ ಹಾಗೂ ಸದ್ಗುರುವಿನ ಉಪಾಸನೆಯನ್ನು ಮಾಡಲಿಕ್ಕೂ ಸ್ವತಂತ್ರನು. ಸನಾತನ ಹಿಂದೂ ಧರ್ಮವು ಈ ನಿರಾಕಾರ ಮತ್ತು ಸಾಕಾರ ಉಪಾಸನೆಗಳಲ್ಲಿ ಭೇದವನ್ನು ಕಲ್ಪಿಸದೆ ಇವೆರಡರಲ್ಲೂ ಐಕ್ಯವನ್ನುಂಟುಮಾಡುವದು. ಆದುದರಿಂದಲೆ ಸನಾತನ ಹಿಂದೂಧರ್ಮದಲ್ಲಿ ಮೂರ್ತಿಪೂಜೆಯು ನಿಷೇಧಿಸಲ್ಪಟ್ಟಿಲ್ಲ.

೪ ಸನಾತನ ಹಿಂದೂ ಧರ್ಮಕ್ಕೆ ಪುನರ್ಜನ್ಮದ ಮತ್ತು ಮೋಕ್ಷದ ಸಿದ್ಧಾಂತಗಳು ಸಮ್ಮತವಿರುವವು. ಹಿಂದೂ ಧರ್ಮದಲ್ಲಿ ಮೋಕ್ಷವೇ ಶ್ರೇಷ್ಠವಾದ ಅಂತಿಮ ಪುರುಷಾರ್ಥವೆಂದು ಎಣಿಸಲ್ಪಟ್ಟಿದೆ. ಇದನ್ನು ಸಂಪಾದಿಸುವುದಕ್ಕಾಗಿ ಯಮ ನಿಯಮ, ವ್ರತಸಂಯಮ, ತೀರ್ಥಯಾತ್ರೆ ಮುಂತಾದವು ಸಾಧನಗಳು ಎಂದು ತಿಳಿಯಲ್ಪಟ್ಟಿವೆ.

೫ ಸನಾತನ ಹಿಂದೂ ಧರ್ಮದಲ್ಲಿ ವರ್ಣಾಶ್ರಮವ್ಯವಸ್ಥೆಗೆ ಮಹತ್ವದ ಸ್ಥಾನವಿದೆ. ವರ್ಣಾಶ್ರಮವ್ಯವಸ್ಥೆಯೆ ಹಿಂದೂ ಧರ್ಮದ ವೈಶಿಷ್ಟ್ಯವೆನ್ನಬಹುದು. ಹಿಂದೂ ಧರ್ಮಕ್ಕೆ ವರ್ಣಾಶ್ರಮ ಧರ್ಮವೆಂದರೂ ನಡೆಯುವುದು. ಇದೇ ರೀತಿಯಾಗಿ ಗೋರಕ್ಷಣೆಯು ಹಿಂದೂ ಧರ್ಮದ ಸ್ಥೂಲವಾದ ಬಾಹ್ಯ ಸ್ವರೂಪವು ಎನ್ನಬಹುದು. ವರ್ಣಾಶ್ರಮವ್ಯವಸ್ಥೆ ಮತ್ತು ಗೋರಕ್ಷಣೆಯ ವಿಷಯವಾಗಿ ಮುಂದೆ ವಿಸ್ತಾರವಾಗಿ ವಿಚಾರ ಮಾಡಲ್ಪಟ್ಟಿದೆ.

೬ 'ವೈಷ್ಣವ ಜನ ತೋ ತೇನೆ ಕಹೀಯೆ' ಎಂಬ ಪದದಲ್ಲಿ ಕೊಟ್ಟಿರುವ ಲಕ್ಷಣಗಳು ಸನಾತನ ಹಿಂದೂಧರ್ಮದ ನಿಜವಾದ ಲಕ್ಷಣಗಳು.

## ೫ ಗೀತಾ - ರಾಮಾಯಣ

೧ ಹಿಂದೂ ಧರ್ಮದಲ್ಲಿ ಅನೇಕ ಮಾನನೀಯ ಗ್ರಂಥಗಳಿವೆ. ಅವು ಗಳಲ್ಲಿ ನಿತ್ಯ ಉಪಯೋಗಕ್ಕಾಗಿ ಗಹನವಾದ ಅಭ್ಯಾಸವನ್ನು ಮತ್ತು ಮನನ ವನ್ನು ಮಾಡಲು ಸಂಸ್ಕೃತದಲ್ಲಿ 'ಗೀತೆ' ಇದೆ, ಹಿಂದೀಯಲ್ಲಿ ಗೋಸ್ವಾಮೀ ತುಲಸೀದಾಸರ 'ರಾಮಚರಿತ ಮಾನಸ' ಇದೆ. ಇವೆರಡೂ ಅತ್ಯಂತ ಮಹತ್ವದ ಹಾಗೂ ಸಾಧಾರಣತಃ ಸಾಕಷ್ಟು ಪೂರ್ಣವಾದ ಗ್ರಂಥಗಳು.

೨ ತತ್ವಜ್ಞಾನನಿರೂಪಣೆ ಮತ್ತು ಸೂಕ್ಷ್ಮವಿವೇಚನೆಯ ದೃಷ್ಟಿಯಿಂದ ನಮ್ಮಲ್ಲಿ ಗೀತೆಯುಂಟು, ಕಾವ್ಯಮಯ ಕತೆಗಳ ಮೂಲ ಸುಲಭವಾದ ಶೈಲಿಯಲ್ಲಿ ಧರ್ಮ, ಭಕ್ತಿ, ಜ್ಞಾನ, ವೈರಾಗ್ಯ ಮುಂತಾದವುಗಳನ್ನು ಸಾಮಾನ್ಯ ಜನರಿಗೂ ತಿಳಿಯುವಂತೆ ನಿರೂಪಿಸುವ ದೃಷ್ಟಿಯಿಂದ ತುಲಸೀದಾಸರ ರಾಮಾಯಣವುಂಟು. ಇವೆರಡೂ ಹಿಂದೂ ಧರ್ಮದ ಅದ್ವಿತೀಯ ಗ್ರಂಥಗಳು.

೩. ಅನಾಸಕ್ತಿಯೋಗವು ಗೀತೆಯ ಪಲ್ಲವಿ. ಕರ್ಮಫಲದಾಸೆಯನ್ನು ಬಿಟ್ಟು ಕರ್ತವ್ಯಕರ್ಮವನ್ನು ಸತತ ಮಾಡುತ್ತ ಹೋಗಬೇಕೆಂದು ಈ ಗ್ರಂಥವು ಎಂದೂ ಮರೆಯದಂತಹ ರೀತಿಯಲ್ಲಿ ಉಪದೇಶಿಸುತ್ತದೆ. ಇದರಲ್ಲಿ ಕರ್ಮ ಮಾತ್ರದ ನಿಷೇಧವಿಲ್ಲ. ಹಾಗೆಯೆ ಕರ್ಮದಲ್ಲಿ ಒಳಿತು ಯಾವುದು ಕೆಡುಕು ಯಾವುದು ಎಂದು ವಿಚಾರಿಸಬಾರದೆಂದೂ ಹೇಳಿಲ್ಲ. ಇದರಲ್ಲಿ ದುಷ್ಕರ್ಮದ ನಿಷೇಧವೂ ಫಲಾಸಕ್ತಿಯನ್ನು ಬಿಟ್ಟು ಸತ್ಕರ್ಮವನ್ನು ಮಾಡುವ ವಿಧಿಯೂ ಉಕ್ತವಾಗಿದೆ. ಸತ್ಯ ಅಹಿಂಸಾದಿ ವ್ರತಗಳನ್ನು ಸಂಪೂರ್ಣವಾಗಿ ಪಾಲಿಸಿದ ಹೊರತು ಈ ಯೋಗದಲ್ಲಿ ಸಿದ್ಧಿಯನ್ನು ಪಡೆಯುವದು ದುರ್ಲಭವು.

೪ ಗೀತೆಯ ಪಠನ, ವಾಚನ ಮತ್ತು ಮನನ ಇವು ಎಂದೂ ಹಳೆಯ ವಾಗುವದಿಲ್ಲ. ಇದರಲ್ಲಿಯ ತತ್ವಗಳನ್ನು ಯೋಚಿಸುತ್ತ ಹೋದಂತೆ, ಅವು ಗಳಂತೆ ಕರ್ಮವನ್ನು ಮಾಡುತ್ತ ಹೋದಂತೆ ಇದರ ಪುನರಾವೃತ್ತಿಯೊಳಗಿಂದ ಹೊಸ ಹೊಸ ಬೆಳಕು ತಲೆದೋರುವದು. ಇಷ್ಟೇ ಅಲ್ಲ, ಗೀತೆಯಲ್ಲಿ ಬಂದಿರುವ ಮಹಾ ಶಬ್ದಗಳ ಅರ್ಥವು ಯುಗಯುಗಕ್ಕೂ ಬದಲಾವಣೆ ಯನ್ನು ಹೊಂದಿ ವಿಶಾಲವಾಗುವದು.

ತೃತೀಯ ಖಂಡ

# ಸಮಾಜ

---

## ೧ ವರ್ಣಾಶ್ರಮ

೧ ಹಿಂದೂ ಧರ್ಮದ ನಿಜವಾದ ಹೆಸರು ವರ್ಣಾಶ್ರಮ ಧರ್ಮವೆಂದು ಹಿಂದೆ ಹೇಳಲಾಗಿದೆ. ವರ್ಣವ್ಯವಸ್ಥೆಯೆ ಹಿಂದೂ ಧರ್ಮದ ವಿಶೇಷ ಲಕ್ಷಣ. ಇದರ ಮೂಲವು ವೇದದಲ್ಲಿದೆ.

೨ ಪ್ರತಿಯೊಂದು ಧರ್ಮದಲ್ಲಿಯೂ ಒಂದಿಲ್ಲೊಂದು ವೈಶಿಷ್ಟ್ಯವು ಇದ್ದೇ ಇದೆ. ವರ್ಣಾಶ್ರಮ ಧರ್ಮವೆಂಬ ಹೆಸರು ಹಿಂದೂಧರ್ಮದ ಜೀವಾಳವನ್ನು ಸೂಚಿಸುತ್ತದೆ.

೩ ಆದುದರಿಂದ ಹಿಂದೂ ಧರ್ಮಕ್ಕೆ ಸೇರಿದವನು ವರ್ಣಾಶ್ರಮವನ್ನು ಉಪೇಕ್ಷಿಸಲಾರನು. ಈ ರೂಢಿಯಲ್ಲಿ ಏನಾದರೂ ದೋಷವು ಕಂಡರೆ ಅದನ್ನು ಜ್ಞಾನಪೂರ್ವಕವಾಗಿ ಬಿಡುವದು ಒಳಿತು. ಈ ರೂಢಿಯು ಹಿಂದೂ ಧರ್ಮದ ನಿರ್ದೋಷ ವೈಶಿಷ್ಟ್ಯವಾಗಿದ್ದ ಪಕ್ಷದಲ್ಲಿ(ಇದೆಯೆಂದೇ)ಅದನ್ನು ರಕ್ಷಿಸ ತಕ್ಕದ್ದು, ಅದರ ಪುನರುದ್ಧಾರವನ್ನು ಮಾಡತಕ್ಕದ್ದು.

೪ ವರ್ಣಾಶ್ರಮವ್ಯವಸ್ಥೆಯೆಂದರೆ ಮನಬಂದಂತೆ ಮಾಡಿದ ಸಮಾಜ ರಚನೆಯಲ್ಲ. ಇದರ ತಳಹದಿಯಲ್ಲಿ ಸಿದ್ಧಾಂತಗಳ ಜ್ಞಾನವುಂಟು. ಎಂದರೆ ಮಾನವಸಮಾಜದ ಉನ್ನತಿಗೆ ಅವಶ್ಯವಿದ್ದ ನಿಯಮಗಳ ಜ್ಞಾನವುಂಟು.

೫ ಆದುದರಿಂದ ವರ್ಣಾಶ್ರಮವು ಹುಟ್ಟಿದ್ದು ಹಿಂದೂಧರ್ಮದಲ್ಲಿಯೆ ನಿಜವಿದ್ದರೂ ಆ ಪದ್ಧತಿಯಲ್ಲಿ ಹಿಂದುಗಳಿಗೆ ಮಾತ್ರ ಲಾಭದಾಯಕವಾದ ಸಿದ್ಧಾಂತಗಳು ಇವೆ. ಉಳಿದ ಧರ್ಮದವರಿಗೆ ಇಲ್ಲ ಎಂದು ತಿಳಿಯಕೂಡದು. ಜಗತ್ತು ಇಂದು ಈ ಪದ್ಧತಿಯನ್ನು ಸ್ವೀಕರಿಸಲಿಕ್ಕಿಲ್ಲ. ಸ್ವೀಕರಿಸದಿದ್ದರೆ ಆ ಮಟ್ಟಿಗೆ ಜಗತ್ತಿಗೇ ಹಾನಿಯಾಗುವದು. ಇಂದಿಲ್ಲ ನಾಳೆಯಾದರೂ ಈ ವ್ಯವಸ್ಥೆಯನ್ನು ಎಲ್ಲರೂ ಸ್ವೀಕರಿಸಲೆಬೇಕಾಗುವದು.

೬ ಆದರೆ ಇಂದು ವರ್ಣ ಮತ್ತು ಆಶ್ರಮ ಈ ಎರಡೂ ವಸ್ತುಗಳ ಲೋಪವೂ ಆಗಿದೆ. ಇವುಗಳ ಹೆಸರು ಕೂಡ ಈಗ ಕೇಳಬರುವದಿಲ್ಲ.

ಇವುಗಳಂತೆ ಕರ್ಮವೂ ನಡೆಯುತ್ತಿರುವದಿಲ್ಲ. ವರ್ಣದ ಹೆಸರಿನ ಲೋಪವು ಆಗದಿದ್ದರೂ ತದನುಸಾರ ಕರ್ಮದ ಲೋಪವು ಆಗಿಯೆಬಿಟ್ಟಿದೆ.

ನಾವು ಇವೆರಡನ್ನೂ ಕುರಿತು ಅನುಕ್ರಮವಾಗಿ ಯೋಚಿಸುವಾ.

## ೨ ವರ್ಣಧರ್ಮ

೧ ವರ್ಣವೆಂದರೆ ಉದ್ಯೋಗ, ಧಂದೆ, ಕಾಯಕ. ವರ್ಣಧರ್ಮದ ಸಿದ್ಧಾಂತವನ್ನು ಸಂಕ್ಷೇಪವಾಗಿ ಹೀಗೆ ಮಂಡಿಸಬಹುದು: ಯಾವನು ಯಾವ ಕುಟುಂಬದಲ್ಲಿ ಹುಟ್ಟಿರುವನೊ ಅವನು ಆ ಕುಟುಂಬದ ಉದ್ಯೋಗವನ್ನು ಅದು ನೀತಿಗೆ ವಿರುದ್ಧವಾಗಿರದಿದ್ದರೆ, ಧರ್ಮಭಾವನೆಯಿಂದ ಮಾಡಬೇಕು ಮತ್ತು ಅದರಿಂದ ದೊರೆತ ಲಾಭದಲ್ಲಿ ತನ್ನ ಉಪಜೀವನಕ್ಕೆ ಬೇಕಾಗುವಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದುದನ್ನು ಸಾರ್ವಜನಿಕ ಕಲ್ಯಾಣಕ್ಕಾಗಿ ವಿನಿಯೋಗಿಸಬೇಕು.

೨ ವರ್ಣವೆಂದರೆ ಒಂದು ಧರ್ಮವು, ಅದು ಅಧಿಕಾರವಲ್ಲ. ಪ್ರತಿಯೊಂದು ವರ್ಣವೂ ತನ್ನ ತನ್ನ ಕರ್ಮವನ್ನು ಧರ್ಮವೆಂದು ತಿಳಿದು ಮಾಡತಕ್ಕದ್ದು, ಎಂಬುದೇ ಅದರ ತಾತ್ಪರ್ಯ. ಉದರಪೋಷಣೆ ಎಂಬುದು ಇದರಿಂದ ಆಗುವ ಅಲ್ಪ ಫಲವು. ಇದು ದೊರೆಯಲಿ ಬಿಡಲಿ, ಇದನ್ನರಿತವರು ತಮ್ಮ ಧರ್ಮದಲ್ಲಿ ತೊಡಗಿರತಕ್ಕದ್ದು.

೩ ಈ ವರ್ಣಗಳಲ್ಲಿ ಒಂದು ನೀಚವಾದುದು ಇನ್ನೊಂದು ಉಚ್ಚವಾದುದು ಎಂಬ ಭೇದವಿಲ್ಲ. ಎಲ್ಲ ವರ್ಣಗಳೂ ಸರಿಸಮಾನವಾದವು ಎಂಬುದೆ ಇದರ ಅರ್ಥವು.

೪ ಸಾಮಾನ್ಯವಾಗಿ ಜನ್ಮದಿಂದಲೆ ವರ್ಣವನ್ನು ನಿಶ್ಚಯಿಸಬೇಕು. ಕೆಲವು ಕಡೆಗಳಲ್ಲಿ ಕರ್ಮದಂತೆ ವರ್ಣವನ್ನು ನಿಶ್ಚಯಿಸಬಹುದು. ಸಾಮಾನ್ಯವಾಗಿ ನೋಡಿದರೆ ತಂದೆ-ತಾಯಂದಿರು ಮಾಡುತ್ತ ಬಂದಿರುವ ಉದ್ಯೋಗವನ್ನೇ ಮಾಡುವ ಕಲೆಯು ಮನುಷ್ಯನ ಸ್ವಭಾವಕ್ಕೆ ಸಹಜವಾದುದು. ಈ ನಿಯಮವು ಸರ್ವವ್ಯಾಪಕವಾಗಿರುವದು. ತಿಳಿದು ಇಲ್ಲವೆ ತಿಳಿಯದೆ ಎಲ್ಲರೂ ತಕ್ಕಮಟ್ಟಿಗೆ ಇದನ್ನು ಪಾಲಿಸುವರು. ಹಿಂದೂ ಜನರ ಪೂರ್ವಜರು ಅತ್ಯಂತ ಕಠಿಣ ತಪಶ್ಚರ್ಯ ಮಾಡಿ ಈ ಮಹಾ ಧರ್ಮವನ್ನು ಕಂಡುಹಿಡಿದರು, ಕೈಲಾದಮಟ್ಟಿಗೆ ಅದನ್ನು ಆಚರಿಸಿದರು. ಜಗತ್ತು ಈ ಧರ್ಮವನ್ನು ಅನುಸರಿಸಿದರೆ ಎಲ್ಲ ಕಡೆಗಳಲ್ಲಿ ಶಾಂತಿಯು ನೆಲೆಗೊಳ್ಳುವದು, ಹೊಟ್ಟೆಕಿಚ್ಚಿ

ನಿಂದ ನಡೆಯುವ ಮೇಲಾಟಗಳು ನಿಲ್ಲುವವು. ಅಸೂಯೆಯು ಇಲ್ಲದಂತಾಗುವದು, ಯಾರೂ ಅನ್ನಾನ್ನಗತಿಕರಾಗಿ ಸಾಯರು, ಜನನ-ಮರಣದ ಸಂಖ್ಯೆಯು ಸಮವಾಗುವುದು ಅಲ್ಲದೆ ಅನೇಕ ದುಃಖಗಳು ದೂರಾಗುವವು.

೫ ಈ ಧರ್ಮವ್ಯವಸ್ಥೆಯಲ್ಲಿ ಬ್ರಾಹ್ಮಣನು ಬ್ರಹ್ಮನನ್ನು ಅರಿತುಕೊಳ್ಳುವುದರಲ್ಲೂ ಜನರಿಗೆ ಅವನನ್ನು ಅರಿಯುವ ಮಾರ್ಗವನ್ನು ಉಪದೇಶಿಸುವುದರಲ್ಲೂ ಕಾಲ ಕಳೆಯುವನು, ತನ್ನ ಉಪಜೀವನವನ್ನು ಪರಮಾತ್ಮನೆ ಸಾಗಿಸುವನೆಂದು ತಿಳಿಯುವನು. ಕ್ಷತ್ರಿಯನು ಪ್ರಜಾಪಾಲನೆಯೆ ತನ್ನ ಧರ್ಮವೆಂದು ತಿಳಿಯುವನು ಮತ್ತು ಅದಕ್ಕೆ ಪ್ರತಿಫಲವಾಗಿ ತನ್ನ ಉಪಜೀವನಕ್ಕೆ ಬೇಕಾಗುವಷ್ಟು ಮಾತ್ರ ದ್ರವ್ಯವನ್ನು ತೆಗೆದುಕೊಳ್ಳುವನು. ವೈಶ್ಯನು ಪ್ರಜರ ಕಲ್ಯಾಣಕ್ಕಾಗಿ ಒಕ್ಕಲುತನ, ಗೋಪಾಲನೆ ಮತ್ತು ವ್ಯಾಪಾರವನ್ನು ಮಾಡುವನು. ಇವರಿಂದ ಪ್ರಾಪ್ತವಾದ ಧನದಲ್ಲಿ ತನ್ನ ಜೀವನನಿರ್ವಾಹಕ್ಕೆ ಬೇಕಾಗುವಷ್ಟನ್ನು ಮಾತ್ರ ತೆಗೆದುಕೊಂಡು ಉಳಿದುದನ್ನೆಲ್ಲ ಜನಹಿತಕ್ಕಾಗಿ ವಿನಿಯೋಗಿಸುವನು. ಇದೇ ರೀತಿ ಶೂದ್ರನೂ ಸೇವೆಯೇ ತನ್ನ ಧರ್ಮವು ಎಂದು ತಿಳಿದು ಅದನ್ನು ಮಾಡುವನು.

೬ ಈ ವ್ಯವಸ್ಥೆಯ ಪ್ರಕಾರ ಆ ಆ ಮನುಷ್ಯನು ತನ್ನ ಬಳಿಯಲ್ಲಿದ್ದ ಯಾವುದೇ ಬಗೆಯ ಸೊತ್ತಿನ ಒಡೆಯನಾಗದೆ ಸಮಾಜದ ಸಲುವಾಗಿ ಅದರ ಧರ್ಮದರ್ಶಿ (trustee) ಯಾಗುವನು. ತಾನು ಅದರ ಒಡೆಯನೆಂದು ಅವನು ತಿಳಿದುಕೊಳ್ಳಲಾಗದು. ರಾಜನು ತನ್ನ ಅರಮನೆಯ ಹಾಗೂ ಪ್ರಜರಿಂದ ತೆಗೆದುಕೊಂಡ ಕರದ ಯಜಮಾನನಲ್ಲ; ಆದರೆ ಅವುಗಳ ಧರ್ಮದರ್ಶಿ. ತನ್ನ ಹೊಟ್ಟೆ ಬಟ್ಟೆಗೆ ಬೇಕಾಗುವಷ್ಟು ತೆಗೆದುಕೊಂಡು ಉಳಿದುದೆಲ್ಲವನ್ನೂ ಪ್ರಜರ ಕಲ್ಯಾಣಕ್ಕಾಗಿ ವಿನಿಯೋಗಿಸಲು ಅವನು ಬದ್ಧನು. ತನ್ನ ಕಾರ್ಯದಕ್ಷತೆಯಿಂದ ತನ್ನ ಉತ್ಪನ್ನವನ್ನು ಬೆಳೆಯಿಸಿಕೊಂಡು ಆದಷ್ಟು ಹೆಚ್ಚಿಗೆ ಲಾಭವನ್ನು ಪ್ರಜರಿಗೆ ಒಂದಿಲ್ಲೊಂದು ರೀತಿಯಿಂದ ಅವನು ಹಿಂತಿರುಗಿ ಕೊಡುವನು. ಇದೇ ಪ್ರಕಾರ ವೈಶ್ಯನೂ ಮಾಡುವನು.

೭ ಶೂದ್ರನ ವಿಷಯವಾಗಿ ಏನು ಹೇಳೋಣ? ಅವನ ಹತ್ತಿರ ಯಾವ ಆಸ್ತಿಯೂ ಇರುವುದಿಲ್ಲ. ಆದ್ದರಿಂದ ಯಾವ ಶೂದ್ರನು ತನ್ನ ಧರ್ಮವೆಂದು ತಿಳಿದು ಸೇವೆ ಮಾಡುವನೊ ಮತ್ತು ಒಡೆಯನಾಗಲು ಹವಣಿಸನೊ ಅವನು ಆದರ-ವಂದನೆಗಳಿಗೆ ಪಾತ್ರನು. ಎಲ್ಲರಿಗಿಂತಲೂ ಅವನೇ ಶ್ರೇಷ್ಠನು.

೮ ಮೂರೂ ವರ್ಣದವರು ತಾವು ಪ್ರಜರ ಸೇವಕರೆಂದು ತಿಳಿದುಕೊಂಡು

ತಮ್ಮಲ್ಲಿದ್ದ ಆಸ್ತಿಯನ್ನು ಸಾರ್ವಜನಿಕ ಕಾರ್ಯಕ್ಕಾಗಿ ಉಪಯೋಗಿಸುತ್ತಿದ್ದರೆ ಮಾತ್ರ ಶೂದ್ರನ ಸೇವಾಧರ್ಮವನ್ನು ಹೊಗಳಿದರೆ ಶೋಭಿಸುವುದು. ಅವನ ಮೇಲೆ ಈ ಸೇವಾಧರ್ಮವನ್ನು ಬಲದಿಂದ ಹೊರಿಸಲಿಕ್ಕಾಗದು.

೯ ವರ್ಣಧರ್ಮದ ಶೋಧಕರು, ವರ್ಣವು ಧರ್ಮವೆಂದು ತಿಳಿದು ಅದನ್ನು ಆಚರಿಸಬೇಕೆಂದೂ ಆ ಆಚರಣೆಯಲ್ಲಿ ಬಲಾತ್ಕಾರವು ಎಳ್ಳಷ್ಟೂ ಇರಕೂಡದೆಂದೂ ಹೇಳುತ್ತಾರೆ. ಜಗತ್ತು ಜೀವಿಸಿರುವದೂ ಉದ್ಧಾರಹೊಂದುವುದೂ ಇದನ್ನು ಪಾಲಿಸುವದರಿಂದಲೆ. ಈ ಪ್ರಕಾರವಾಗಿ ತಿಳಿದುಕೊಂಡು ಪ್ರತಿಯೊಬ್ಬನು ತನ್ನ ತನ್ನ ವರ್ಣಧರ್ಮವನ್ನು ಪಾಲಿಸುತ್ತ ಸತ್ತುಹೋಗಬೇಕು, ಆದರೆ ಬೇರೆಯವರಿಗೆ ಇದನ್ನು ಪಾಲಿಸಲು ಬಲವಂತ ಪಡಿಸಬಾರದು.

೧೦ ಈ ಧರ್ಮದ ಪಾಲನೆಯು ಬಲ್ಲವರಿಗೆ ಬಹು ಸುಲಭ.

೧೧ ಈ ರೀತಿಯ ವರ್ಣಧರ್ಮವು ಸಮತೆಯ ಧರ್ಮವು. ಕೇವಲ ಸಾಮ್ಯ 'ವಾದ' ವಲ್ಲ. ಈ ಧರ್ಮದಿಂದ ಜಗತ್ತಿನಲ್ಲಿರುವ ವೈಷಮ್ಯಗಳ ಬದಲು ಸರಿ ಸಮಾನತೆಯ ಸಾಮ್ರಾಜ್ಯವುಂಟಾಗುವದು. ಎಲ್ಲ ಧಂದೆಗಳೂ ಉಚ್ಚವೆಂದೆನಿಸುವವು, ಎಲ್ಲವುಗಳ ಬೆಲೆಯೂ ಒಂದೇ ಆಗುವದು. ಅರಸರು ಮಂತ್ರಿಗಳು ಮೊದಲುಗೊಂಡು ಭಂಗಿಯ ವರೆಗಿನವರೆಲ್ಲರೂ ಸರಿಸಮಾನರೆಂದು ಎಣಿಸಲ್ಪಡತಕ್ಕದ್ದು. ಅವರೆಲ್ಲರ ಗಳಿಕೆ ಅಥವಾ ಉತ್ಪನ್ನ ಸರಿಸಮಾನವಿರತಕ್ಕದ್ದು. ಮೂರೂ ವರ್ಣಗಳು ಹೆಚ್ಚುಗಳಿಸುವದು, ಶೂದ್ರನು ಕಡಿಮೆ ಗಳಿಸುವದು, ಅಥವಾ ಕ್ಷತ್ರಿಯನು ಅರಮನೆಯಲ್ಲಿ ವಾಸಿಸುವದು, ಬ್ರಾಹ್ಮಣನು ಭಿಕ್ಷುಕವೃತ್ತಿಯಿಂದ ಗುಡಿಸಲಿನಲ್ಲಿರುವದು ವೈಶ್ಯನು ದೊಡ್ಡ ದೊಡ್ಡ ಹೊಲಮನೆ ಮಾಡಿಕೊಂಡು ಇರುವದು, ಉಗ್ರಾಣಗಳನ್ನು ಕಟ್ಟಿಸಿಕೊಂಡಿರುವದು, ಮತ್ತು ಶೂದ್ರನು ಮನೆಮಾರು ಇಲ್ಲದೆ ಗುಲಾಮನಾಗಿರುವದು, ಇಂತಹ ಕರುಣಾಜನಕ ಸ್ಥಿತಿಯು ವರ್ಣಧರ್ಮದ ಪಾಲನೆಯಾಗುತ್ತಿದ್ದ ಕಡೆಯಲ್ಲಿ ಇರಲಾರದು, ಇರತಕ್ಕದ್ದಲ್ಲ.

೧೨ ಈ ತರದ ವರ್ಣಧರ್ಮವು ಈಗ ಇಲ್ಲದಂತಾಗಿದೆ. ಎಷ್ಟೋ ಜನರು ತಾವು ಬ್ರಾಹ್ಮಣರು, ಕ್ಷತ್ರಿಯರು, ಇಲ್ಲವೆ ವೈಶ್ಯರು ಎಂದು ಕರೆದುಕೊಳ್ಳುತ್ತಾರೆ. ಶೂದ್ರರು ಎನಿಸಿಕೊಳ್ಳಲು ಎಲ್ಲರೂ ನಾಚುತ್ತಾರೆ. ಇದರಿಂದ ವರ್ಣಗಳು ಹೆಸರಿಗೆ ಮಾತ್ರ ಉಳಿದಿವೆಯನ್ನಬಹುದು. ಆದರೂ ವರ್ಣಧರ್ಮದ ಮೇರೆಗೆ ವ್ಯವಹಾರದಲ್ಲಿ ನಾವು ಶೂದ್ರರಾಗಿದ್ದೇವೆ. ನಿಜವಾಗಿ ಶೂದ್ರರೂ ಅಲ್ಲವೆಂದು ಹೇಳಬೇಕಾಗಿದೆ. ಏಕೆಂದರೆ ಶೂದ್ರವರ್ಣವೂ ಧರ್ಮವೇ. ಅದನ್ನು

ಸ್ವೇಚ್ಛೆಯಿಂದ ಸ್ವೀಕರಿಸಬೇಕಾಗುವುದು. ಅಲ್ಲಿ ನಾಚಿಕೆಗೆ ಎಡೆಯಿಲ್ಲ. ಪರಿಸ್ಥಿತಿ ಹೀಗೆ ಇಲ್ಲದೆ ಇದ್ದ ಮೇಲೆ ನಾವೂ ಕಾಲಮಾನಕ್ಕೆ ವಶರಾಗಿದ್ದೇವೆ, ಅರ್ಥಾತ್ ಗುಲಾಮರಾಗಿದ್ದೇವೆ ಎಂದ ಹಾಗಾಯಿತು.

೧೩ ಯಾರು ಯಾವ ವರ್ಣದ ಕಾರ್ಯಮಾಡುವನೊ ಅವನು ಆ ವರ್ಣದವನೆಂದು ಎಣಿಸಬೇಕು. ಆ ಆ ವರ್ಣದವರು ಮಾಡತಕ್ಕ ಆ ಆ ಕಾರ್ಯಗಳು ನಡೆದೇ ಇರುವವು; ಆದ್ದರಿಂದ ವರ್ಣಧರ್ಮವು ಲೋಪವಾಗಿಲ್ಲ ಎಂದು ಹೇಳುವದು ಸರಿಯಲ್ಲ. ಏಕೆಂದರೆ ಕರ್ಮಗಳೆಲ್ಲ ಮಿಶ್ರವಾದಾಗ, ಎಲ್ಲ ಜನರು ತಮ್ಮ ಮನಸ್ಸಿಗೆ ಬಂದ ಕರ್ಮಗಳನ್ನು ಮಾಡುತ್ತಿರುವಾಗ ಅಲ್ಲಿ ಇರುವುದು ವರ್ಣಧರ್ಮದ ಪಾಲನೆಯಲ್ಲ. ವರ್ಣಸಂಕರ ಎನ್ನಬಹುದು.

೧೪ ವರ್ಣದಲ್ಲಿ ಉಚ್ಚನೀಚ ಭಾವನೆಗೆ ಎಡೆಯಿಲ್ಲ. ಆದರೆ ಬಹು ದಿನಗಳಿಂದ ಹಿಂದೂ ಧರ್ಮದಲ್ಲಿ ಧರ್ಮದ ಹೆಸರಿನಲ್ಲಿ ಉಚ್ಚನೀಚವೆಂಬ ಭಾವನೆಯು ಬೇರೂರಿದೆ. ಇದು ಹಿಂದೂ ಧರ್ಮದ ಕು-ರೂಪ, ವಿಕಟರೂಪ. ಇಂದು ಪ್ರಪಂಚದಲ್ಲಿ ನಡೆದಿರುವ ಕಲಹಗಳಿಗೆಲ್ಲ ಈ ಉಚ್ಚನೀಚ ಭಾವನೆಯೆ ಮುಖ್ಯ ಕಾರಣ. ಈ ಕಲಹಗಳು ಇಲ್ಲದಂತಾಗಬೇಕಾದರೆ ವರ್ಣಧರ್ಮದ ಪಾಲನೆಯಾಗಬೇಕು.

೧೫ ಮೂರು ವರ್ಣದವರು, ಶೂದ್ರರು ನೀಚರೆಂದು ಎಣಿಸಿ ತಾವು ಉಚ್ಚರು ಎಂದು ತಿಳಿದುಕೊಂಡರೆ, ಶೂದ್ರರು ಅವರನ್ನು ದ್ವೇಷಿಸುವರು; ಅವರು ಸಂಗ್ರಹಿಸಿದ ಸೊತ್ತನ್ನು ಪಡೆದುಕೊಳ್ಳಲು ಬಯಸುವರು. ಇದು ಸ್ವಾಭಾವಿಕವಾದುದು. ಇದರಲ್ಲಿ ಹೊಸದೇನೂ ಇಲ್ಲ. ಇದಕ್ಕಾಗಿ ನಾವು ದುಃಖಪಡಬೇಕಾದುದೂ ಇಲ್ಲ.

೧೬ ವರ್ಣಧರ್ಮವು ಇಂದು ಊಟ-ಉಡಿಗೆ ಮತ್ತು ವಿವಾಹದಲ್ಲಿ ಮಾತ್ರ ಉಳಿದುಕೊಂಡಿದೆ. ವ್ಯವಹಾರದಲ್ಲಿ ಖಾದ್ಯಾಖಾದ್ಯ ವಿವೇಕಕ್ಕೂ ವಿವಾಹದ ನಿಯಮಕ್ಕೂ ಸ್ಥಾನವುಂಟು. ಆದರೆ ವರ್ಣಧರ್ಮವು ಇವೆರಡರ ಮೇಲೆಯೆ ನಿಂತಿಲ್ಲ. ಇವೆರಡನ್ನೂ ವರ್ಣಧರ್ಮದೊಡನೆ ಜೋಡಿಸಿಬಿಟ್ಟಿದ್ದರಿಂದ ಇಂದು ಹಿಂದೂ ಧರ್ಮಕ್ಕೆ ಹಾನಿ ತಟ್ಟಿದೆ.

೧೭ ವರ್ಣದ ಹಾಗೂ ಜಾತಿಯ ನಡುವೆ ಇಂದು ಭೂಮ್ಯಾಕಾಶದಷ್ಟು ಅಂತರವಿದೆ. ಈಗ ಕಾಣಬರುವ ಜಾತಿಗಳು ಮತ್ತು ಉಪಜಾತಿಗಳು ವರ್ಣವ್ಯವಸ್ಥೆಯ ಹಾಳಾದ ಕುರುಹುಗಳು. ಇವುಗಳ ತಳಹದಿಯಲ್ಲಿ ವರ್ಣಭೇದದಂತಹ ವ್ಯಾಪಕ ನಿಯಮಗಳು ಇಲ್ಲ. ಈಗಿನ ಜಾತಿ ಉಪಜಾತಿಗಳು

ಆಕಸ್ಮಿಕ ಕಾರಣಗಳಿಂದಲೂ ರೂಢಿಗಳಿಂದಲೂ ಜನಿಸಿರುವವು. ಇವು ಜಾತಿ ಬಂಧನಗಳೇ ಹೊರತು ಇದು ವರ್ಣವ್ಯವಸ್ಥೆಯಲ್ಲ. ಇವುಗಳಿಂದ ಹಿಂದೂ ಧರ್ಮಕ್ಕೆ ಕೇಡುಂಟು; ಆದ್ದರಿಂದ ಇದನ್ನು ನಾಶಪಡಿಸತಕ್ಕದ್ದು.

೧೮ ವರ್ಣಗಳು ನಾಲ್ಕು ಎಂದು ಶಾಸ್ತ್ರಗಳಲ್ಲಿ ಹೇಳಿದೆ. ನಾಲ್ಕೇ ಇರಬೇಕು ಎನ್ನುವದು ಅಗತ್ಯವಾದುದಲ್ಲ. ವರ್ಣಧರ್ಮದ ಪುನರುಧ್ಧಾರದ ಕಾಲಕ್ಕೆ ನಾಲ್ಕಕ್ಕಿಂತ ಹೆಚ್ಚು ವರ್ಣಗಳು ಬೇಕೆಂದೂ ಎನಿಸಬಹುದು, ನಾಲ್ಕಕ್ಕಿಂತ ಕಡಿಮೆ ಮಾಡುವದು ಅವಶ್ಯವೆಂದೂ ಎನಿಸಬಹುದು.

## ೩ ಆಶ್ರಮ

೧ ಆಶ್ರಮವ್ಯವಸ್ಥೆಯು ಸೃಷ್ಟಿಯ ನಿಯಮಗಳನ್ನು ವ್ಯವಸ್ಥಿತವಾಗಿ ಆಚರಣೆಯಲ್ಲಿ ತರುವುದಕ್ಕಾಗಿ ಮಾಡಿದ ಪ್ರಯತ್ನದಿಂದಲೆ ಹುಟ್ಟಿರುವದು.

೨ ಎಲ್ಲ ವರ್ಣಗಳ ಜನರಿಗೆ ಎಲ್ಲ ಆಶ್ರಮಗಳ ಅಧಿಕಾರವುಂಟು.

೩ ನಾಲ್ಕೂ ಆಶ್ರಮಗಳು ಸರಪಳಿಯ ಕೊಂಡಿಗಳಂತೆ ಒಂದಕ್ಕೊಂದು ಸಂಬಂಧಪಟ್ಟಿವೆ. ಒಂದನ್ನು ಬಿಟ್ಟು ಇನ್ನೊಂದನ್ನು ಪಾಲಿಸಲಿಕ್ಕಾಗುವದಿಲ್ಲ.

೪ ಹುಟ್ಟಿದಾರಭ್ಯ ಮನುಷ್ಯನು ಬ್ರಹ್ಮಚರ್ಯಾಶ್ರಮದಲ್ಲಿರುವನು. ಆದ್ದರಿಂದ ಈ ಆಶ್ರಮದ ನಿಯಮಗಳಿಗನುಸರಿಸಿ ವರ್ತಿಸುವದು ಕರ್ತವ್ಯವೆಂದೆನಿಸುವದು. ಈ ಆಶ್ರಮವನ್ನು ಎಂದಿಗೂ ಬಿಡದಿರುವ, ಯಾವಜ್ಜೀವನ ಬ್ರಹ್ಮಚರ್ಯವನ್ನು ಪಾಲಿಸುವ ಅಧಿಕಾರವು ಸರ್ವರಿಗೂ ಉಂಟು. ಪುರುಷರು ಕನಿಷ್ಠ ೨೫ ವರ್ಷಗಳ ವರೆಗೂ ಸ್ತ್ರೀಯರು ೧೮ ವರ್ಷಗಳ ಪರ್ಯಂತರವೂ ಪವಿತ್ರರಾಗಿದ್ದುಕೊಂಡು ಈ ಬಹ್ಮಚರ್ಯಾಶ್ರಮವನ್ನು ಪಾಲಿಸಬೇಕು.

೫ ಉಳಿದ ಆಶ್ರಮಗಳ ಉಜ್ವಲತೆಯು ಈ ಆಶ್ರಮದಲ್ಲಿ ಆಚರಿಸಿದ ಪವಿತ್ರವಾದ ಹಾಗೂ ಸಂಯಮೀ ಜೀವನಕ್ರಮದ ಅಡಿಗಲ್ಲಿನ ಮೇಲೆಯೆ ಅವಲಂಬಿಸಿದೆ. ಆದುದರಿಂದ ಆಧ್ಯಾತ್ಮಿಕ ದೃಷ್ಟಿಯಿಂದಲೂ ಮೊದಲಿನ ಆಶ್ರಮವೆ ಮುಖ್ಯವಾದ ಆಶ್ರಮ: ಇದು ಲೋಪವಾಗಿರುವುದರಿಂದ ಹಿಂದೂ ಧರ್ಮಕ್ಕೂ ಹಿಂದೂ ಸಮಾಜಕ್ಕೂ ಬಹಳ ಹಾನಿ ತಗಲಿದೆ. ಈ ಆಶ್ರಮವನ್ನು ಹೆಚ್ಚು ಉಜ್ವಲಗೊಳಿಸುವದು ಪ್ರತಿಯೊಬ್ಬ ಹಿಂದೂವಿನ ಕರ್ತವ್ಯ. ಇಂದು ಈ ಆಶ್ರಮವನ್ನು ಪಾಲಿಸುವವರು ತೀರವಿರಳ.

೬ ಗೃಹಸ್ಥಾಶ್ರಮದೊಳಗಿನ ವಿವಾಹ ಧರ್ಮವನ್ನು ಕುರಿತು ಮುಂದಿನ ಪ್ರಕರಣಗಳಲ್ಲಿ ಯೋಚಿಸಲಾಗಿದೆ. ಧರ್ಮಮಾರ್ಗದಿಂದ ಪ್ರಜಾಸಂಪತ್ತನ್ನು

ಬೆಳೆಸುವ ಭಾರವು ಈ ಆಶ್ರಮಕ್ಕೆ ಒಪ್ಪಿಸಲ್ಪಟ್ಟಿದೆ.

೭ ಗೃಹಸ್ಥಾಶ್ರಮವು ಇರುವದು ಭೋಗಕ್ಕಾಗಿ ಎನ್ನುವದು ತಪ್ಪು. ಹಿಂದೂಧರ್ಮದ ಎಲ್ಲ ವ್ಯವಸ್ಥೆಯು ಸಂಯಮದ ಸಾಧನೆಗಾಗಿ ಇದೆ. ಆದ್ದರಿಂದ ಭೋಗವು ಎಂದಿಗೂ ಕರ್ತವ್ಯವಲ್ಲ. ಸರಳತೆಯು ಮತ್ತು ಸಂಯಮವು ಗೃಹಸ್ಥಾಶ್ರಮದ ದೂಷಣಗಳಲ್ಲ, ಭೂಷಣಗಳು.

ಆದರೆ ಎಷ್ಟೋ ಜನರು ಸಂಯಮವನ್ನೇ ಧ್ಯೇಯವನ್ನಾಗಿಟ್ಟುಕೊಂಡಿದ್ದರೂ ಭೋಗಗಳ ಕಡೆಗೆ ಹೋಗುವ ತಮ್ಮ ಮನಸ್ಸನ್ನು ಬಿಗಿಹಿಡಿಯಲಾರರು. ಗೃಹಸ್ಥಾಶ್ರಮದ ಧರ್ಮಗಳು ಈ ಭೋಗಗಳಿಗೆ ಎಲ್ಲೆಯನ್ನೂ ಅವನ್ನು ಸೇವಿಸುವ ವಿಧಿಯನ್ನೂ ಹಾಕಿಕೊಡುವವು.

೮ ಈಗ ಎಲ್ಲರೂ ಪಾಲಿಸುತ್ತಿರುವದು ಗೃಹಸ್ಥ "ವೃತ್ತಿ"ಯು–ಪ್ರಜಾವೃದ್ಧಿಯ ಕಾರ್ಯವು– ಹೊರತು ಗೃಹಸ್ಥ "ಧರ್ಮ" ವಲ್ಲ. ಇದರಿಂದ ಬಹಳವಾಗಿ ಸ್ವೇಚ್ಛಾಚಾರವೂ ವ್ಯಭಿಚಾರವೂ ಬೆಳೆಯುವವು.

೯ ವ್ಯಭಿಚಾರದಿಂದ ಇಲ್ಲವೆ ಸ್ವೇಚ್ಛಾಚಾರದಿಂದ ಜೀವನವನ್ನು ಕಳೆದವರಿಗೆ ವಾನಪ್ರಸ್ಥವೂ ಸನ್ಯಾಸವೂ ಅತ್ಯಂತ ಕಠಿಣವಾಗುವವು ಎಂಬದನ್ನು ನಾವು ಅರಿಯಬೇಕು.

೧೦ ಭೋಗಗಳನ್ನು ಕಡಿಮೆ ಮಾಡುತ್ತಹೋಗಿ ಅವುಗಳ ಬಗೆಗೆ ಇದ್ದ ಮೋಹವನ್ನು ಬಿಡುವ ಶಕ್ತಿಯು ಪ್ರಾಪ್ತವಾದ ಕೂಡಲೆ ಗೃಹಸ್ಥ-ದಂಪತಿಗಳು ಬ್ರಹ್ಮಚರ್ಯಾಶ್ರಮದ ವ್ರತಗಳನ್ನು ಕೈಕೊಂಡು ಅಥವಾ ಪುನಃ ಅವನ್ನು ತೇಜಃಪುಂಜಗೊಳಿಸಿ ವಾನಪ್ರಸ್ಥರಾಗುವರು. ಯಾವನು ತನ್ನ ರಾಗದ್ವೇಷಗಳನ್ನು ಪೂರ್ಣವಾಗಿ ಗೆಲ್ಲದಿದ್ದರೂ ಇಂದ್ರಿಯಗಳನ್ನು ತಡೆದು ನಿಲ್ಲಿಸುವ ಶಕ್ತಿಯನ್ನು ಸಂಪಾದಿಸಿರುವನೋ ಮತ್ತು ಯಾವನು ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುವನೋ ಅವನೇ ವಾನಪ್ರಸ್ಥನೆಂದು ಎನಿಸುವನು. ಈಗ ಈ ಆಶ್ರಮದ ಲೋಪವೆ ಆಗಿದೆಯೆಂದು ಎನ್ನಬಹುದು.

೧೧ ರಾಗದ್ವೇಷಗಳನ್ನು ಸಂಪೂರ್ಣವಾಗಿ ಗೆದ್ದವನು, ಕಾಯಾ–ವಾಚಾ–ಮನಸಾ ಸತ್ಯ ಅಹಿಂಸೆ ಬ್ರಹ್ಮಚರ್ಯ ಮುಂತಾದ ಯಮಗಳನ್ನು ಪಾಲಿಸುವನು ಸಂನ್ಯಾಸಿ ಎನಿಸುವನು. ಇಂತಹ ಸಂನ್ಯಾಸಿಯು ನಿಷ್ಕಾಮ ಭಾವನೆಯಿಂದ ಕರ್ಮ ಮಾಡುವನು ಮತ್ತು ತನ್ನ ನಿರ್ವಾಹಕ್ಕಾಗಿ ಭಿಕ್ಷೆಯನ್ನು ಅವಲಂಬಿಸುವನು.

೧೨ ಆಶ್ರಮಗಳಿಗೂ ಬಾಹ್ಯ ವೇಷಗಳಿಗೂ ಏನೂ ಸಂಬಂಧವಿಲ್ಲ.

## ೪ ಸ್ತ್ರೀಜಾತಿ

೧ ಸ್ತ್ರೀಜಾತಿಯ ವಿಷಯವಾಗಿದ್ದ ಕೀಳು ಭಾವನೆಯು ಹಿಂದೂ ಧರ್ಮ ದಲ್ಲಿ ಒಳಸೇರಿದ ಕೆಸರು-ಕೊಳಕು. ಅದು ಧರ್ಮದ ಅಂಗವಲ್ಲ. ಧಾರ್ಮಿಕ ಪುರುಷರು ಕೂಡ ಸ್ತ್ರೀಜಾತಿಯನ್ನು ತಿರಸ್ಕಾರದಿಂದ ನೋಡುವರು. ಇದರಿಂದ ಹಿಂದೂ ಧರ್ಮದಲ್ಲಿ ಈ ಕೊಳಕು ಎಷ್ಟು ಆಳವಾಗಿ ಒಳಸೇರಿದೆ ಎನ್ನುವದು ತೋರುವುದು.

೨ ಸ್ತ್ರೀ ಮತ್ತು ಪುರುಷನಲ್ಲಿ ಪ್ರಾಕೃತಿಕ ಭೇದಗಳುಂಟು. ಆದುದ ರಿಂದ ನಿತ್ಯ ಜೀವನದಲ್ಲಿಯೂ ಅವರು ಆಚರಿಸತಕ್ಕಂಥ ಕರ್ತವ್ಯಗಳಲ್ಲಿಯೂ ಭೇದಗಳುಂಟು. ಇಬ್ಬರಲ್ಲಿ ಯಾರೂ ಮೇಲಲ್ಲ ಯಾರೂ ಕೀಳಲ್ಲ. ಇಬ್ಬರೂ ಸಮಾಜದ ಸಮಾನ, ಮಹತ್ವದ ಮತ್ತು ಪ್ರತಿಷ್ಠೆಗೆ ಪಾತ್ರವಾದ ಅಂಗಗಳು.

೩ ಪುರುಷನು ಒಂದು ಕಡೆಯಿಂದ ಸ್ತ್ರೀಜಾತಿಯನ್ನು ಮೆಟ್ಟುವನು, ಅಜ್ಞಾನದಲ್ಲಿಡುವನು, ತಿರಸ್ಕರಿಸುವನು ಮತ್ತು ನಿಂದಿಸುವನು; ಇನ್ನೊಂದು ಕಡೆಯಿಂದ ಅದು ತನ್ನ ಭೋಗೇಚ್ಛೆಯನ್ನು ತೃಪ್ತಿಪಡಿಸುವ ಸಾಧನ ವೆಂದು ಎಣಿಸುವನು. ಈ ದೃಷ್ಟಿಯಿಂದ ಗೊಂಬೆಯನ್ನು ಶೃಂಗರಿಸಿದ ಹಾಗೆ ತನ್ನ ಇಚ್ಛೆಯಂತೆ ಅದನ್ನು ಶೃಂಗರಿಸುವನು, ಅದರ ಮನಸ್ಸನ್ನು ಸಂತೋಷಪಡಿಸಲು ಏನು ಬೇಕಾದ್ದನ್ನು ಮಾಡುವನು. ಅಲ್ಲದೆ ಅದರ ಭೋಗವೃತ್ತಿಯನ್ನು ಜಾಗ್ರತಗೊಳಿಸಲು ಯತ್ನಿಸುವನು. ಈ ಮೂಲಕ ಸ್ತ್ರೀಜಾತಿಯ, ಪುರುಷನ ಮತ್ತು ಇಡೀ ಸಮಾಜದ ಅಧಃಪತನವು ಬಹಳ ವಾಗಿರುವುದು.

೪ ಸಾಕುವಿಕೆಯಲ್ಲೂ ಶಿಕ್ಷಣದಲ್ಲೂ ಹುಡುಗ ಮತ್ತು ಹುಡುಗೆಯ ನಡುವೆ ಭೇದವನ್ನು ಕಲ್ಪಿಸಿ ಹುಡುಗೆಯ ಕಡೆಗೆ ಕಡಿಮೆ ಗಮನ ಕೊಟ್ಟು ತಮ್ಮ ಕರ್ತವ್ಯದಿಂದ ಪರಾಙ್ಮುಖರಾಗುವ ತಂದೆ-ತಾಯಿಗಳು ಪಾಪವನ್ನು ಮಾಡುವರು.

೫ ವಯಸ್ಸಿಗೆ ಬಂದ ಪುರುಷನು ಸ್ವಾತಂತ್ರ್ಯಕ್ಕೆ ಎಷ್ಟು ಅರ್ಹನೋ ಸ್ತ್ರೀಯಳೂ ಅಷ್ಟೇ ಅರ್ಹಳು.

೬ ಸ್ತ್ರೀಯು ಅಬಲೆಯಲ್ಲ. ಆಕೆ ತನ್ನ ಶಕ್ತಿಯನ್ನರಿತುಕೊಂಡರೆ ಪುರುಷನಿಗಿಂತಲೂ ಹೆಚ್ಚು ಬಲಶಾಲಿಯಾಗಬಲ್ಲಳು. ಅವಳು ತಾಯಿಯಾಗಿ ಯಾವ ರೀತಿ ಬಾಲಕನನ್ನು ರೂಪಿಸುವಳೊ ಮತ್ತು ಪತ್ನಿಯಾಗಿ ಪತಿಗೆ

ದಾರಿ ತೋರುವಳೋ ಆ ಸಂಸ್ಕಾರಗಳಿಗನುಸರಿಸಿಯೆ ಪುರುಷನು ಮಾರ್ಪಡುವನು.

೭ ಸ್ತ್ರೀಜಾತಿಯಲ್ಲಿದ್ದ ಅಪಾರವಾದ ಶಕ್ತಿಯು ವಿದ್ವತ್ತೆಯಿಂದಾಗಲಿ ಶಾರೀರಿಕ ಬಲದಿಂದಾಗಲಿ ಬಂದಿಲ್ಲ. ಅದು ಅವಳಿಗೆ ಉತ್ಕಟ ಶ್ರದ್ಧೆಯಿಂದ, ಭಾವನೆಯಿಂದ ಮತ್ತು ತ್ಯಾಗಶಕ್ತಿಯಿಂದ ಪ್ರಾಪ್ತವಾಗಿದೆ. ಅವಳು ಸ್ವಭಾವ ದಿಂದಲೆ ಕೋಮಲೆ, ಧಾರ್ಮಿಕ ವೃತ್ತಿಯವಳು. ಪುರುಷನು ಶ್ರದ್ಧೆಯನ್ನು ಕಳೆದುಕೊಂಡು ಕೈಕಾಲು ಬಿಟ್ಟಾಗ ಇಲ್ಲವೆ ಸುಳ್ಳು ಲೆಕ್ಕದ ತೊಡಕಿನಲ್ಲಿ ಸಿಲುಕಿಕೊಂಡಾಗ ಅವಳು ಧೀರಳಂತೆ ಸರಳವಾದ ಮಾರ್ಗದಲ್ಲಿ ಮುಂದಡಿ ಯನ್ನಿಡುತ್ತ ಸಾಗುವಳು.

೮ ಜಗತ್ತಿನಲ್ಲಿ ಧರ್ಮದ ರಕ್ಷಣೆಯು ಪ್ರಾಮುಖ್ಯವಾಗಿ ಸ್ತ್ರೀಜಾತಿ ಯಿಂದಲೆ ಆಗಿರುವದು.

೯ ಸ್ತ್ರೀಜಾತಿಯು ತನ್ನ ಬಲವನ್ನು ಮತ್ತು ಕಾರ್ಯಕ್ಷೇತ್ರದ ದಿಕ್ಕನ್ನು ಚನ್ನಾಗಿ ಅರಿತುಕೊಂಡರೆ ತಾನು ಪುರುಷನ ಗೊಂಬೆಯೆಂದು ಒಪ್ಪಿಕೊಳ್ಳು ವುದೂ ಇಲ್ಲ, ಪುರುಷನ ಹಾಗೂ ಅವನ ಪ್ರವೃತ್ತಿಗಳನ್ನು ಅನುಕರಿಸ ಬೇಕೆಂಬ ಗುರಿಯನ್ನು ಇಟ್ಟುಕೊಳ್ಳುವುದೂ ಇಲ್ಲ. ಅವಳು ಪುರುಷನನ್ನು ಸಂತೋಷಪಡಿಸುವ ಇಲ್ಲವೆ ಆಕರ್ಷಿಸುವ ಉದ್ದೇಶದಿಂದ ಶರೀರವನ್ನು ಶೃಂಗರಿಸುವುದಿಲ್ಲ. ಜಾಣೆಯಾದ ಸ್ತ್ರೀಯು ಸದ್ಭಾವಗಳಿಂದ ಸದ್ಗುಣ ಗಳಿಂದ ಶೋಭಿಸುವ ಯತ್ನ ಮಾಡುವಳು.

೧೦ ಸ್ತ್ರೀಜಾತಿಯು ಸಾರ್ವಜನಿಕ ಕಾರ್ಯಗಳಲ್ಲಿ ಪುರುಷನಷ್ಟೇ ಪಾಲು ಗೊಳ್ಳಬೇಕು. ಮದ್ಯಪಾನನಿಷೇಧ, ಪತಿತ ಸ್ತ್ರೀಯರ ಉದ್ಧಾರ ಮುಂತಾದ ಅನೇಕ ಕಾರ್ಯಗಳಲ್ಲಿ ಸ್ತ್ರೀಯೆ ಹೆಚ್ಚು ಜಯವನ್ನು ಸಂಪಾದಿಸಬಲ್ಲಳು.

೧೧ ಸ್ತ್ರೀಯು ಮದುವೆಯಾಗಲೆಬೇಕೆನ್ನುವುದು ಮಿಥ್ಯಾ ಭ್ರಮೆ. ಅವಳಿಗೂ ಆಜೀವ ಬ್ರಹ್ಮಚರ್ಯದಿಂದ ಇರಲು ಹಕ್ಕು ಉಂಟು.

೧೨ ಸ್ತ್ರೀಯು ತನ್ನ ಇಚ್ಛೆಗೆ ವಿರುದ್ಧವಾಗಿ ಪತಿಯ ಕಾಮವಾಸನೆ ಯನ್ನು ತೃಪ್ತಿಪಡಿಸಲು ಬದ್ಧಳಲ್ಲ. ಸತಿಯ ಇಚ್ಛೆಯ ವಿರುದ್ಧ ತನ್ನ ಕಾಮವಾಸನೆಯನ್ನು ತೃಪ್ತಿಪಡಿಸಿಕೊಳ್ಳುವಂತಹ ಪತಿಯು ವ್ಯಭಿಚಾರ ಮಾಡಿದಂತೆ ಎಂದರೆ ತಪ್ಪಾಗದು.

## ಅಸ್ಪೃಶ್ಯತೆ

೧ ಅಸ್ಪೃಶ್ಯತೆಯು ಹಿಂದೂ ಧರ್ಮದ ಅಂಗವಲ್ಲ. ಅದು ಹಿಂದೂ ಧರ್ಮದ ಒಳಸೇರಿದ ಹೊಲಸು, ಪಾಪ. ಇದನ್ನು ಹೋಗಲಾಡಿಸುವುದು ಪ್ರತಿಯೊಬ್ಬ ಹಿಂದುವಿನ ಧರ್ಮ, ಪರಮ ಕರ್ತವ್ಯ.

೨ ಅಸ್ಪೃಶ್ಯರೆನಿಸುವ ಜನರು ನಾಲ್ಕು ವರ್ಣಗಳಿಗೆ ಒಳಪಟ್ಟವರು ಹಿಂದೂ ಧರ್ಮದ ಅಂಗ.

೩ ಅಸ್ಪೃಶ್ಯರಲ್ಲಿ ಹುಟ್ಟಿದ್ದರಿಂದ ಮಾತ್ರದಿಂದಲೇ ಅವರು ಅಸ್ಪೃಶ್ಯರೆಂದು ತಿಳಿದರೆ ಅಹಿಂಸಾಧರ್ಮವನ್ನೂ ಸರ್ವಭೂತಾತ್ಮ ಭಾವನೆಯನ್ನೂ ನಾವು ನಿಷೇಧಿಸಿದಂತಾಗುವದು. ಈ ಅಸ್ಪೃಶ್ಯತೆಯ ಬುಡದಲ್ಲಿ ಸಂಯಮವಿಲ್ಲ;ಉಚ್ಚತನದ ಉದ್ಧತ ಭಾವನೆಯುಂಟು. ಆದುದರಿಂದ ಇದು ಸ್ಪಷ್ಟವಾದ ಅಧರ್ಮ. ಇದು ಧರ್ಮದ ಹೆಸರಿನಿಂದ ಕೋಟಿಗಟ್ಟಳೆ ಜನರನ್ನು ಗುಲಾಮರಾಗಿ ಮಾಡಿರುವದು.

೪ ಸಾರ್ವಜನಿಕವಾದ ಜಾತ್ರೆ, ಪೇಟೆ, ಅಂಗಡಿ, ಪಾಠಶಾಲೆ, ಧರ್ಮಶಾಲೆ, ಮಂದಿರ,ಕೆರೆ-ಬಾವಿ, ಉಗಿಬಂಡಿ,ಮೋಟಾರು ಮುಂತಾದುವುಗಳಲ್ಲಿ ಉಳಿದ ಹಿಂದುಗಳಂತೆ ಅನಿರ್ಬಂಧವಾಗಿ ಹೋಗಲಿಕ್ಕೂ ಅವುಗಳಿಂದಾಗುವ ಲಾಭಗಳನ್ನು ಪಡೆಯಲಿಕ್ಕೂ ಅಸ್ಪೃಶ್ಯರಿಗೆ ಅಧಿಕಾರವು ಇದ್ದೇ ಇದೆ. ಅವರಿಂದ ಈ ಅಧಿಕಾರವನ್ನು ಕಸಿದುಕೊಳ್ಳುವವನು ಅನ್ಯಾಯವನ್ನು ಮಾಡುವನು. ಅವರಿಗೆ ಈ ಅಧಿಕಾರವು ಉಂಟೆಂದು ಒಪ್ಪಿಕೊಂಡವನು, ಅವರ ಮೇಲೆ ಉಪಕಾರ ಹೊರಿಸಿದಂತಾಗುವುದಿಲ್ಲ; ತನ್ನ ತಪ್ಪನ್ನು ಸುಧಾರಿಸಿಕೊಂಡಂತಾಗುವುದು.

೫ ನೂರಾರು ವರ್ಷಗಳಿಂದ ಅಸ್ಪೃಶ್ಯರನ್ನು ಅಮಾನುಷ ರೀತಿಯಿಂದ ನಡೆಯಿಸಿದ್ದರಿಂದಲೂ ಸುಸಂಸ್ಕೃತ ಹಿಂದುಗಳ ಸಂಸರ್ಗಕ್ಕೆ ಅವರನ್ನು ಎರವು ಮಾಡಿದ್ದರಿಂದಲೂ ಅವರ ಸ್ಥಿತಿ ಅತ್ಯಂತ ಕರುಣಾಜನಕವಾಗಿದೆ. ಈಗ ಅವರನ್ನು ಉಳಿದ ವರ್ಣಗಳಷ್ಟು ಉಚ್ಚಕೋಟಿಗೆ ತರಬೇಕಾದರೆ ಸುಸಂಸ್ಕೃತ ಹಿಂದುಗಳು ಬಹಳವಾಗಿ ಪ್ರಯತ್ನಿಸಬೇಕಾಗುತ್ತದೆ. ಅಸ್ಪೃಶ್ಯರ, ಉಳಿದ ದಲಿತ ಜಾತಿಗಳ ಅಥವಾ ಹಿಂದುಳಿದ ಜಾತಿಗಳ ಸೇವೆಯನ್ನು ಮಾಡಲು ತಮ್ಮ ಜೀವನವನ್ನು ಅರ್ಪಣ ಮಾಡುವುದೂ ಈ ಕಾರ್ಯಕ್ಕೆ ಉದಾರ ಅಂತಃಕರಣದಿಂದ ಸಹಾಯ ಮಾಡುವುದೂ ಈ ಯುಗದ ಸುಸಂಸ್ಕೃತ ಹಿಂದುಗಳ ಪರಮ ಪವಿತ್ರವಾದ ಕರ್ತವ್ಯಕರ್ಮ.

೬ ಈ ದೃಷ್ಟಿಯಿಂದ ದಲಿತ ವರ್ಗಗಳಿಗೋಸ್ಕರ ಪ್ರತ್ಯೇಕವಾಗಿ ಸಂಸ್ಥೆಗಳನ್ನು ಸ್ಥಾಪಿಸುವುದಕ್ಕೂ ಅವುಗಳಿಗಾಗಿ ಅನುಕೂಲತೆಗಳನ್ನು ಒದಗಿಸಿಕೊಡುವುದಕ್ಕೂ ಸಾಕಷ್ಟು ಅನುವು ಇದೆ. ಇಂತಹ ಸಂಸ್ಥೆಗಳು ಈಗಾಗಲೆ ಸ್ಥಾಪಿಸಲ್ಪಟ್ಟಿದ್ದರೆ, ಅನುಕೂಲತೆಗಳು ಒದಗಿಸಿಕೊಡಲ್ಪಟ್ಟಿದ್ದರೆ ಉಳಿದ ಸಾರ್ವಜನಿಕ ಸಂಸ್ಥೆಗಳಿಂದಲೂ ಅನುಕೂಲತೆಗಳಿಂದಲೂ ಲಾಭಪಡೆದುಕೊಳ್ಳಲು ಅವರಿಗೆ ಇದ್ದ ಅಧಿಕಾರವು ಹೊರಟುಹೋಗುವದಿಲ್ಲ.

೭ ಅಸ್ಪೃಶ್ಯರ ಸ್ಥಿತಿಯ ಸುಧಾರಣೆಗೆ ಹೊರಟಾಗ ಅವರ ಪರಂಪರಾಗತ ಉದ್ಯೋಗಗಳನ್ನು ಅವರಿಂದ ಬಿಡಿಸಲು ಇಲ್ಲವೆ ಅವುಗಳ ಬಗೆಗೆ ತಿರಸ್ಕಾರವನ್ನು ಹುಟ್ಟಿಸಲು ಯತ್ನಿಸಕೂಡದು. ಅವರ ಧಂದೆಯ ಬಗೆಗೆ ಅವರಲ್ಲಿ ತಿರಸ್ಕಾರವನ್ನು ಹುಟ್ಟಿಸಿದರೆ ಅವರ ಸೇವೆಯನ್ನು ಮಾಡಿದಂತಾಗುವುದರ ಬದಲು ಹಾನಿಯನ್ನು ಮಾಡಿದಂತಾಗುವದು. ನೇಕಾರನು (ಹಲವು ಪ್ರಾಂತಗಳಲ್ಲಿ ನೇಕಾರರು ಅಸ್ಪೃಶ್ಯರೆನಿಸುವರು) ನೇಯುತ್ತಿರಬೇಕು, ಚರ್ಮಕಾರನು ಚರ್ಮದ ಕಾರ್ಯವನ್ನು ಮಾಡುತ್ತಿರಬೇಕು ಮತ್ತು ಭಂಗಿಯು ಕಕ್ಕಸುಗಳನ್ನು ಸ್ವಚ್ಛಮಾಡುತ್ತಿರಬೇಕು. ಹೀಗೆ ಅವರು ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತಿದ್ದರೂ ಅವರು ಅಸ್ಪೃಶ್ಯರೆಂದು ಎಣಿಸಲ್ಪಡದೆ ಹೋದರೆ ನಿಜವಾದ ಅಸ್ಪೃಶ್ಯತಾನಿವಾರಣೆ ಆದಹಾಗೆ ಎನ್ನಬಹುದು.

೮ ಭಂಗಿಯು ಸಮಾಜದ ಹೊಲಸನ್ನು ದೂರಮಾಡಿ ಅದನ್ನು ದಿನವೂ ಸ್ವಚ್ಛವಿಡುವ ಪವಿತ್ರ ಕೆಲಸವನ್ನು ಮಾಡುವನು. ಈ ಕಾರ್ಯವನ್ನು ಅವನು ನಿಯಮಿತವಾಗಿ ಮಾಡದಿದ್ದರೆ ಇಡಿಯ ಸಮಾಜವೆ ಮರಣೋನ್ಮುಖವಾಗುವದು. ಅವರು ಇಷ್ಟು ಅಸಂಸ್ಕೃತರೂ ನಿರ್ಬಲರೂ ಆಗಲು ಅವರ ಈ ಉದ್ಯೋಗಗಳೇ ಕಾರಣವೆಂದು ಹೇಳುವದು ಯೋಗ್ಯವಲ್ಲ. ಈ ಉದ್ಯೋಗಗಳೂ ಉಳಿದ ಉದ್ಯೋಗಗಳಷ್ಟೆ ಉಚ್ಚವೆಂದು ಭಾವಿಸಬೇಕು. ಉಳಿದವರ ಉದ್ಯೋಗಗಳಂತೆ ಇವರ ಉದ್ಯೋಗಗಳಲ್ಲಿಯೂ ಸುಧಾರಣೆ ಮಾಡುವದು ಅವಶ್ಯವಿದೆ. ಆದರೆ ಇದು ಇಲ್ಲಿ ತೀರ ಅಪ್ರಸ್ತುತ ಪ್ರಶ್ನೆ. ಸುಸಂಸ್ಕೃತ ಹಿಂದುಗಳು ಈ ಉದ್ಯೋಗಗಳಲ್ಲಿ ತೊಡಗಿ ಅವುಗಳಲ್ಲಿ ಸುಧಾರಣೆಮಾಡಿ ತೋರಿಸಬಹುದು.

೯ ಸತ್ತ ದನಗಳ ಮಾಂಸವನ್ನು ತಿನ್ನುವ ರೂಢಿ ಅಸ್ಪೃಶ್ಯರಲ್ಲಿ ಉಂಟು. ಇದರಿಂದ ಅವರು ಎಷ್ಟು ಕರುಣಾಜನಕ ಬಡತನದಲ್ಲಿದ್ದಾರೆ ಎನ್ನುವುದು ತಿಳಿಯುವುದು. ಅವರಿಗೆ ಚನ್ನಾಗಿ ತಿಳಿಹೇಳುವುದರಿಂದಲೂ ಅವರ ಬಡ

ತನವನ್ನು ದೂರಮಾಡುವುದರಿಂದಲೂ ಈ ರೂಢಿಯು ಇಲ್ಲದಂತಾಗುವದು.

೧೦ ಮನುಷ್ಯನು ತನ್ನ ಆಚರಣೆಯನ್ನು ಮಾತ್ರ ಸ್ವಚ್ಛವಾಗಿಟ್ಟು ಕೊಂಡರೆ ಅವನು ಸುಸಂಸ್ಕೃತನೆನಿಸಲಾರನು. ತನಗೆ ಅಶುದ್ಧವೆಂದು ಎನಿಸಿದ್ದನ್ನು ಅನ್ಯರು ಮಾಡಲೇಬೇಕಾಗುವಂತೆ ಆಚರಿಸುವದು ಅಸಂಸ್ಕೃತ ತೆಯ ಗುರುತು. ತಾವು ಸುಸಂಸ್ಕೃತರೆಂದು ತಿಳಿಯುವ ಜನರು ಅಸ್ಪೃಶ್ಯ ರಿಗೆ ತಮ್ಮ ಎಂಜಲು ತಂಗಳು ಇಲ್ಲವೆ ಅಶುದ್ಧ ಆಹಾರವನ್ನು ನೀಡುವರು; ಮತ್ತು ಅವರು ಪಶುಗಳಿಗಿಂತಲೂ ಕೀಳೆಂದು ಭಾವಿಸಿ ಅವರೊಡನೆ ಅತ್ಯಂತ ಕೀಳುತನದಿಂದ ವರ್ತಿಸುವರು. ಈ ನಡತೆ ಅಸಂಸ್ಕೃತತೆಯನ್ನು ವ್ಯಕ್ತ ಮಾಡುವದು, ಅಲ್ಲದೆ ಪಾಪಮಯವಾಗಿರುವದು.

## ೬ ಖಾದ್ಯಾಖಾದ್ಯ ವಿವೇಕ

೧ ಮನುಷ್ಯನು ಪ್ರತಿಯೊಂದು ಪದಾರ್ಥವನ್ನೂ ತಿನ್ನತಕ್ಕ ಸರ್ವಭಕ್ಷಕ ಪ್ರಾಣಿಯಲ್ಲ. ಅವನು ತಿನ್ನಬೇಕಾದ ಪದಾರ್ಥಗಳಿಗೂ ಒಂದು ಎಲ್ಲೆ ಇದೆ. ವರ್ಣಧರ್ಮದೊಡನೆ ಇದಕ್ಕೆ ಸಂಬಂಧವೇನೂ ಇಲ್ಲ. ಆಹಾರದ ವಿಷಯ ದಲ್ಲಿ ಸ್ಪೃಶ್ಯಾಸ್ಪೃಶ್ಯತೆ ಪಾಲಿಸುವದು ದೋಷಪೂರ್ಣವಾದುದು. ಆದರೆ ಇದರಲ್ಲಿ ಬೇಕು ಬೇಡ ಎಂಬ ತಾರತಮ್ಯವುಂಟು.

೨ ಸ್ವಚ್ಛತೆಯ ನಿಯಮಗಳಿಗೆ ಒಳಗಾಗಿ ತಿನ್ನಲು ಅರ್ಹವಾದದ್ದನ್ನು ಒಂದೇ ಪಂಕ್ತಿಯಲ್ಲಿ ಕುಳಿತು ಸರ್ವವರ್ಣದವರೂ ತಿಂದರೆ ಅದರಲ್ಲಿ ಯಾವ ದೋಷವೂ ಇಲ್ಲ. ಇಂಥ ವರ್ಣದವನೇ ಅಡಿಗೆ ಮಾಡಿರಬೇಕೆಂಬ ಆವಶ್ಯಕತೆಯೂ ಇಲ್ಲ.

೩ ಈಗ ನಾವು ಭೋಜನವ್ಯವಹಾರಕ್ಕೆ ಕೊಡುತ್ತಿರುವ ಮಹತ್ವವು ಮಡಿ-ಮೈಲಿಗೆಯ ರೂಢಿಗೆ ಪೋಷಕವಾಗಿದೆ ಮತ್ತು ನಮ್ಮ ರುಚಿ-ಅರು ಚಿಯ ಭಾವನೆಯನ್ನು ಬೆಳೆಸುತ್ತದೆ. ಇದರಿಂದ ಉತ್ತೇಜನ ಸಂಯಮಕ್ಕಲ್ಲ ಭೋಗಕ್ಕೆ.

೪ ಆದುದರಿಂದ ಜಾತಿ, ಸಮಾಜ, ಮತ್ತು ಧರ್ಮ ಮುಂತಾದ ಭೇದ ಗಳ ದೃಷ್ಟಿಯಿಂದ ಮಾಡಿದ ಪಾಕ ಮತ್ತು ಪಂಕ್ತಿಭೇದವು ಧರ್ಮದ ಲಕ್ಷಣ ವಲ್ಲ. ಈ ಭೇದದಿಂದ ಹಿಂದೂ ಧರ್ಮಕ್ಕೆ ಹಾನಿಯಾಗಿದೆ.

## ೭ ಮದುವೆ

೧ ವಿವಾಹದಿಂದ ಮನಬಂದಷ್ಟು ಸಂಭೋಗಿಸಲು ಸ್ವಾತಂತ್ರ್ಯ ದೊರೆಯುವದೆಂಬ ಭಾವನೆ ಪಾಪಮಯವಾದುದು. ಸ್ತ್ರೀ-ಪುರುಷರು ಇಬ್ಬರೂ ಸಂತತಿಯ ಇಚ್ಛೆಯಿಂದ ಸಂಭೋಗಮಾಡಿದರೆ ಮಾತ್ರ ಅದು ಧರ್ಮಯುಕ್ತವಾಗಬಲ್ಲದು. ಈ ಇಚ್ಛೆಯನ್ನು ಸಿದ್ಧಿಗೊಯ್ಯುವ ಶುದ್ಧ ರೀತಿಗೇ ವಿವಾಹವೆಂದು ಹೆಸರು.

೨ ಲಗ್ನದ ಬಯಕೆ ಇದ್ದ ಯುವಕಯುವತಿಯರು ತಮಗೆ ಯೋಗ್ಯ ರಾದ ವಧೂವರರನ್ನು ಸ್ವತಃ ಆರಿಸಿಕೊಳ್ಳುವದು ಸಾಮಾನ್ಯವಾಗಿ ಅಷ್ಟು ಯೋಗ್ಯವಾದುದೆಂದು ತೋರುವುದಿಲ್ಲ. ಏಕೆಂದರೆ ಇದರಿಂದ ಆಗಾಗ ಮಾನಸಿಕ ವ್ಯಭಿಚಾರವೂ ಕೆಲವು ಸಂದರ್ಭಗಳಲ್ಲಿ ಶಾರೀರಿಕ ವ್ಯಭಿಚಾರವೂ ಆಗುವ ಸಂಭವವುಂಟು. ಅಲ್ಲದೆ ಕಡಿಮೆ ಅನುಭವವುಳ್ಳ ಯುವಾವಸ್ಥೆಯಲ್ಲಿ ಭೋಗೇಚ್ಛೆಯು ತೀವ್ರವಾಗಿದ್ದಾಗ ಸ್ವತಃ ವಧೂವರರನ್ನು ಆಯ್ದು ಒಪ್ಪಿ ಮಾಡಿಕೊಂಡ ಮದುವೆಯು ಅಷ್ಟೊಂದು ಯೋಗ್ಯವಾಗುವದೆಂದು, ಜಾಣ್ಮೆಯದಾಗುವದೆಂದು ಹೇಳಲಾಗುವದಿಲ್ಲ.

೩ ಆದ್ದರಿಂದ ಮದುವೆಯಾಗುವವರು ತಮ್ಮ ಇಚ್ಛೆಯನ್ನು ಮತ್ತು ವಿವಾಹದ ವಿಷಯವಾಗಿ ತಾವು ಮಾಡಿದ ಸಂಕಲ್ಪಗಳೇನಾದರೂ (ವಿಧವಾ ವಿವಾಹ, ಅಂತರ್ಜಾತೀಯ ವಿವಾಹ, ವರದಕ್ಷಿಣೆ, ಕನ್ಯಾಶುಲ್ಕ ಇಲ್ಲದಿದ್ದ ವಿವಾಹ ಮುಂತಾದವು) ಇದ್ದರೆ ಅವನ್ನು ತಮ್ಮ ಹಿರಿಯರಿಗೆ ಇಲ್ಲವೆ ಪಾಲಕರಿಗೆ ಹೇಳಿ ತಮಗೆ ಯೋಗ್ಯರಾದ ವಧೂವರರನ್ನು ಹುಡುಕಲು ಬಿನ್ನವಿಸಿಕೊಳ್ಳಬೇಕು.

೪ ಹಿರಿಯರು ಯುವತಿಯ ಮತ್ತು ಯುವಕನ ಸ್ವಭಾವ ಗುಣದೋಷ ಗಳನ್ನೂ ವಿಚಾರಗಳನ್ನೂ ಧ್ಯಾನದಲ್ಲಿಟ್ಟುಕೊಂಡು ಅವರಿಗೆ ಅನುರೂಪ ರಾದ ಜೊತೆಗಾರರನ್ನು ಹುಡುಕಲು ಯತ್ನಿಸಬೇಕು. ಇಬ್ಬರಿಗೂ ಅವರವರ ಗುಣದೋಷಗಳನ್ನು ತಿಳಿಸಬೇಕು, ಇಬ್ಬರ ಜೀವನದಲ್ಲಿಯೂ ಅರಿತು ಕೊಳ್ಳಲೆಬೇಕಾದ ಸಂದರ್ಭಗಳು ಜರುಗಿದ್ದರೆ ಅವನ್ನೂ ತಿಳಿಸಬೇಕು. ಅಂಥ ಸಂಗತಿಗಳನ್ನು ಬಚ್ಚಿಡಕೂಡದು.

೫ ಹಿರಿಯರಿಂದ ಎಲ್ಲ ಸಂಗತಿಗಳನ್ನು ತಿಳಿದುಕೊಂಡ ಮೇಲೆ ಯುವಕ ಯುವತಿಯರು ಪರಸ್ಪರರನ್ನು ಕಂಡು ಪರಿಚಯ ಮಾಡಿಕೊಳ್ಳ ಬೇಕೆಂದೂ ಮಾತುಕತೆಯಾಡಬೇಕೆಂದೂ ಇಷ್ಟಪಟ್ಟರೆ ಅವರಿಗೆ ಹಾಗೆ

ಮಾಡಲು ಮರ್ಯಾದೆಯಿಂದ ಯೋಗ್ಯ ವ್ಯವಸ್ಥೆ ಮಾಡಿಕೊಡಬೇಕು.

೬ ಆ ಮೇಲೆ ಇಬ್ಬರೂ ಮದುವೆಯಾಗಲು ನಿಶ್ಚಯಿಸಿದರೆ ವಿವಾಹವನ್ನು ಗೊತ್ತು ಮಾಡಬೇಕು, ನಿಶ್ಚಯ ಮಾಡಬೇಕು. ಇಬ್ಬರಲ್ಲಿ ಯಾರಾದರೂ ಅನಿಶ್ಚಿತರಾಗಿ ಇಲ್ಲವೆ ಅಸಂತುಷ್ಟರಾಗಿ ಇರುವ ವರೆಗೆ ನಿಶ್ಚಯ ಹಾಕಬಾರದು. ಹಿರಿಯರು ಬೇರೆ ಕಡೆಗೆ ಹುಡುಕಲು ಪ್ರಯತ್ನಿಸಬೇಕು.

೭ ನಿಶ್ಚಯವಾದ ಬಳಿಕ ಮತ್ತು ಮದುವೆಗಿಂತ ಮೊದಲು ಪರಸ್ಪರ ಸ್ಪರ್ಶ ಮಾಡದೆ ಬ್ರಹ್ಮಚರ್ಯದಿಂದ ಇದ್ದು ಆಗ್ರಹದಿಂದ ಇಬ್ಬರೂ ಭೆಟ್ಟಿಯಾದರೆ, ಪತ್ರವ್ಯವಹಾರ ಮಾಡಿದರೆ ಅದು ದೋಷವೆನಿಸುವುದಿಲ್ಲ. ಸಂಯಮೀ ಸ್ತ್ರೀ-ಪುರುಷರು ಈ ಕಾಲದಲ್ಲಿ ತಮ್ಮ ಭಾವೀ ವಧು ಅಥವಾ ವರನ ಕೂಡ ಭೋಗದ ಮಾತುಗಳನ್ನಾಡದಿರುವದು, ಅಂಥ ಕಲ್ಪನೆಗಳ ಬಗೆಗೆ ಚರ್ಚಿಸದಿರುವದು ಲೇಸು. ಅವರು ತಮ್ಮ ಉತ್ಕರ್ಷಯ ಮಾತುಗಳನ್ನಾಡಬೇಕು, ಆ ಬಗೆಗೆ ಯೋಚಿಸಬೇಕು.

೮ ವಿವಾಹವಾದಮೇಲೆ ವಿವಾಹವು ಧರ್ಮವೆಂದು ಅವರು ತಿಳಿಯುವರು. ಧರ್ಮದಲ್ಲಿ ಮರ್ಯಾದೆ, ವಿವೇಕ ಮುಂತಾದವುಗಳು ಉಂಟು. ಮರ್ಯಾದೆಯಿಂದಲೂ ವಿವೇಕದಿಂದಲೂ ಇದ್ದರೆ ದಂಪತಿಗಳು ಗೃಹಸ್ಥ ಧರ್ಮವನ್ನು ಪಾಲಿಸಿದಂತೆ ಆಗುವದು. ಮರ್ಯಾದೆ ಬಿಟ್ಟು ನಡೆಯುವವರು ಧರ್ಮನಿಷ್ಠರೆನಿಸುವದಿಲ್ಲ, ಸ್ವೇಚ್ಛಾಚಾರಿಗಳೆನಿಸುವರು.

೯ ಸಂತತಿಯ ಬಯಕೆ ಇಲ್ಲದಿದ್ದರೆ ವಿವಾಹಸಂಬಂಧವಾಗಲಾರದು. ಆದರೆ ವಿವಾಹಿತರಾದ ಮೇಲೆ ಇಬ್ಬರೂ ಸಂಯಮಿಗಳಾಗಿ ಇರಬೇಕೆಂದು ಬಯಸಿದರೆ ವಿವಾಹವು ವ್ಯರ್ಥವಾಯಿತೆಂದು ತಿಳಿಯಕೂಡದು. ಸ್ತ್ರೀ-ಪುರುಷರಿಬ್ಬರೂ ಕೂಡಿ ಮಾಡತಕ್ಕ ಸಾಮಾಜಿಕ ಕಾರ್ಯಗಳು ಎಷ್ಟೋ ಇವೆ. ಅಂಥ ಕಾರ್ಯಗಳನ್ನು ಇಬ್ಬರೂ ಸಹಧರ್ಮಚಾರಿಗಳಾಗಿ ಮಾಡುವರು ಮತ್ತು ಇಬ್ಬರೂ ತಮ್ಮ ಅತ್ಯಂತ ನಿಕಟ ಸಂಬಂಧದ ಉಪಯೋಗವನ್ನು ಈ ಕಾರ್ಯಗಳಿಗಾಗಿ ಮಾಡಿಕೊಡುವರು.

೧೦ ಪ್ರಜೋತ್ಪಾದನೆಯ ಬಯಕೆ ಇಲ್ಲದೆ ಇರುವಾಗ, ಪ್ರಜೆಯನ್ನು ಹುಟ್ಟಿಸುವ ಶಕ್ತಿಯು ಇಬ್ಬರಲ್ಲಿ ಒಬ್ಬರಿಗೆ ಇಲ್ಲದಿದ್ದಾಗ, ಮತ್ತು ಪರಸ್ಪರರ ಸಮ್ಮತಿಯು ಇಲ್ಲದಿರುವಾಗ ಮಾಡಿದ ಸಂಭೋಗವು ಪತಿ-ಪತ್ನಿಯರಲ್ಲಿಯೇ ನಡೆದರೂ ಅದು ಪಾಪಮಯವೆ ಸರಿ.

## ೮ ಸಂತತಿ ನಿಯಮನ

೧ ವಿಚಾರ ಮಾಡದೆ ಸಂತತಿಯನ್ನು ಬೆಳೆಸುತ್ತ ಹೋಗುವುದು ಮತ್ತು ಸಂತತಿಯನ್ನು ಬಯಸುತ್ತಿರುವುದು ಜಡತೆಯ ಗುರುತು.

೨ ವಿಚಾರ ಮಾಡದೆ ಪ್ರಜಾವೃದ್ಧಿ ಮಾಡುತ್ತ ಹೋಗುವದನ್ನು ನಿಲ್ಲಿಸುವುದು ಈಗ ಅವಶ್ಯವಿದೆ. ಇದಕ್ಕೆ ಬ್ರಹ್ಮಚರ್ಯವೆಂಬುದು ಒಂದೇ ಧರ್ಮಮಾನ್ಯವಾದ ಸಾಧನವು.

೩ ಸಂತತಿನಿಯಮನದ ಕೃತ್ರಿಮ ಉಪಾಯಗಳು ಧರ್ಮಕ್ಕೂ ನೀತಿಗೂ ವಿರುದ್ಧವಾಗಿವೆ. ಈ ಉಪಾಯಗಳು ಕೊನೆಗೆ ವಿನಾಶದ ಮಾರ್ಗಕ್ಕೆ ಒಯ್ಯುವಂತಹವು. ಇವುಗಳಿಂದ ಎಲ್ಲ ತರದಿಂದಲೂ ಪ್ರಜರ ಹಾನಿ ಯಾಗುವುದು, ಅಧಃಪತನವಾಗುವುದು.

## ೯ ದಂಪತಿಗಳಲ್ಲಿ ಬ್ರಹ್ಮಚರ್ಯ

೧ ವಿವಾಹಿತ ಸ್ತ್ರೀ–ಪುರುಷರು ಋತುಕಾಲದಲ್ಲಿ ಭೋಗಿಸಲೇ ಬೇಕೆಂದು ತಿಳಿಯುವುದು ತಪ್ಪು. ಇಬ್ಬರಲ್ಲಿ ಒಬ್ಬರಿಗೆ ಇಚ್ಛೆ ಇಲ್ಲದಿದ್ದರೂ ಅವರು ಇನ್ನೊಬ್ಬರ ಭೋಗೇಚ್ಛೆಯನ್ನು ತೃಪ್ತಿಪಡಿಸಲೇಬೇಕೆಂದು ತಿಳಿಯುವದೂ ತಪ್ಪು.

೨ ಆದ್ದರಿಂದ, ಇಬ್ಬರಲ್ಲಿ ಯಾರೊಬ್ಬರ ವಿಷಯೇಚ್ಛೆಯು ಶರೀರ ವನ್ನು ಸ್ವಾಧೀನದಲ್ಲಿಟ್ಟುಕೊಳ್ಳುವಷ್ಟು ದುರ್ಬಲವಾಯಿತೆಂದರೆ ಬ್ರಹ್ಮಚರ್ಯ ವ್ರತವನ್ನು ಕೈಕೊಳ್ಳಲು ಅವರಿಗೆ ಅಧಿಕಾರವುಂಟು. ಹಾಗೆ ಮಾಡುವ ಕಾಲದಲ್ಲಿ ಆವರು ತಮ್ಮ ಸಹಚಾರಿಯ ಸಹಕಾರವನ್ನು ಅಪೇಕ್ಷಿಸುವರು. ಆದರೆ ಇನ್ನೊಬ್ಬರ ಸಮ್ಮತಿಯನ್ನು ಪಡೆಯುವದು ಅವಶ್ಯವಾದುದೆಂದು ಯಾರೂ ಭಾವಿಸಕೂಡದು.

೩ ಬ್ರಹ್ಮಚರ್ಯದಿಂದ ಇರಬೇಕೆಂದು ಸ್ತ್ರೀಯು ನಿಶ್ಚಯಿಸಿದರೆ ಮತ್ತು ಅದಕ್ಕೆ ಪತಿಯು ಸಂಮತಿಯನ್ನೀಯದಿದ್ದರೆ ಅವಳ ಪಾಡು ಕಠಿಣವಾಗುವ ಸಂಭವವುಂಟು. ಬ್ರಹ್ಮಚರ್ಯದಿಂದ ಇರುವದೆ ತನ್ನ ಧರ್ಮವೆಂದು ಚನ್ನಾಗಿ ಅರಿತುಕೊಂಡ ಸ್ತ್ರೀಯು ಈ ಎಡರುಗಳನ್ನು ಸತ್ಯಾಗ್ರಹದ ಬಲದಿಂದ ಸಹಿಸಬೇಕು. ದುಃಖಗಳು ಬಂದರೆ ಅವನ್ನೂ ಸಹಿಸಬೇಕು.

೪ ಬ್ರಹ್ಮಚರ್ಯದಿಂದ ಇರಬೇಕೆಂದು ಪತಿಯು ನಿಶ್ಚಯಿಸಿದರೆ ತೀವ್ರ ಭೋಗೇಚ್ಛೆಯುಳ್ಳ ಸ್ತ್ರೀಯ ಸ್ಥಿತಿಯು ಬಹು ಕಠಿಣವಾಗುವುದು. ಕಾಯಿ

ದೆಯೂ ಲೋಕಮತವೂ ಪತ್ನಿಗೆ ಪ್ರತಿಕೂಲವಾಗಿರುವುದೆ ಇದಕ್ಕೆ ಕಾರಣ. ಆದರೆ ಧರ್ಮಭಾವನೆಯಿಂದ ಬ್ರಹ್ಮಚರ್ಯ ವ್ರತವನ್ನು ಸ್ವೀಕರಿಸುವ ಪತಿಯು ತನ್ನ ಪತ್ನಿಯ ಮಾರ್ಗವನ್ನು ಸುಗಮ ಮಾಡಿಕೊಡುವನು. ಕಾಯಿದೆಯ ಅಭಿಪ್ರಾಯವನ್ನು ಲೆಕ್ಕಿಸದೆ, ಇಂಥ ಸ್ತ್ರೀಯ ಸಂಗಡ ತಾನು ಧರ್ಮವಿವಾಹ ದಿಂದಲೆ ಕಟ್ಟಲ್ಪಟ್ಟವನೆಂದು ತಿಳಿಯುವಂಥ ಮತ್ತು ಸಮಾಜದ ಮೂಲಕ ಹಾಗೂ ಕಾಯಿದೆಯ ಮೂಲಕ ಉಂಟಾಗುವ ಎಲ್ಲ ಸಂಕಟಗಳನ್ನು ಎದು ರಿಸಿ ಸಹಿಸುವಂಥ ಯೋಗ್ಯನಾದ ಪುರುಷನನ್ನು ಅವಳಿಗಾಗಿ ಹುಡುಕು ವನು. ಇಂತು ಕಾಯಿದೆ ಸುಧಾರಣೆಯ ಮಾರ್ಗವನ್ನು ಕೂಡ ಅವನು ಸರಳ ಮಾಡಿಕೊಡುವನು. ಇಂಥ ಹೊಸ ಪತಿಯು ಸಿಗುವ ವರೆಗೆ ಅವ ಳನ್ನು ಅವನು ಆದರದಿಂದ ಗೆಳೆಯನಂತೆ ತನ್ನಲ್ಲಿಯೆ ಇಟ್ಟುಕೊಳ್ಳುವನು.

## ೧೦ ವಿಧವಾವಿವಾಹ

೧ ಹಿಂದೂ ವಿಧವೆಯು ತ್ಯಾಗದ ಮತ್ತು ಪವಿತ್ರತೆಯ ಮೂರ್ತಿ. ಇವಳು ತಾಯಿಯಂತೆ ಸರ್ವರಿಗೂ ಪೂಜ್ಯಳು. ಇವಳು ಅಶುಭಕಾರಿಯೆಂದು ತಿಳಿಯುವ ಹಿಂದೂ ಸಮಾಜವು ಬಹು ದೊಡ್ಡ ಅಪರಾಧವನ್ನು ಮಾಡು ತ್ತಿರುವದು. ಶುಭಕಾರ್ಯಗಳಿಗೆ ಅವಳನ್ನು ಕರೆಸಿ ಅವಳಿಂದ ಆಶೀರ್ವಾದ ಗಳನ್ನು ಪಡೆಯಲು ಅವಶ್ಯವಾಗಿ ಪ್ರಯತ್ನಿಸಬೇಕು. ಪವಿತ್ರಳಾದ ವಿಧವೆಯು ಹಿಂದೂ ಸಮಾಜದ ಭೂಷಣವೆಂದು ತಿಳಿದು ಅವಳ ಮಾನ ಮರ್ಯಾದೆಯನ್ನೂ ಪ್ರತಿಷ್ಠೆಯನ್ನೂ ಹೆಚ್ಚಿಸಲು ಎಲ್ಲರೂ ಯತ್ನಿಸಬೇಕು.

೨ ಸ್ತ್ರೀಜಾತಿಯ ಬಗೆಗೆ ಪ್ರಚಾರದಲ್ಲಿರುವ ಭಾವನೆಗಳು ವಿಧವೆಗೆ ಘೋರವಾದ ಅನ್ಯಾಯವನ್ನು ಮಾಡಿವೆ. ಆದುದರಿಂದ ಹಿಂದೂ ವಿಧವೆಯ ಸ್ಥಿತಿ ಅಸ್ಪೃಶ್ಯರಂತೆ ಅತ್ಯಂತ ದಯಾಜನಕವಾಗಿದೆ.

೩ ವಿಧವೆಯು ತ್ಯಾಗದ ಮೂರ್ತಿ. ಆದರೆ ವೈಧವ್ಯವು ಬಲಾತ್ಕಾರ ದಿಂದ ಪಾಲಿಸಲು ಹಚ್ಚುವಂಥ ವ್ರತವಲ್ಲ. ಬಲಾತ್ಕಾರದಿಂದ ಮಾಡಿಸಿದ ತ್ಯಾಗವು ಅವಳಲ್ಲಿದ್ದ ದಿವ್ಯತೆಯನ್ನು ನಾಶಮಾಡುವದು. ಅವಳನ್ನು ಪೂಜ್ಯ ಮತ್ತು ಆದರ್ಶಭೂತಳನ್ನಾಗಿ ಮಾಡುವ ಬದಲು ದಯೆಗೆ ಪಾತ್ರ ಳನ್ನಾಗಿ ಮಾಡಿಬಿಡುವದು.

೪ ಆದ್ದರಿಂದ ಪುನರ್ವಿವಾಹವನ್ನು ಮಾಡಿಕೊಳ್ಳಲು ವಿಧುರರಿಗೆ ಎಷ್ಟು ಅಧಿಕಾರವಿದೆಯೋ ವಿಧವೆಯರಿಗೂ ಅಷ್ಟೇ ಇರುವುದು.

೫ ಬಾಲ್ಯವಿವಾಹದ ಸ್ವಾಭಾವಿಕ ಪರಿಣಾಮವೇ ಬಾಲವಿಧವೆ. ೧೫-೧೬ ವಯಸ್ಸಿಗಿಂತ ಮೊದಲು ಕನ್ಯೆಯ ವಿವಾಹವು ಆಗಕೂಡದು. ಆ ವಯಸ್ಸಿಗಿಂತ ಚಿಕ್ಕ ಕನ್ಯೆಗೆ ಬಂದ ವೈಧವ್ಯವು ವೈಧವ್ಯವೆ ಅಲ್ಲ. ಇಂತಹ ವಿಧವೆಯು ಕುಮಾರಿಯೆಂದು ತಿಳಿಯಬೇಕು. ಹಿರಿಯರು ಕುಮಾರೀ ಕನ್ಯೆಯ ಮದುವೆಯ ಬಗೆಗೂ ಚಿಂತಿಸುವಂತೆ ಈ ಕುಮಾರೀ ವಿಧವೆಯ ಮದುವೆಯ ಬಗೆಗೆ ಚಿಂತಿಸಬೇಕು. ಕುಮಾರಿಯ ಮದುವೆಯಂತೆಯೆ ಇವಳ ಮದುವೆಯನ್ನೂ ಮಾಡಬೇಕು.

೬ ಮದುವೆಯಾಗಲಿಚ್ಛಿಸುವ ಹಿಂದೂ ಯುವಕರು ಇಂತಹ ಬಾಲ ವಿಧವೆಯರನ್ನೆ ಮದುವೆಯಾಗಲು ಆಗ್ರಹ ಹಿಡಿದರೆ ಅವರು ಹಿಂದೂ ವಿಧವೆ ಯರ ಕಲ್ಯಾಣ ಮಾಡಿದಂತಾಗುವುದು. ತರುಣರಾದ ವಿಧುರರು ಪುನಃ ಮದುವೆ ಮಾಡಿಕೊಳ್ಳಲು ಬಯಸಿದರೆ ವಿಧವೆಯರನ್ನೆ ಮದುವೆಯಾಗು ವುದು ತಮ್ಮ ಧರ್ಮವೆಂದು ತಿಳಿಯಬೇಕು.

## ೧೧ ವರ್ಣಾಂತರ ವಿವಾಹ

೧ ಸಂಯಮ, ಸುಖ ಮತ್ತು ವರ್ಣದ (ವರ್ಣ ಎಂದರೆ ಉದ್ಯೋಗದ ಅಧಿಕಾರ) ದೃಷ್ಟಿಯಿಂದ ತನ್ನ ವರ್ಣದಲ್ಲಿಯೆ ಮದುವೆಯಾಗುವದು ಒಳಿ ತಾದದ್ದು. ಆದರೆ ಈಗ ವರ್ಣವ್ಯವಸ್ಥೆಯು ಲೋಪವಾದದ್ದರಿಂದ ಸ್ವಧರ್ಮೀಯ ರಲ್ಲಿಯೆ ಗುಣಕರ್ಮಗಳನ್ನು ನೋಡಿ ಶರೀರ ಸಂಬಂಧವನ್ನು ಬೆಳೆಸುವದು ಯೋಗ್ಯವಾದುದು. ಇಂತಹ ವರ್ಣಾಂತರವಿವಾಹವು ನಿರ್ದೋಷವಾಗಿರುವದು.

೨ ಪರದೇಶೀಯರೊಡನೆ ಮತ್ತು ಪರಧರ್ಮೀಯರೊಡನೆ ಮದುವೆ ಯಾಗಲು ಧರ್ಮದ ಪ್ರತಿಬಂಧವೇನೂ ಇಲ್ಲ. ಆದರೆ ಅದರಲ್ಲಿ ಅನೇಕ ವಿಘ್ನಗಳು ಬರುವದುಂಟು. ಆದ್ದರಿಂದ ಇಂಥ ಸಂಬಂಧಗಳು ಅಪರೂಪ ವಾಗಿ ಆದರೆ ಮಾತ್ರ ಶೋಭಿಸುವವು. ಆದರೆ ಅವುಗಳ ಉದ್ದೇಶವು ಪಾರಮಾರ್ಥಿಕ ಆಗಿರಬೇಕು.

## ಚತುರ್ಥ ಖಂಡ

# ಸತ್ಯಾಗ್ರಹ

### ೧ ಸತ್ಯಾಗ್ರಹದ ಧರ್ಮ

೧ ದ್ವಿತೀಯ ಖಂಡದಲ್ಲಿ ಸತ್ಯಾಗ್ರಹವನ್ನು ಕುರಿತು ಸಾಮಾನ್ಯವಾದ ದ್ದೊಂದು ಪ್ರಕರಣವುಂಟು. ಈ ಪ್ರಕರಣವನ್ನು ಓದುವ ಮೊದಲು ಅವನ್ನು ಇನ್ನೊಂದು ಸಲ ಓದಿಕೊಳ್ಳಬೇಕು.

೨ ವ್ಯಕ್ತಿ ಮತ್ತು ಸಮಾಜದ ನಡುವಿನ ಸಂಬಂಧವು ಈ ತೆರನಾಗಿ ಇರುವದು: ಯಾವ ಸಮಾಜದಲ್ಲಿ ಒಂದು ವ್ಯಕ್ತಿಯು ಜನ್ಮವಾಗುವದೊ ಆ ಸಮಾಜದ ಒಟ್ಟಾರೆ ಧರ್ಮದಲ್ಲಿ ಆದ ಪ್ರಗತಿಗಿಂತ ಆ ವ್ಯಕ್ತಿಯ ಪ್ರಗತಿಯು ಬಹಳ ಹೆಚ್ಚಾಗಿ ಮುಂದರಿಯಲಾರದು. ಧರ್ಮವಿಚಾರದಲ್ಲಿಯೇ ಆಗಲಿ ಧರ್ಮಸಾಧನೆಯಲ್ಲಿಯೇ ಆಗಲಿ ಭೂತಕಾಲದ ಪೂರ್ವ ಮಹಾಪುರುಷನಿಗಿಂತ ಇಂದಿನ ಮಹಾಪುರುಷನು ಮುಂದುವರಿದಿದ್ದರೆ ಆ ಪ್ರಾಚೀನ ಮಹಾಪುರುಷನ ಕಾಲದ ಸಮಾಜಕ್ಕಿಂತಲೂ ಇಂದಿನ ಸಮಾಜವು ಧರ್ಮ ವಿಚಾರದಲ್ಲೂ ಸಾಧನದಲ್ಲೂ ಮುಂದುವರಿದಿರುವದೆ ಅದಕ್ಕೆ ಕಾರಣವೆನ್ನಬಹುದು. ಹೀಗೆ ಮಾನವ ಸಮಾಜದಲ್ಲಿ ಧರ್ಮದ ಉತ್ತರೋತ್ತರ ಶುದ್ಧಿಯಾಗುತ್ತಿರುವದೆಂದು ತಿಳಿಯಬಹುದು.

೩ ಆದ್ದರಿಂದ, ಯಾರಾದರೂ ತಮ್ಮ ಸುತ್ತುಮುತ್ತಲು ಒಡೆದು ಕಾಣುವಂತೆ ನಡೆಯುತ್ತಿರುವ ಅಧರ್ಮದ ಕಡೆಗೆ ಗಮನಗೊಡದೆ ತಮ್ಮ ಆಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲು ಹೊರಟರೆ ಅದು ಶಕ್ಯವಾಗಲಾರದು.

೪ ಯಾವುದೊಂದು ವ್ಯಕ್ತಿಯು ಸ್ವತಃ ಸತ್ಯ ಅಹಿಂಸಾದಿ ಧರ್ಮಗಳಲ್ಲಿ ಸಿದ್ಧಿಯನ್ನು ಪಡೆಯಬೇಕಾಗಿದ್ದರೆ ಸಮಾಜದಲ್ಲಿ ನಡೆಯುತ್ತಿರುವ ಅಧರ್ಮವನ್ನು ವಿರೋಧಿಸುವದು ಅವನ ಕರ್ತವ್ಯವಾಗುವುದು.

೫ ತನ್ನಲ್ಲಿ ಸತ್ಯಾದಿ ಗುಣಗಳು ಎಷ್ಟು ಉತ್ಕರ್ಷಹೊಂದಿರುವವೊ ಅಧರ್ಮದ ವಿಷಯವಾಗಿ ಎಷ್ಟು ಸ್ಪಷ್ಟವಾದ ಕಟು ಅನುಭವವು ಉಂಟಾಗಿರು

ವುದೋ ಆ ಮಟ್ಟಿಗೆ ಸಮಾಜದಲ್ಲಿಯ ಅಧರ್ಮವನ್ನು ವಿರೋಧಿಸುವ ತನ್ನ ಕರ್ತವ್ಯ ಅವನಿಗೆ ತಿಳಿಯುವದು ಮತ್ತು ಆ ಕರ್ತವ್ಯಪಾಲನೆಗಾಗಿ ಅವನು ತನ್ನ ಶಕ್ತಿಯನ್ನೆಲ್ಲ ಉಪಯೋಗಿಸುವನು.

## ೨ ಸತ್ಯಾಗ್ರಹಿಯ ಕಾರ್ಯಮರ್ಯಾದೆ

೧ ಸತ್ಯಾಗ್ರಹವು ಈ ವರೆಗೂ ಚನ್ನಾಗಿ ಸಂಶೋಧಿತವಾದ ಸಂಪೂರ್ಣ ಶಾಸ್ತ್ರವಾಗಿಲ್ಲ. ಇದರ ಪ್ರಯೋಗವು ಇನ್ನೂ ಅಷ್ಟು ಮುಂದುವರಿದಿಲ್ಲ, ಬಾಲ್ಯಾವಸ್ಥೆಯಲ್ಲಿಯೆ ಇದೆ. ಇದರ ಪ್ರಯೋಗ ಮಾಡುವಂತಹ, ಇದರ ಪೂರ್ಣ ಶಕ್ತಿಯನ್ನು ಕಂಡುಹಿಡಿದಂತಹ ಮತ್ತು ಇದನ್ನು ಎಲ್ಲೆಲ್ಲಿಯೂ ಒರೆಗೆ ಹಚ್ಚುವಂತಹ ಒಬ್ಬನಾದರೂ ಪಂಡಿತನು ಈ ವರೆಗೂ ಕಂಡು ಬಂದಿಲ್ಲ.

೨ ಆದುದರಿಂದ ಸರ್ವಪ್ರಕಾರದ ಅಧರ್ಮ, ಅನ್ಯಾಯ, ಕಲಹ ಮುಂತಾದವುಗಳನ್ನು ಕೂಡಲೆ ದೂರೀಕರಿಸಲು ಬರುವಂತಹ, ಈ ಕ್ಷಣಕ್ಕೆ ಬಳಕೆಯಲ್ಲಿ ತರಲು ಬರುವಂತಹ ಒಂದು ಅಹಿಂಸಾಮಾರ್ಗವು ಈಗಲೆ ಸಿಕ್ಕೀತೆಂದು ನಾವು ಆಶಿಸಬಾರದು. ಆದರೆ ಸತ್ಯ ಮತ್ತು ಅಹಿಂಸೆಯಲ್ಲಿ ಇಂತಹದೊಂದು ಶಕ್ತಿಯುಂಟೆಂಬ ವಿಶ್ವಾಸವನ್ನೂ ಶ್ರದ್ಧೆಯನ್ನೂ ಇಟ್ಟು ಸತ್ಯಾಗ್ರಹಿಯು ಆ ಮಾರ್ಗವನ್ನು ಹುಡುಕಲು ಯತ್ನಿಸುತ್ತಿರಬೇಕು.

೩ ಆದರೆ ಈ ಪ್ರಯತ್ನದಿಂದ ಈ ಅವಧಿಯಲ್ಲಿ ಅನ್ಯಾಯ, ಅಧರ್ಮ ಮತ್ತು ಕಲಹಗಳು ಕೂಡಲೆ ದೂರವಾಗದಿರುವುದನ್ನು ಕಂಡು ಸತ್ಯಾಗ್ರಹಿಯು ನಿರುತ್ಸಾಹಿಯಾಗಬಾರದು; ಕಿಂಕರ್ತವ್ಯಮೂಢನಾಗಿ ಕ್ರಿಯಾಶೂನ್ಯನೂ ಆಗಬಾರದು.

೪ ಅಧರ್ಮವನ್ನು ನಾಶಮಾಡುವುದಕ್ಕಾಗಿ ಸತ್ಯಾಗ್ರಹದ ಮಾರ್ಗವನ್ನು ಶೋಧಿಸಲಾರದವರು ಹಿಂಸಾತ್ಮಕ ಉಪಾಯಗಳನ್ನು ಕೈಕೊಳ್ಳಬಹುದು. ಸತ್ಯಾಗ್ರಹಿಯು ಅವನ್ನು ಕೇವಲ ನಿಷೇಧಿಸಬೇಕು, ಇಲ್ಲವೆ ಆರ್ಥಿಕ ಮತ್ತು ಶಾರೀರಿಕ ಸಹಾಯ ಮಾಡದೆ ತಟಸ್ಥನಾಗಿರಬೇಕು. ಆದರೆ ಇಷ್ಟರಿಂದಲೆ ಹಿಂಸೆಯ ಬಗೆಗೆ ಇದ್ದ ಇವನ ನೈತಿಕ ಹೊಣೆಯು ಕಡಿಮೆಯಾಗುವದಿಲ್ಲ. ಅಧರ್ಮಗಳನ್ನು ನಾಶಮಾಡಲು ಅಹಿಂಸಾತ್ಮಕ ಉಪಾಯಗಳನ್ನು ಹೇಳಿ ಅವುಗಳಂತೆ ತಾನು ಆಚರಿಸಿ ಇವುಗಳಿಂದಲೆ ಅಧರ್ಮವು ದೂರಾಗುವದೆಂದು ಸಿದ್ಧಮಾಡಿ ತೋರಿಸಬೇಕು, ಎಂದರೆ ಮಾತ್ರ ಅವನು ಹೊಣೆಯಿಂದ

ಮುಕ್ತನಾಗುವನು.

೫ ಇದರಿಂದ ಸತ್ಯಾಗ್ರಹಿಯು ಕೇವಲ ತಟಸ್ಥನಿರುವುದು ಮತ್ತು ನಿಷೇಧಿಸುವುದು ಯಾವಾಗಲೂ ತಪ್ಪಾದುದೆಂದು ಹೇಳಿದಂತಾಗುವುದಿಲ್ಲ. ಆದರೆ ಎಷ್ಟೋ ಸಲ ಇಷ್ಟೇ ಮಾಡಬೇಕಾಗುವುದು ಮತ್ತು ಇಷ್ಟೇ ಮಾಡುವದು ಕರ್ತವ್ಯವಾಗುವದು.

೬ ಸತ್ಯಾಗ್ರಹಿಯು ಹಿಂಸೆಯಲ್ಲಿ ಅಲ್ಪ-ಸ್ವಲ್ಪ ಸೇರಿಕೊಳ್ಳಬೇಕಾಗುವಂತಹ ಎಷ್ಟೋ ಪ್ರಸಂಗಗಳು ಬಂದು ಒದಗುವವು. ಉದಾಹರಣೆಗೆ ಅಪರಾಧಿಗೆ ಶಿಕ್ಷೆ ವಿಧಿಸುವದು; ಯುದ್ಧವನ್ನು ಹೂಡಿದಾಗ ತನ್ನ ದೇಶಕ್ಕೆ ಸಹಾಯ ಮಾಡುವದು. ತಾನು ಯಾವ ರಾಜ್ಯದಲ್ಲಿ ಇರುವನೊ ಮತ್ತು ಸಂರಕ್ಷಿಸಲ್ಪಡುತ್ತಿರುವನೊ ಆ ರಾಜ್ಯಕ್ಕೆ ಅಹಿಂಸಾತ್ಮಕವಾದ ಮಾರ್ಗಗಳನ್ನು ತೋರಿಸಲು ಅಸಮರ್ಥನಾಗಿ ಕೇವಲ ಹಿಂಸೆಯನ್ನು ನಿಷೇಧಿಸಿದರೆ ಮತ್ತು ಅಸಹಕಾರವನ್ನು ಮಾಡಿದರೆ ಅವನು ಹಿಂಸೆಯಲ್ಲಿ ತೊಡಗಲಿಲ್ಲವೆಂದು ಎಣಿಸಲಾಗದು.

೭ ಆದರೆ ಹೀಗೆ ಹಿಂಸೆಗೆ ನೆರವಾಗುತ್ತಿರುವಾಗ ಇವನು ತನ್ನಲ್ಲಿರುವ ಸತ್ಯನಿಷ್ಠೆಯನ್ನೂ ಅಹಿಂಸಾವೃತ್ತಿಯನ್ನೂ ತೋರಿಸಬೇಕು; ಮತ್ತು ಅಹಿಂಸಾತ್ಮಕ ಮಾರ್ಗಗಳನ್ನು ಹುಡುಕಲು ಯತ್ನಿಸಬೇಕು.

## ೩ ಸತ್ಯಾಗ್ರಹದ ಮೂಲ ಸಿದ್ಧಾಂತಗಳು

೧ ಮನುಷ್ಯನು ಎಷ್ಟೆ ಸ್ವಾರ್ಥಿಯಾಗಿದ್ದರೂ ತನ್ನ ಸ್ವಾರ್ಥಸಾಧನೆಗಾಗಿ ಮನಬಂದ ಕುಟಿಲ ಉಪಾಯಗಳನ್ನು ಮಾಡಲು ಸಿದ್ಧನಿದ್ದರೂ ತನ್ನ ಅಂತರಾಳದಲ್ಲಿ ಸತ್ಯವು ಒಂದುಂಟು ಎಂಬುದರ ಅರಿವು ಅವನಿಗೆ ಇರುವದು ಮತ್ತು ಅದರ ವಿಷಯವಾಗಿ ಆದರವೂ ಭಯವೂ ಇದ್ದೇ ಇರುವದು. ಮನುಷ್ಯ ಜಾತಿಯ ಹೃದಯದಲ್ಲಿರುವ ಈ ಗುಪ್ತಶ್ರದ್ಧೆ, ಆದರ ಮತ್ತು ಭಯ ಇವೇ ಸತ್ಯಾಗ್ರಹಶಾಸ್ತ್ರದ ಅಡಿಗಲ್ಲು. ಮಾನವನ ಹೃದಯದಲ್ಲಿದ್ದ 'ಅಂತ:ಕರಣದ ಧ್ವನಿ' ಎನಿಸುವದು ಇದೇ.

೨ ಸ್ವಾರ್ಥಕ್ಕೆ ಬಲಿಯಾದ ಮನುಷ್ಯನು ಈ ಅಂತಃಕರಣದ ಧ್ವನಿಯನ್ನು ಆದಷ್ಟು ಹೆಚ್ಚು ಹೊತ್ತು ದುರ್ಲಕ್ಷಿಸಲು ಇಲ್ಲವೆ ಅದನ್ನು ಮೆಟ್ಟಲು ಪ್ರಯತ್ನಿಸುವನು. ಇಂಥವನನ್ನು ವಿರೋಧಿಸುವವನು ನಿಜವಾದ ಸತ್ಯಾಗ್ರಹಿಯಾಗಿದ್ದ ಪಕ್ಷದಲ್ಲಿ ಸ್ವಾರ್ಥಕ್ಕೆ ಬಲಿಯಾದ ಈ ಮನುಷ್ಯನು ಈ

ಧ್ವನಿಗೆ ಕಿವಿಗೊಡದೆ ಇರಲಾರನು.

೩ ಈ ಧ್ವನಿಯು ಅವನೆದುರು ಅನೇಕ ರೂಪಗಳಲ್ಲಿ ಬಂದು ನಿಲ್ಲುವುದು. ಅವನಿಗೆ ತನ್ನ ಅನ್ಯಾಯದ ಮನವರಿಕೆಯಾಗುವುದು ಮತ್ತು ಅದಕ್ಕಾಗಿ ಅವನಿಗೆ ಪಶ್ಚಾತ್ತಾಪವಾಗುವುದು. ಇದು ಅದರ ಶ್ರೇಷ್ಠ ಪ್ರಕಾರವು. ಯಾವುದಕ್ಕೆ 'ಹೃದಯಪಲ್ಲಟ 'ಎಂದು ಎನ್ನುತ್ತೇವೊ ಅದೇ ಇದು.

೪ ಆದರೆ ಈ ಧ್ವನಿಯು ಇದಕ್ಕೂ ಮೆಲ್ಲನೆ ಕೂಡ ಕೇಳುವದು-ಲೊಕ ಲಜ್ಜೆಯ ರೂಪದಲ್ಲಿ ಇಲ್ಲವೆ ಸರ್ವನಾಶವಾಗುವದೆಂಬ ಭಯದ ರೂಪದಲ್ಲಿ.

೫ ಸತ್ಯಾಗ್ರಹಿಯನ್ನು ಒಂದೆರಡು ವ್ಯಕ್ತಿಗಳು ವಿರೋಧಿಸುವುದರ ಬದಲು ಒಂದು ಸಮಾಜ, ಒಂದು ಜಾತಿ ಇಲ್ಲವೆ ಒಂದು ತಂತ್ರವು ವಿರೋಧಿಸುವಾಗ ಈ ತೆರದ ಅಂತರ್ನಾದವು ಅವರಲ್ಲಿಯೆ ಹೆಚ್ಚು ಶುದ್ಧ ಚರಿತ್ರೆಯುಳ್ಳ ಮಾನವನಿಗೆ ಮೊದಲು ಕೇಳಿಬರುವುದು. ಮೊದಲು ಅವನ ಹೃದಯ ಪಲ್ಲಟವಾಗುವುದು. ಬಳಿಕ ಅವನು ಅದನ್ನು ತನ್ನ ಜನರಿಗೆ ಕೇಳಿಸುವನು ಮತ್ತು ಸತ್ಯದ ಪಕ್ಷವನ್ನು ಹಿಡಿದು ವಿರೋಧಿಸುವನು.

೬ 'ಅಂತಃಕರಣದ ಧ್ವನಿ' ಯನ್ನು ಕೇಳುವಂತೆ ವಿರೋಧಿಯ ಹೃದಯವನ್ನು ಎಚ್ಚರಿಸುವುದೇ ಪ್ರತಿಯೊಂದು ಸತ್ಯಾಗ್ರಹದ ಗುರಿ. ವಿರೋಧಿಯ ಹೃದಯವು ಒಮ್ಮೆ ಎಚ್ಚತ್ತಿತೆಂದರೆ ಮುಂದೆ ಅನ್ಯಾಯದ ಪರಿಮಾರ್ಜನವೆಂದು ಅವನು ಮಾಡತಕ್ಕುದ್ದೆಲ್ಲ ಅವನಿಂದ ಸ್ವಾಭಾವಿಕವಾಗಿಯೆ ಮುಖ್ಯ ಸಾಧ್ಯದ ಫಲಶ್ರುತಿ ಎಂದು ಆಗುವದು.

## ೪ ಸತ್ಯಾಗ್ರಹದ ಸಾಮಾನ್ಯ ಲಕ್ಷಣಗಳು

೧ ಅಧರ್ಮವನ್ನು ಸತ್ಯ-ಅಹಿಂಸಾದಿ ಸಾಧನಗಳಿಂದಲೆ ವಿರೋಧಿಸಬೇಕೆಂಬ ನಿಯಮವು ಸಾರ್ವತ್ರಿಕವಾದುದು.

೨ ಅಧರ್ಮವನ್ನು ನಾಶ ಮಾಡುವ ಧರ್ಮಯುಕ್ತ ಉಪಾಯಗಳು ಇದ್ದೇ ಇರುವವು ಎಂಬ ಶ್ರದ್ಧೆಯಿಂದಲೂ ವಿಶ್ವಾಸದಿಂದಲೂ ಯೋಚಿಸುವ ಸತ್ಯಾಗ್ರಹಿಗೆ ಅಧರ್ಮವನ್ನು ವಿರೋಧಿಸುವ ಧರ್ಮಯುಕ್ತವಾದ ದಾರಿಗಳು ಹೊಳೆದೇ ಹೊಳೆಯುವವು.

೩ ಸತ್ಯಾಗ್ರಹ ಧರ್ಮವನ್ನು ಆಚರಿಸುವಾಗ ಸತ್ಯಾಗ್ರಹಿಯೆ ಕಷ್ಟ ಸಹಿಸಬೇಕಾಗುವುದು. ಇದರಲ್ಲಿ ವಿರೋಧೀ ಪಕ್ಷಕ್ಕೆ ದುಃಖ ಕೊಡಬೇಕೆಂಬ ಉದ್ದೇಶವು ಇರುವುದೇ ಇಲ್ಲ. ಆದುದರಿಂದ ಸತ್ಯಾಗ್ರಹಿಯು ತಾನು

ತಪ್ಪು ಮಾಡಿದರೆ ಅವಶ್ಯವಿದ್ದುದಕಿಂತ ಹೆಚ್ಚು ದುಃಖವನ್ನು ಅನುಭವಿಸ ಬೇಕಾಗಬಹುದು.

೪ ಸತ್ಯಾಗ್ರಹದಿಂದ ವಿರೋಧಿಯೊಡನೆ ದ್ವೇಶವು ಬೆಳೆಯುವ ಬದಲು ಅದು ಕಡಿಮೆಯಾಗುವುದು. ಸತ್ಯಾಗ್ರಹದ ಕೊನೆಯಲ್ಲಿ ಎರಡೂ ಪಕ್ಷ ಗಳು ಒಂದಾಗಿ ಗೆಳೆತನವು ಬೆಳೆಯುವುದು.

೫ ಅಧರ್ಮವನ್ನು ವಿರೋಧಿಸಲು ಸತ್ಯಾಗ್ರಹದ ಯೋಗ್ಯ ಮಾರ್ಗಗಳು ಹೊಳೆಯುವ ವರೆಗೆ ಸತ್ಯಾಗ್ರಹಿಯು ಯಾವ ತರದಿಂದಲೂ ಮುಂದಡಿ ಯನ್ನಿಡಲು ಆತುರನಾಗಬಾರದು. ಶಾಂತಿಯಿಂದ ಪರಮಾತ್ಮನನ್ನು ಪ್ರಾರ್ಥಿಸುತ್ತ ಜನರ ಸೇವೆಯನ್ನು ಮಾಡುತ್ತಿರಬೇಕು. ಈ ರೀತಿ ಯಿಂದ ಇರುವಾಗ ಒಂದು ದಿನ ತನಗೆ ಸ್ಪಷ್ಟವಾದ ಮಾರ್ಗವು ಹೊಳೆಯು ವುದೆಂದು, ಅದನ್ನು ಕಾರ್ಯರಂಗದಲ್ಲಿ ತರುವ ಬಲವೂ ತನಗೆ ದೊರೆಯುವು ದೆಂದು, ಇಲ್ಲವೆ ಪರಮಾತ್ಮನೆ ತನ್ನ ತರತರದ ಶಕ್ತಿಗಳಿಂದ ಆ ಅಧರ್ಮವನ್ನೂ ನಷ್ಟಪಡಿಸುವನೆಂದು ನಂಬಿಗೆಯನ್ನಿಡಬೇಕು, ಶ್ರದ್ಧೆಯನ್ನಿಡಬೇಕು.

೬ ಸತ್ಯಾಗ್ರಹದ ಶಸ್ತ್ರವು ಸಂಘಬಲವನ್ನು ಅವಲಂಬಿಸಿಲ್ಲ. ಆದರೆ ಸಂಘಬಲದಿಂದ ಇದರ ಶಕ್ತಿಯು ಬೆಳೆಯಬಹುದು. ನಿಜವಾದ ಸತ್ಯಾ ಗ್ರಹದ ಮತ್ತು ಸುಳ್ಳು ಸತ್ಯಾಗ್ರಹದ ನಡುವಿನ ಭೇದವನ್ನು ಪರೀಕ್ಷಿಸುವ ಬೀಗದ ಕೈ ಇದು:- ಸತ್ಯಾಗ್ರಹದ ಸೂಚನೆ ಕೊಡುವವನು ತಾನು ಒಬ್ಬನೇ ಆಗಿ ಅದನ್ನು ಆಚರಿಸಲು ಸಿದ್ಧನಿರದಿದ್ದರೆ ಅವನು ನಿಜವಾದ ಸತ್ಯಾಗ್ರಹಿಯಲ್ಲ; ನಿಜವಾದ ಸತ್ಯಾಗ್ರಹಿಯು ತನಗೆ ಸ್ಪಷ್ಟವಾಗಿ ತೋರಿದ ಮಾರ್ಗವನ್ನು ಹಿಡಿಯಲು ತಾನೊಬ್ಬನೇ ಆದರೂ ಸಿದ್ಧನಿರುವನು.

೭ ತಾನೊಬ್ಬನೆ ಆದರೂ ಸತ್ಯಾಗ್ರಹವನ್ನು ಆಚರಿಸಲು ಸಿದ್ಧನಿರು ವವನು ಯಾವಾಗಲೂ ಯೋಗ್ಯ ಮಾರ್ಗವನ್ನೆ ಅವಲಂಬಿಸುವನು ಎಂದು ಹೇಳಲಾಗದು. ಅವನು ತಪ್ಪು ಮಾಡಿದರೆ ಮೂರನೆ ಸೂತ್ರದಲ್ಲಿ ಹೇಳಿ ದಂತೆ ದುಃಖವನ್ನು ಅನುಭವಿಸಬೇಕಾಗುವುದು.

೮ ಸತ್ಯಾಗ್ರಹಿಯು ಒಣ ಪ್ರತಿಷ್ಠೆಯ ಕಡೆಗೆ ಗಮನಕೊಡುವದಿಲ್ಲ. ತನ್ನ ವಿಚಾರಸರಣಿಯಲ್ಲಿ ಅಥವಾ ಯೋಚನೆಯಲ್ಲಿ ತಪ್ಪಾಗಿರುವದು ಎಂದು ತಿಳಿದ ಕೂಡಲೆ ಅವನು ಎಷ್ಟೇ ಮುಂದುವರಿದಿದ್ದರೂ ಅಲ್ಲಿಯೆ ನಿಂತುಬಿಡು ವನು ಅಥವಾ ಹಿಂದಕ್ಕೆ ಸರಿಯುವನು. ತನ್ನ ತಪ್ಪುಗಳನ್ನು ಒಪ್ಪಿ ಕೊಳ್ಳಲೂ ಹಾನಿಯನ್ನು ಸಹಿಸಲೂ ಅವಕ್ಕಾಗಿ ಪ್ರಾಯಶ್ಚಿತ್ತವನ್ನು ಅನು

ಭವಿಸಲೂ ಅವನು ನಾಚುವದಿಲ್ಲ. ಏಕೆಂದರೆ ಸತ್ಯದಿಂದ ಭಿನ್ನವಾದ ಯಾವುದೇ ವಿಚಾರವು ಮತ್ತು ಕಾರಣವು ಸತ್ಯಕ್ಕಿಂತ ಕಡಿಮೆ ಮಹತ್ವದ್ದೆಂದು ಅವನು ತಿಳಿಯುವನು. ಇದರಿಂದ ಅವನ ಇಷ್ಟಕಾರ್ಯವು ಕೆಡದೆ ಸುಧಾರಿಸುವುದು. ಅವನು ಸರಿದುದು'ಹಿಂದೆ' ಅಲ್ಲ ನಿಜವಾಗಿಯೂ ಮುಂದೆ ಎಂದು ಆ ಮೇಲೆ ಗೊತ್ತಾಗುವುದು.

## ೫ ಸತ್ಯಾಗ್ರಹದ ಪ್ರಸಂಗಗಳು

ಕೆಳಗಿನ ನಿಯಮುಗಳು ಮಾರ್ಗದರ್ಶಕವೆಂದು ಮಾತ್ರ ತಿಳಿಯಬೇಕು.

೧ ಸತ್ಯಾಗ್ರಹಿಯು ತನಗೆ ಆದ ವ್ಯಕ್ತಿಗತ ಅನ್ಯಾಯಗಳ ವಿರುದ್ಧವಾಗಿ ಕೂಡಲೆ ಸತ್ಯಾಗ್ರಹವನ್ನು ಹೂಡಲಾಗದು. ಅವನು ಈ ಅನ್ಯಾಯಗಳನ್ನು ಸಹಿಸಿಕೊಂಡು ವಿರೋಧಿಯನ್ನು ಪ್ರೇಮದಿಂದ ಗೆಲ್ಲಲು ಪ್ರಯತ್ನಿಸುವನು. ತನಗಾಗುತ್ತಿರುವ ಅನ್ಯಾಯಗಳಲ್ಲಿ ಸಾಮಾಜಿಕ ಅಹಿತವು ಸ್ವಲ್ಪವಾದರೂ ಇದ್ದುದು ಕಂಡುಬಂದರೆ ಮಾತ್ರ ಅವನ್ನು ಸತ್ಯಾಗ್ರಹದಿಂದ ವಿರೋಧಿಸುವನು.

೨ ಇದೇ ರೀತಿಯಾಗಿ ವ್ಯಕ್ತಿಯಿಂದ ಆಗುವ ಅನ್ಯಾಯ ಮತ್ತು ಸಮಾಜ ಇಲ್ಲವೆ ಸತ್ತಾಧಿಕಾರಿಗಳಿಂದ ಆಗುವ ಅನ್ಯಾಯ ಇವುಗಳಲ್ಲಿ ಸತ್ಯಾಗ್ರಹಿಯು ತಾರತಮ್ಯವನ್ನು ಮಾಡಬೇಕಾಗುವುದು. ಬಲಿಷ್ಠ ವ್ಯಕ್ತಿಯು ನಿರ್ಬಲ ವ್ಯಕ್ತಿಯನ್ನು ಪೀಡಿಸುವದು ಅಪೂರ್ಣವಾದ ಈ ಮಾನವ ಸಮಾಜದಲ್ಲಿ ತಪ್ಪಿದ್ದಲ್ಲ. ಈ ತರದ ಎಲ್ಲ ಜಗಳಗಳಲ್ಲಿ ಬೀಳುವದು ಸತ್ಯಾಗ್ರಹಿಗೆ ಅಶಕ್ಯ. ಇಲ್ಲಿ ಅವನು ತನ್ನ ಶಕ್ತಿ ಎಷ್ಟು, ತನ್ನ ಮೇರೆ ಎಷ್ಟು, ಅನ್ಯಾಯವು ಯಾವ ತರದ್ದು, ಅದರ ತಾತ್ಕಾಲಿಕ ಮಹತ್ವವು ಎಷ್ಟು, ನ್ಯಾಯವನ್ನು ಸಂಪಾದಿಸುವ ಸಾಮಾನ್ಯವಾದ ಮತ್ತು ಕಾಯಿದೇಬದ್ಧ ಮಾರ್ಗಗಳು ಯಾವವು ಮುಂತಾದ ವಿಷಯಗಳನ್ನು ಕುರಿತು ಯೋಚಿಸಬೇಕಾಗುವದು. ಎಲ್ಲಿ ಸ್ಪಷ್ಟವಾಗಿ ಅನ್ಯಾಯವಾಗುವದೆಂದು ತೋರುವುದೊ ಅಲ್ಲಿ ಅವನು ತನ್ನ ಪ್ರಾಣವನ್ನು ತೆತ್ತಾದರೂ ಅದನ್ನು ನಿಲ್ಲಿಸಲು ಯತ್ನಿಸುವನು.

೩ ಸಾಮಾಜಿಕ ಹಾಗೂ ರಾಜಕೀಯ ಅನ್ಯಾಯಗಳಲ್ಲಿಯೂ ತಾರತಮ್ಯವನ್ನು ಮಾಡಬೇಕಾಗುವುದು. ಒಂದು ಅಧರ್ಮವು ಅಥವಾ ಅನ್ಯಾಯವು ಇಂತಹದಿರುವದು-ಯಾವುದರಲ್ಲಿ ಅಧರ್ಮದ ಅಥವಾ ಅನ್ಯಾಯದ ಕಾಯಿದೆ

ಇರುವುದಿಲ್ಲವೊ ಆದರೆ ಯಾವುದರ ಅಮಲು ಅಧರ್ಮದಿಂದ ಇಲ್ಲವೆ ಅನ್ಯಾಯ ದಿಂದ ಆಗುವುದೋ ಮತ್ತು ಯಾವುದನ್ನು ಅಮಲಿನಲ್ಲಿ ತರುವವನು ತನ್ನ ಅನ್ಯಾಯವನ್ನು ಕಾಯಿದೆಯ ಹಿಂದೆ ಬಚ್ಚಿಡುವನೊ, ಇಲ್ಲವೆ ಕಾಯಿದೆಯನ್ನೆ ತನ್ನ ಶಸ್ತ್ರವನ್ನಾಗಿ ಮಾಡಿಕೊಳ್ಳುವನೊ ಅದಕ್ಕೇ ಅಧರ್ಮವೆನ್ನಬಹುದು, ಇಲ್ಲವೇ ಅನ್ಯಾಯವೆನ್ನಬಹುದು. ಇದರಲ್ಲಿ ಅವನು ತನ್ನ ನ್ಯಾಯದ ಬಗೆಗೆ ಇಲ್ಲವೆ ಧರ್ಮದ ಬಗೆಗೆ ದಂಭವನ್ನು ತಾಳಬೇಕಾಗುವದು. ಇದು ಕೂಡ ಮಾನವ ಸಮಾಜದಲ್ಲಿ ಜರುಗತಕ್ಕದ್ದೆ. ಮಾನವ ಸಮಾಜದಲ್ಲಿ ಸದ್ಗುಣಗಳು ಮತ್ತು ಸಮಭಾವನೆಯು ವೃದ್ಧಿ ಹೊಂದಿದ ಹಾಗೆ ಈ ತರದ ಸ್ಥಿತಿಯು ಸುಧಾರಿಸುತ್ತ ಹೋಗುವದು. ಇಲ್ಲಿಯೂ ತಾನು ಮಾಡುವುದು ನ್ಯಾಯವಾದದು, ಧರ್ಮವಾದುದು ಎಂದು ಹೇಳಿ ಧರ್ಮದ, ನ್ಯಾಯದ ಮುಸುಕು ಹಾಕಿಕೊಳ್ಳುವುದು ದಂಭಾಚಾರಿಯು ಸತ್ಯಕ್ಕೆ ಅರ್ಪಿಸಿದ ಶ್ರದ್ಧಾಂಜಲಿ ಎಂದು ಬಗೆದು ಸಮಾಧಾನ ಪಡಬೇಕಾಗುವದು. ಈ ತರದ ದಂಭಾಚಾರವು ಎಲ್ಲಕಡೆಗೂ ಕಂಡುಬರಲಾರಂಭಿಸಿದರೆ ಸತ್ಯಾಗ್ರಹವನ್ನು ಹೂಡುವ ಪ್ರಸಂಗವು ಬರುವದು, ಆಗ ಅದರ ಮಾರ್ಗಗಳೂ ಹೊಳೆಯುವವು. ಉದಾ:- ಎಲ್ಲಕಡೆಯಲ್ಲೂ ದಬ್ಬಾಳಿಕೆ ನಡೆಯುತ್ತಿರುವಾಗ ಸತ್ಯಾಗ್ರಹಿಯು ತನ್ನ ರಕ್ಷಣೆ ಮಾಡಿಕೊಳ್ಳದೆ ಶಿಕ್ಷೆಯನ್ನು ಸಹಿಸಿಕೊಳ್ಳಬೇಕಾಗುವದು. ಇದು ಸತ್ಯಾಗ್ರಹದ ಸ್ವತಂತ್ರವಾದ ಒಂದು ರೀತಿಯಾಗಬಹುದು.

೪ "ನೀವು ಬೇಕಾದುದನ್ನು ಮಾಡಿರಿ ನಾವು ಅನ್ಯಾಯವನ್ನು ಮಾಡಿಯೆ ಮಾಡುವೆವು" ಎಂಬ ನಿರ್ಲಜ್ಜ ಭಾವನೆಯು ತಾಂಡವವಾಡುತ್ತಿದ್ದರೆ, ಇಲ್ಲವೆ ನ್ಯಾಯದ ಹೆಸರಿನಿಂದ ಅನ್ಯಾಯ ಅಥವಾ ಅಧರ್ಮವು ನಡೆಯುತ್ತಿದ್ದರೆ ಅದನ್ನು ಸತ್ಯಾಗ್ರಹಶಸ್ತ್ರದಿಂದ ವಿರೋಧಿಸುವದು ಕರ್ತವ್ಯವು. ಏಕೆಂದರೆ ಇಂಥ ಅನ್ಯಾಯವನ್ನು ಅಥವಾ ಅಧರ್ಮವನ್ನು ಸಹಿಸುವವನ ಸತ್ವಹಾನಿಯಾಗುತ್ತದೆ.

## ೬ ಸತ್ಯಾಗ್ರಹದ ಪ್ರಕಾರಗಳು

೧ ಸತ್ಯಾಗ್ರಹವು ಎಷ್ಟು ರೀತಿಯಿಂದ ಆಗಬಲ್ಲದೆಂಬದನ್ನು ಸಮಗ್ರವಾಗಿ ಹೇಳಲಾಗುವದಿಲ್ಲ. ಅಧರ್ಮದ ಸ್ವರೂಪ, ಅದರ ತೀವ್ರತೆ, ಅದನ್ನು ಆಚರಿಸತಕ್ಕ ವ್ಯಕ್ತಿಯ ಮತ್ತು ಸಮಾಜದ ವಿಶೇಷತೆಗಳು, ಸಮಾಜದ

ಮತ್ತು ತನ್ನ ನಡುವೆ ಇರುವ ಸಂಬಂಧ, ತನ್ನ ಹಾಗೂ ತನ್ನ ಪಕ್ಷದವರ ಜೀವನದೊಳಗಿಂದ ಅಧರ್ಮವನ್ನು ಕಿತ್ತುಹಾಕುವುದರಲ್ಲಿ ದೊರೆತ ಸಿದ್ಧಿ, ಈ ಎಲ್ಲ ವಿಷಯಗಳನ್ನು ಸತ್ಯಾಗ್ರಹದ ಪದ್ಧತಿ, ಪ್ರಕಾರ, ಮತ್ತು ಪ್ರಮಾಣವು ಅವಲಂಬಿಸಿರುವದು.

೨ ಒಂದು ಕುಟುಂಬದಲ್ಲಿರುವ ವ್ಯಕ್ತಿಯು ಅದೇ ಕುಟುಂಬದ ಅಧರ್ಮದಿಂದ ನಡೆಯುವಂಥ ಇನ್ನೊಬ್ಬ ವ್ಯಕ್ತಿಯ ವಿರುದ್ಧ ಸತ್ಯಾಗ್ರಹದ ಯಾವ ಪದ್ಧತಿಯನ್ನು ಅನುಸರಿಸಬಲ್ಲನೋ ಹೆಚ್ಚು-ಕಡಿಮೆಯಾಗಿ ಅದೇ ಪದ್ಧತಿಯನ್ನು ಸಮಾಜದಲ್ಲಿಯೂ ಅನುಸರಿಸುವದು ಸಾಧ್ಯವು ಎಂದು ಸಾಮಾನ್ಯವಾಗಿ ಹೇಳಬಹುದು.

೩ ಸತ್ಯಾಗ್ರಹದಲ್ಲಿ ಈ ರೀತಿ ತಿಳಿಹೇಳುವಿಕೆಯಿಂದ ಮೊದಲು ಮಾಡಿ ಉಪವಾಸ, ಅಸಹಕಾರ, ಸವಿನಯಭಂಗ, ಕುಟುಂಬ–ಸಮಾಜ–ರಾಜ್ಯ ಇತ್ಯಾದಿಗಳ ತ್ಯಾಗ, ತನ್ನ ಜನ್ಮಸಿದ್ಧವಾದ ಅಧಿಕಾರಗಳನ್ನು ಶಾಂತ ರೀತಿಯಿಂದ ನಡೆಸುವದು, ಈ ಕಾರ್ಯಗಳನ್ನು ಮಾಡುತ್ತಿರುವಾಗ ಬಂದ ಸಂಕಟಗಳನ್ನು ಸಹಿಸುವದು, ಇವೆಲ್ಲ ಬೇರೆ ಬೇರೆ ಎಷ್ಟೋ ಪ್ರಕಾರಗಳು ಇರುವವು.

೪ ಇವುಗಳೊಳಗಿಂದ ವಿವೇಕದಿಂದಲೂ ತಾರತಮ್ಯಬುದ್ಧಿಯಿಂದಲೂ ಯೋಗ್ಯ ಉಪಾಯಗಳನ್ನು ಆರಿಸಿ ಯೋಗ್ಯವಾದ ಪ್ರಮಾಣದಲ್ಲಿ ಆಚರಿಸಬೇಕು. ಇದೆಲ್ಲವೂ ಅನುಭವದಿಂದ ತಿಳಿಯುವದು. ಆದರೆ ಕೆಲವು ಉಪಯುಕ್ತ ಸೂಚನೆಗಳನ್ನು ಮುಂದಿನ ಪ್ರಕರಣಗಳಲ್ಲಿ ಕೊಡಲಾಗಿದೆ.

೫ ಸತ್ಯಾಗ್ರಹವು ಆತ್ಮಶಕ್ತಿಯ ಇನ್ನೂ ಅಪೂರ್ಣವಾಗಿ ಪರಿಶೋಧಿಸಲ್ಪಟ್ಟ ಅಸ್ತ್ರವೆಂದು ನಾವು ನೆನಪಿನಲ್ಲಿಡಬೇಕು. ಕಾಯಾ-ವಾಚಾ-ಮನಸಾ ಸತ್ಯ ಮತ್ತು ಅಹಿಂಸೆಯನ್ನು ಆಚರಿಸುತ್ತ ಅದರ ಶಕ್ತಿಯನ್ನು ಹುಡುಕಲು ಹೆಣಗುವ ತಪಸ್ವಿಗೆ ಅದರ ಅನೇಕ ಪ್ರಕಾರಗಳು ಗೊತ್ತಾಗುವುವು; ಅಲ್ಲದೆ ಅದರ ಅಖಂಡ ಅನಂತ ಶಕ್ತಿಯ ಅರಿವೂ ಉಂಟಾಗುವುದು.

೬ ಸತ್ಯಾಗ್ರಹದಲ್ಲಿ ನಿಜವಾಗಿ ಯುದ್ಧವನ್ನು ಕೂಡ ನಿಲ್ಲಿಸುವ ಶಕ್ತಿ ಇರತಕ್ಕದ್ದು. ಈ ಶಕ್ತಿಯ ಬಾಹ್ಯಸ್ವರೂಪವು ಹೇಗಿರಬೇಕೆನ್ನುವುದನ್ನು ಈಗ ಹೇಳಲಾಗುವದಿಲ್ಲ. ಇದರ ಶಕ್ತಿಯನ್ನು ಹೆಚ್ಚು ಶ್ರದ್ಧೆಯಿಂದ ಶೋಧಿಸಲು ನಾವು ಹೆಣಗಾಡಬೇಕೆಂಬುದೆ ಇದರ ಅರ್ಥ.

## ೭ ತಿಳಿಸಿ ಹೇಳುವಿಕೆ

೧ ವಿರೋಧಿಗೆ ತಿಳಿಹೇಳಿ ಸಮಾಧಾನದಿಂದ ಕೆಲಸ ಮಾಡಲೆತ್ನಿಸುವದು ಸತ್ಯಾಗ್ರಹಿಯ ಮೊದಲನೆಯ ಲಕ್ಷಣ, ಸತ್ಯಾಗ್ರಹದ ಮೊದಲನೆಯ ಮೆಟ್ಟಲು.

೨ ಸತ್ಯಾಗ್ರಹಿಯು ವಿರೋಧಿಗೆ ಸರ್ವವಿಧದಿಂದಲೂ ತಿಳಿಹೇಳುವನು. ಹೀಗೆ ತಿಳಿಹೇಳುವ ಒಂದು ರೀತಿಯನ್ನೂ ಅವನು ಉಳಿಸನು. ತಿಳಿಹೇಳುವಾಗ ಅವನು ಧೈರ್ಯವನ್ನೂ ತಾಳ್ಮೆಯನ್ನೂ ಅತ್ಯಂತ ಉದಾರತನವನ್ನೂ ತೋರಿಸುವನು. ಮಿತ್ರರು ಮಧ್ಯಸ್ತಿಕೆ ಮಾಡಲು ಬಂದರೆ ತಿರಸ್ಕರಿಸಲಾರನು. ಸಿದ್ಧಾಂತದ ಭಂಗವಾಗದಂತೆ ಯಾವುದೇ ಪ್ರಕಾರದ ಒಡಂಬಡಿಕೆಗೆ ಅವನು ಸಿದ್ಧನಿರುವನು.

೩ ತಿಳಿಹೇಳುವ ಪ್ರಯತ್ನವು ನಿಷ್ಫಲವಾದರೆ ಮತ್ತು ವಿಶೇಷ ಪ್ರಕಾರದ ಮಾರ್ಗವನ್ನು ಹಿಡಿಯುವ ಪ್ರಸಂಗವು ಬಂದರೆ ಸತ್ಯಾಗ್ರಹಿಯು ಪುನಃ ವಿರೋಧಿಗೆ ಒಂದು ಕೊನೆಯ ಸಂಧಿಯನ್ನು ಕೊಡದೆ ಮುಂದಡಿಯನ್ನಿಡಬಾರದು.

೪ ಮುಂದಡಿಯನ್ನಿಟ್ಟ ಬಳಿಕ ಕೂಡ ಅವನು ಯಾವಾಗಲೂ ಸಂಧಿ-ಗಾಗಿ ಸಿದ್ಧನಿರುವನು. ತನಗೆ ಪೀಡೆಯಾಗುವ ಭೀತಿಯಿದ್ದರೂ ಅವನು ಅದಕ್ಕೆ ಹೆದರದೆ ತನ್ನ ಸಂಧಿ-ಪ್ರೀತಿಯನ್ನೂ, ಕಾರ್ಯವನ್ನು ಪುನಃ ಮೊದಲಿನಿಂದ ಪ್ರಾರಂಭಿಸುವ ಸಿದ್ಧತೆ ತನ್ನಲ್ಲಿದೆ ಎನ್ನುವದನ್ನೂ ತೋರಿಸುವನು. ಕಾರಣವಿಷ್ಟೆ–ಸತ್ಯಾಗ್ರಹಿಯು ಅಸಹಕಾರಿಯಾಗಬಹುದು, ವಿರೋಧಿಯಾಗಬಹುದು, ಕಡುತರವಾದ ಕಾಳಗವನ್ನು ಹೂಡಬಹುದು, ಆದರೆ ತನ್ನ ರೋಮ ರೋಮದಲ್ಲಿದ್ದ ಸಹಕಾರದ ಗೆಳೆತನದ ಮತ್ತು ಸಂಧಿಯ ಇಚ್ಛೆಯನ್ನು ಬಿಟ್ಟುಬಿಡಲಿಕ್ಕಿಲ್ಲ.

೫ ವಿರೋಧಿಯ ಅಂತಃಕರಣದಲ್ಲಿ ಹೃದಯ-ಪಲ್ಲಟದ ಧ್ವನಿಯು ಏಳುವ ವರೆಗೆ, ಒಂದು ಅನ್ಯಾಯವು ದೂರವಾದ ಮಾತ್ರಕ್ಕೆ ವಿರೋಧಿಯ ಹೃದಯವು ಸ್ವಚ್ಛವಾಯಿತೆಂದೂ ಸತ್ಯಾಗ್ರಹದ ಕಾರ್ಯವು ಕೊನೆಗಂಡಿತೆಂದೂ ಹೇಳಲಾಗುವದಿಲ್ಲ.

೬ ಆದ್ದರಿಂದ ಹೃದಯಪಲ್ಲಟವಾಗುವ ಮೊದಲು ಎಷ್ಟೋ ಸಂಧಿಗಳಾಗಬಹುದು, ಅವುಗಳಲ್ಲಿ ಎಷ್ಟೋ ವಿಷಯಗಳನ್ನು ಬಿಟ್ಟುಬಿಡಬೇಕಾಗುವುದು ಮತ್ತು ಎಷ್ಟೋ ಅನ್ಯಾಯಗಳನ್ನು ನುಂಗಿಕೊಳ್ಳಬೇಕಾಗುವುದು.

ಹೀಗೆ ಮಾಡುವಾಗ ಸತ್ಯಾಗ್ರಹಿಯು ಮೂಲ ಮತ್ತು ಮುಖ್ಯವಾದ ಅನ್ಯಾಯದ ಕಡೆಗೆ ದುರ್ಲಕ್ಷ ಮಾಡದೆ, ಅದನ್ನು ಹೋಗಲಾಡಿಸುವುದಕ್ಕಾಗಿ ಮಾಡುವ ಪ್ರಯತ್ನದಲ್ಲಿ ಕೆಲವೊಂದು ಸಣ್ಣಪುಟ್ಟ ಅನ್ಯಾಯಗಳಾದರೆ ಅತ್ತ ಅಷ್ಟೊಂದು ಗಮನಕೊಡದೆ ತನ್ನ ಉದಾರ ಬುದ್ಧಿಯನ್ನು ತೋರಿಸುವನು.

## ೮ ಉಪವಾಸ

೧ ಉಪವಾಸವು ಸತ್ಯಾಗ್ರಹದ ಒಂದು ರೀತಿ ಎಂದು ತಿಳಿದು ಜನರು ಅದನ್ನು ಆಚರಿಸುವಾಗ ಅತಿ ಅವಸರವನ್ನೂ ತಪ್ಪನ್ನೂ ಮಾಡುವುದುಂಟು.

೨ ಉಪವಾಸದ ಅಸ್ತ್ರವನ್ನು ವ್ಯಕ್ತಿಯ ವಿರುದ್ಧ ಹೂಡಿದ ಸತ್ಯಾಗ್ರಹದಲ್ಲಿ ಎಷ್ಟರಮಟ್ಟಿಗೆ ಉಪಯೋಗಿಸಬಹುದೊ ಅಷ್ಟರಮಟ್ಟಿಗೆ ಸಮಾಜದ ವಿರುದ್ಧವಾಗಲಿ ಒಂದು ತಂತ್ರದ ವಿರುದ್ಧವಾಗಲಿ ಉಪಯೋಗಿಸಲಾಗದು.

೩ ವ್ಯಕ್ತಿಯ ವಿರುದ್ಧವಾಗಿ ಕೂಡ ಉಪವಾಸ-ಸತ್ಯಾಗ್ರಹವನ್ನು ಅನಿರ್ವಾಹವಿದ್ದಾಗ ಅಪರೂಪವಾಗಿ ಹೂಡಬೇಕು. ಉಪವಾಸದಿಂದ ವಿರೋಧಿಯ ನ್ಯಾಯವೃತ್ತಿಯು ಅಥವಾ ಧರ್ಮವೃತ್ತಿಯು ಜಾಗ್ರತವಾಗುವುದರ ಬದಲು ಅವನ ಕೃಪಾವೃತ್ತಿಯು ಜಾಗ್ರತವಾಗಬಹುದು. ಪೀಡೆ ಹೋದರೆ ಸಾಕೆಂದು ಸತ್ಯಾಗ್ರಹಿಯ ' ಹಟ ' ವನ್ನು ವಿರೋಧಿಯು ಪೂರ್ತಿಗೊಳಿಸಬಹುದು. ಇಷ್ಟರಿಂದಲೆ, ಸತ್ಯಾಗ್ರಹವು ಸಫಲವಾಯಿತು ಎಂದು ಭಾವಿಸಲಾಗದು.

೪ ಯಾವುದಾದರೂ ವ್ಯಕ್ತಿಯ ವಿರುದ್ಧ ಉಪವಾಸ–ಸತ್ಯಾಗ್ರಹವನ್ನು ಹೂಡಬೇಕಾದರೆ ಆ ವ್ಯಕ್ತಿಯ ಕೂಡ ಮೊದಲು ಗೆಳೆತನದ ಇಲ್ಲವೆ ಒಂದಿಲ್ಲೊಂದು ರೀತಿಯ ನಿಕಟಸಂಬಂಧವಿರಬೇಕು. ಯಾವತರದ ಸಂಬಂಧವೂ ಇರದಿದ್ದರೆ ಉಪವಾಸಮಾರ್ಗವನ್ನು ಹಿಡಿಯುವುದು ಒಳಿತಲ್ಲ.

೫ ಕುಟುಂಬದ ಜನರು, ತನ್ನ ಮಿತ್ರರು, ಗುರುಗಳು, ಶಿಷ್ಯರು ಮುಂತಾದ ಪರಿಚಿತ ಜನಗಳ ವಿರುದ್ಧವಾಗಿಯೆ ಉಪವಾಸ–ಸತ್ಯಾಗ್ರಹವನ್ನು ಹೂಡಬಹುದು. ಇದೇ ರೀತಿಯಾಗಿ ಸಮಾಜದ ಸೇವೆಮಾಡಿ ಸಮಾಜದ ಆದರಕ್ಕೆ ಪಾತ್ರನಾದವನೆ ಆ ಸಮಾಜದೊಳಗಿನ ಅನ್ಯಾಯ ಅತ್ಯಾಚಾರಗಳನ್ನು ದೂರಮಾಡುವುದಕ್ಕಾಗಿ ಉಪವಾಸ – ಸತ್ಯಾಗ್ರಹವನ್ನೂ ಕೈಕೊಳ್ಳಬಹುದು.

೬ ವ್ಯಕ್ತಿಯ ವಿರುದ್ಧ ಹೂಡಿದ ಸತ್ಯಾಗ್ರಹದಲ್ಲಿ ತನ್ನ ಮೇಲೆ ಆಗುವ ಅನ್ಯಾಯಗಳ ಬಗೆಗೆ ಉಪವಾಸವನ್ನು ಎಂದಿಗೂ ಮಾಡಬಾರದು. ಒಬ್ಬ ವ್ಯಕ್ತಿಯು ತನ್ನ ಗೆಳೆಯನಿದ್ದು ಅವನು ಎರಡನೆಯವರೊಡನೆ ಇಲ್ಲವೆ ತನ್ನೊಡನೆ ಕೆಟ್ಟ ರೀತಿಯಿಂದ ವರ್ತಿಸಿದರೆ ಅವನನ್ನು ಹಾದಿಗೆ ತರುವ ಎಲ್ಲ ಉಪಾಯಗಳನ್ನು ಕೈಕೊಂಡರೂ ಅವನ ನಡತೆಯಲ್ಲಿ ಸುಧಾರಣೆಯಾಗದಿದ್ದರೆ ಉಪವಾಸವನ್ನು ಮಾಡಬಹುದು.

೭ ತಂತ್ರದ ವಿರುದ್ಧ ಹೂಡುವ ಸತ್ಯಾಗ್ರಹದಲ್ಲಿ ಉಪವಾಸವು ಕೊನೆಯ ಅಸ್ತ್ರ. ಸತ್ಯಾಗ್ರಹಿಯು ಪರಾಧೀನ ಸ್ಥಿತಿಯಲ್ಲಿದ್ದಾಗ, ಸತ್ಯಾಗ್ರಹದ ಅನ್ಯ ಅಸ್ತ್ರಗಳನ್ನು ಉಪಯೋಗಿಸುವುದು ಅಶಕ್ಯವಾದಾಗ ಹಾಗೂ ತಂತ್ರದಿಂದ ಆಗುವ ಅಧರ್ಮವನ್ನೂ ಅನ್ಯಾಯವನ್ನೂ ಸಹಿಸುತ್ತ ಜೀವಿಸುವುದರಿಂದ ತನ್ನ ಸತ್ವಹಾನಿಯು ಆಗುವದೆಂದು ಎನಿಸಿದಾಗ ಪ್ರಾಣವನ್ನು ಬಿಡುವ ಸಿದ್ಧತೆಯಿಂದಲೆ ಉಪವಾಸವನ್ನು ಪ್ರಾರಂಭಿಸಬೇಕು.

೮ ಇಂತಹ ಸ್ಥಿತಿಯು ಬಂದಿದೆಯೆಂದು ನಿರ್ಣಯಿಸುವಾಗ ಸತ್ಯಾಗ್ರಹಿಯು ತನ್ನ ಭಾವನೆಗಳನ್ನು ಪ್ರಕ್ಷುಬ್ಧಗೊಳಿಸುವುದಿಲ್ಲ. ಆದರೆ ತಂತ್ರವನ್ನು ನಡೆಸುವ ವ್ಯವಸ್ಥಾಪಕರ ತೊಂದರೆಗಳ ಮತ್ತು ಅವರಲ್ಲಿದ್ದ ಹಳೆಯರೂಢಿಗಳ ಬಲಾಬಲದ ಬಗೆಗೆ ಯೋಗ್ಯ ವಿಚಾರವನ್ನು ಮಾಡುವನು ಮತ್ತು ಅವುಗಳಿಗಾಗಿ ಬಿಡಬೇಕಾದ ಕೆಲವೊಂದು ಹಕ್ಕುಗಳನ್ನು ಬಿಡಲು ಸಿದ್ಧನಿರುವನು. ಇದಲ್ಲದೆ ಅನಿವಾರ್ಯ ಅನ್ಯಾಯ, ಆಕಸ್ಮಿಕ ಅನ್ಯಾಯ ಮತ್ತು ತಿಳಿದೂ ತಿಳಿದೂ ಮಾಡಿದ ಅನ್ಯಾಯ ಅಥವಾ ಅನ್ಯಾಯೀ ನಿಯಮಗಳು ಇವೆಲ್ಲ ಭಿನ್ನ ಭಿನ್ನವೆಂದು ತಿಳಿಯುವನು. ಇವುಗಳ ವಿಷಯದಲ್ಲಿ ವಿವೇಕದಿಂದ ನಡೆಯುವನು. ಬಳಿಕ ತನಗಾದ ಅನ್ಯಾಯಗಳನ್ನು ಹೃದಯವನ್ನು ಕಲ್ಲುಮಾಡಿ ಸಹಿಸಿಕೊಳ್ಳುವನು. ಏಕೆಂದರೆ ಮನುಷ್ಯನು ತಿಳಿದೂ ತಿಳಿದೂ ಅನ್ಯಾಯವನ್ನು ಸಹಿಸಿಕೊಂಡರೆ ಅವನ ಸತ್ವಹಾನಿಯಾಗುವದಿಲ್ಲ. ಆದರೆ ದೈನ್ಯದಿಂದ, ಭಯದಿಂದ ಅಥವಾ ಜೀವದ ಮೋಹದಿಂದ ಅನ್ಯಾಯವನ್ನು ಸಹಿಸಿಕೊಂಡರೆ ಸತ್ವಹಾನಿಯಾಗುವದು.

೯ ಇತ್ತ ಉಪವಾಸರೂಪದ ಸತ್ಯಾಗ್ರಹ ಹೂಡಿ ಅತ್ತ ವಿರೋಧಿಪಕ್ಷದ ವರಿಷ್ಠರ ಮುಖಾಂತರ ಆ ಆ ಅನ್ಯಾಯವು ದೂರವಾಗುವಂತೆ ಒತ್ತಾಯ ತರಲು ಯತ್ನಿಸುವದು ಯೋಗ್ಯವಾಗಲಾರದು. ಇಂಥ ಉಪವಾಸಕ್ಕೆ ಸತ್ಯಾಗ್ರಹವೆಂಬ ಹೆಸರು ಶೋಭಿಸದು.

೧೦ ತಾನು ಅಥವಾ ಮಿತ್ರರು ಅಥವಾ ಸಂಗಡಿಗರು ಮಾಡಿದ ದೋಷಗಳಿಗಾಗಿ ತಪ್ಪುಗಳ ಪ್ರಾಶ್ಚಿತ್ತಕ್ಕಾಗಿಯೂ ಗೆಳೆಯರನ್ನು ಇಲ್ಲವೆ ಸಂಗಡಿಗರನ್ನು ಸನ್ಮಾರ್ಗಕ್ಕೆ ತರುವುದಕ್ಕಾಗಿಯೂ ಅವರು ಶುದ್ಧ-ದೃಢ ಪ್ರತಿಜ್ಞೆಗೆ ಅಂಟಿಕೊಂಡಿರುವಂತೆ ಮಾಡುವುದಕ್ಕಾಗಿಯೂ ಉಪವಾಸ ಕೈಕೊಂಡರೆ ಅದು ಈ ಪ್ರಕರಣದಲ್ಲಿ ಸತ್ಯಾಗ್ರಹವೆನಿಸುವುದಿಲ್ಲ; ತಪಶ್ಚರ್ಯವೆನಿಸುವುದು. ಜೀವನದಲ್ಲಿ ವಿವೇಕಪೂರ್ಣವಾದ ಇಂತಹ ತಪಶ್ಚರ್ಯಕ್ಕೂ ಸ್ಥಾನವುಂಟು. ಆದರೆ ಇಲ್ಲಿ ಅದರ ಚರ್ಚೆಯು ಅಪ್ರಸ್ತುತ.

## ೯ ಅಸಹಕಾರ

೧ ಎರಡು ಪಕ್ಷಗಳು ಮೊದಲಿನಿಂದಲೂ ಸಹಕಾರದಿಂದ ನಡೆಯುತ್ತ ಬಂದಿದ್ದು ನಡುವೆ ಅವರವರಲ್ಲಿ ಸಹಕಾರವು ನಿಂತ ಪಕ್ಷದಲ್ಲಿ ಮತ್ತು ಒಂದು ಪಕ್ಷದ ವ್ಯವಹಾರವು ಎರಡನೆ ಪಕ್ಷದ ಸಹಕಾರದ ಹೊರತು ನಡೆಯದೆ ಇರುವ ಪರಿಸ್ಥಿತಿ ಇದ್ದಲ್ಲಿ ಅಸಹಕಾರ ಸತ್ಯಾಗ್ರಹವನ್ನು ಹೂಡಬಹುದು.

೨ ಅಸಹಕಾರಿಯ ಸಹಾಯವಿಲ್ಲದೆ ಎರಡನೆ ಪಕ್ಷದ ಕಾರ್ಯವು ನಡೆಯುತ್ತಿದ್ದಲ್ಲಿ ಎರಡನೆ ಪಕ್ಷದ ತ್ಯಾಗವು ಮತ್ತು ತನ್ಮೂಲಕ ತನ್ನ ಸ್ವಂತ ಆತ್ಮಶುದ್ಧಿಯು ಕೂಡ ಅಸಹಕಾರವೆನಿಸುವದು. ಇದಕ್ಕೂ ಸತ್ಯಾಗ್ರಹದಲ್ಲಿ ಸ್ಥಾನವುಂಟು. ಉದಾಹರಣೆಗೆ:-ಒಬ್ಬ ಅಧರ್ಮದಿಂದ ನಡೆಯುವಂತಹ ಸೆಟ್ಟಿಗೆ ಅನೇಕ ಆಳುಗಳು ದೊರೆಯಬಹುದು. ಆದರೆ ಅವನ ಅಧರ್ಮದಲ್ಲಿ ಸೇರಲು ಇಷ್ಟಪಡದ ಆಳು ಕೆಲಸಕ್ಕೆ ರಾಜೀನಾಮೆ ಕೊಡುವನು. ಎರಡನೆಯವರು ಹೆಂಡ ಮಾರಲು ಸಿದ್ಧರಾಗಿ ಕುಳಿತಿದ್ದರೂ ಒಬ್ಬ ಹೆಂಡಗಾರನು ಈ ಉದ್ಯೋಗನನ್ನು ಬಿಟ್ಟು ಬಿಡುವನು. ಇಂಥ ಸಂದರ್ಭಗಳಲ್ಲಿ ಈ ಸೂತ್ರದಲ್ಲಿ ಹೇಳಿದಂತಹ ಅಸಹಕಾರವಾಗುವುದು. ಹೀಗೆ ಅಧರ್ಮದಿಂದ ನಡೆದಿರುವ ಕುಟುಂಬಿಗಳನ್ನೂ ಮಿತ್ರರನ್ನೂ ಇನ್ನುಳಿದವರನ್ನೂ ಬಿಟ್ಟು ಹೋಗುವುದು ಕೂಡ ಸತ್ಯಾಗ್ರಹವೆನಿಸುವುದು.

೩ ತನ್ನ ನೆರವಿಲ್ಲದೆ ಎರಡನೆ ಪಕ್ಷದ ವ್ಯವಹಾರವು ನಡೆಯುವುದು ಅಶಕ್ಯವಿರುವ ಕಡೆಯಲ್ಲಿ ಅಸಹಕಾರವು ಹೆಚ್ಚು ಉಗ್ರವಾದ ಸತ್ಯಾಗ್ರಹವಾಗುವುದು. ಆದ್ದರಿಂದ ಇದನ್ನು ಆರಂಭಿಸುವುದಕ್ಕಿಂತ ಮೊದಲು ಸತ್ಯಾಗ್ರಹಿಗೆ ತನ್ನ ಮಾರ್ಗವು ಧರ್ಮಯುಕ್ತವಾದದ್ದೆಂದು ಸ್ಪಷ್ಟವಾಗಿ ತೋರಬೇಕು. ಇಲ್ಲಿ ಸತ್ಯಾಗ್ರಹಿಯು ತನ್ನ ಹೊರತು ಎರಡನೆಯ ಪಕ್ಷದ ವ್ಯವಹಾರವು

ನಡೆಯುವುದಿಲ್ಲವೆಂಬುದನ್ನು ಎಂದೂ ಮರೆಯುವುದಿಲ್ಲ ಮತ್ತು ವಸ್ತು ಸ್ಥಿತಿಯು ಹೀಗಿರುವುದರಲ್ಲಿಯೆ ಅವನ ಬಲವಿರುವುದು. ಇದರಿಂದ ವಿರೋಧಿ ಪಕ್ಷವನ್ನು ಪೀಡಿಸಲೂ ಬರುವ ಸಂದರ್ಭವೂ ಇದೆ.

೪ ಎರಡನೆ ಪಕ್ಷವು ತನ್ನ ಸಹಕಾರದ ದುರುಪಯೋಗ ಮಾಡಿಕೊಳ್ಳುತ್ತಿರುವುದೆಂದೂ ಇದರಿಂದ ನಿರ್ದೋಷಿಗಳಿಗೆ ಕಷ್ಟವಾಗುತ್ತಿರುವುದೆಂದೂ ಗೊತ್ತಾದಾದ ಇಂತಹ ಅಸಹಕಾರವನ್ನು ಹೂಡುವುದು ಯೋಗ್ಯವೂ ಆವಶ್ಯಕವೂ ಆಗುವದು.

೫ ಈ ಅಸಹಕಾರದಲ್ಲಿ ವಿರೋಧಿಯು ಯಾವ ಕಾರ್ಯಗಳು ತನ್ನ ಪ್ರತ್ಯಕ್ಷ ಸಹಾಯದ ಹೊರತು ನಡೆಯುವುದಿಲ್ಲವೊ ಅಂತಹ ಎಲ್ಲ ಕಾರ್ಯಗಳಿಗೂ ತನ್ನ ನೆರವನ್ನು ನಿಲ್ಲಿಸಿಬಿಡಬೇಕಾಗುವುದು. ತನ್ನ ಪ್ರತ್ಯಕ್ಷ ಸಹಾಯವಿಲ್ಲದಿದ್ದರೂ ಅಪ್ರತ್ಯಕ್ಷ ಸಹಾಯದಿಂದ ವಿರೋಧಿಯ ಕಾರ್ಯವು ಸರಿಯಾಗಿ ನಡೆಯುತ್ತಿದ್ದರೆ, ವಿರೋಧಿಯ ಪ್ರತಿಷ್ಠೆಯು ಬೆಳೆಯುವದಕ್ಕೆ ಅನುಕೂಲವಾದಂಥ ಸಹಾಯವು ಅವನಿಗೆ ಅಪ್ರತ್ಯಕ್ಷವಾಗಿ ಸಿಗುತ್ತಿದ್ದರೆ ಅದನ್ನೂ ನಿಲ್ಲಿಸಬೇಕು. ಹೀಗೆ ಮಾಡುವಾಗ ಸತ್ಯಾಗ್ರಹಿಯು ತನ್ನ ಲಾಭದ ಕಡೆಗೆ ಗಮನ ಕೊಡಲಾರನು.

೬ ಸತ್ಯಾಗ್ರಹೀ ಪಕ್ಷದ ಸಹಾಯವಿಲ್ಲದೆ ತನ್ನ ತಂತ್ರವನ್ನು ನಡೆಸಲಾಗುವುದಿಲ್ಲವೆಂಬ ಅನುಭವವನ್ನು ವಿರೋಧಿಗೆ ಮಾಡಿಸುವುದೆ ಅಸಹಕಾರದ ಗುರಿ. ಆದ್ದರಿಂದ ಸತ್ಯ-ಅಹಿಂಸಾದಿ ಮಾರ್ಗಗಳಿಂದ ತಂತ್ರವನ್ನು ತಡೆದು ನಿಲ್ಲಿಸುವ ವರೆಗೆ ಅಸಹಕಾರವನ್ನು ಹೂಡಬಹುದು.

೭ ಈ ಅಸಹಕಾರವನ್ನು ಯಾವ ರೀತಿಯಿಂದ ಮತ್ತು ಎಷ್ಟು ಭರದಿಂದ ಪ್ರಾರಂಭಿಸಬೇಕೆನ್ನುವುದು ಅನುಭವದಿಂದ ಗೊತ್ತಾಗುವದು. ಆದರೆ ಅಸಹಕಾರದ ದಾರಿ ಹಿಡಿಯುವವನಿಗೆ ವಿರೋಧಿಯ ಕೃತ್ಯಗಳು ಅಥವಾ ತಂತ್ರವು ಅತ್ಯಂತ ದುಷ್ಟವಾಗಿದೆ, ಅದರ ಸ್ಥಾನದಲ್ಲಿ ಇನ್ನೊಂದು ಒಳ್ಳೆಯ ತಂತ್ರವನ್ನು ಬೇಗನೆ ಅನುಸರಿಸದಿದ್ದರೂ ಅದು ನಷ್ಟವಾಗಿ ಹೋಗುವುದು ಒಳಿತು ಎಂದು ಎನಿಸಬೇಕು.

೮ ಅಸಹಕಾರದ ದುರುಪಯೋಗವಾಗುವ ಸಂದರ್ಭವೂ ಇರುವುದು. ಆದ್ದರಿಂದ ಸತ್ಯಾಗ್ರಹಿ ಅಸಹಕಾರ ಮತ್ತು ಅಸತ್ಯಾಗ್ರಹಿ ಅಸಹಕಾರ ಎಂದು ಭೇದ ಮಾಡಬೇಕಾಗುವುದು. ಸತ್ಯಾಗ್ರಹದಲ್ಲಿ ಕಷ್ಟವನ್ನು ಸಹಿಸಲೆಬೇಕಾಗುವುದು. ಅಸಹಕಾರಿಗೆ ಯಾವ ತರದ ಕಷ್ಟವನ್ನಿ ಸಹಿಸು

ವಂಥ ಸಂದರ್ಭವು ಬರದಿದ್ದರೆ ಅದು ಅಸತ್ಯಾಗ್ರಹಿ ಅಸಹಕಾರವಿರಬಹುದು ಎಂದು ತಿಳಿಯಬೇಕು.

## ೧೦ ಸವಿನಯ ಕಾಯಿದೆಭಂಗ

೧ ಸವಿನಯ ಕಾಯಿದೆಭಂಗವು ಎರಡು ಮಾದರಿಯದಿರಬಹುದು– ಒಂದು ಅತ್ಯಂತ ಅನ್ಯಾಯದ ಹುಕುಮನ್ನು ಅಥವಾ ಕಾಯಿದೆಯನ್ನು ಮಾತ್ರ ಸದೆಬಡೆಯುವುದಕ್ಕಾಗಿ ಮಾಡಿದ್ದು. ಇನ್ನೊಂದು, ಅಸಹಕಾರ ವನ್ನೆ ಮುಂದರಿಸುವ ಹೆಜ್ಜೆ ಎಂದು, ನಿರ್ದೋಷ ಹಾಗೂ ತಟಸ್ಥರಿದ್ದ ಪ್ರಜ ರಿಗೆ ಅನಾನುಕೂಲವಾಗದಂತೆ, ಯಾವುದೆ ಅನ್ಯಾಯಕ್ಕೆ ಅಥವಾ ಅಧರ್ಮಕ್ಕೆ ಶರಣುಹೋಗದೆ ಮುರಿಯಲು ಬರುವಂಥ ಎಲ್ಲ ಕಾಯಿದೆಗಳನ್ನು ಮುರಿ ಯುವುದು.

೨ ಮನುಷ್ಯನು ಕಳವು ಮಾಡದಿರುವುದು ಕದಿಯಬಾರದೆಂದು ಕಾಯಿದೆ ಇರುವದೆಂದಲ್ಲ, ಕದಿಯುವದು ಅಧರ್ಮವಾದ್ದರಿಂದ. ಆದ್ದರಿಂದ ಕಾಯಿದೆಭಂಗದಲ್ಲಿ ಇಂತಹ ಕಾಯಿದೆಗಳನ್ನು ಮುರಿಯಲಾಗದು.

೩ ಬಂಡಿಗಳನ್ನು ದಾರಿಯ ಎಡಬದಿಗುಂಟ ಹೊಡೆಯಬೇಕು, ಜನರು ಹೋಗಿಬರುವುದಕ್ಕಾಗಿ ಅನುಕೂಲತೆಗಳನ್ನು ಒದಗಿಸಿಕೊಡುವಂಥ ಮಾರ್ಗದ ಮೇಲೆ ನಿಂತ ಪೋಲೀಸಿನವನ ಅಪ್ಪಣೆಯನ್ನು ಪಾಲಿಸಬೇಕು, ಮಧ್ಯ ರಾತ್ರಿಯಲ್ಲಿ ಸದ್ದುಗದ್ದಲ ಮಾಡಕೂಡದು, ಮಹತ್ವದ ಕಾರಣವಿಲ್ಲದೆ ಉಗೆಬಂಡಿಯ ಸರಪಳಿ ಎಳೆಯಬಾರದು ಇವೇ ಮುಂತಾದ ಕಾಯಿದೆ ಗಳನ್ನು ಮುರಿಯಬಾರದು. ಏಕೆಂದರೆ, ಇದರಿಂದ ತಟಸ್ಥ ಮತ್ತು ನಿರ್ದೋಷಿಯಾದ ಪ್ರಜೆಗೆ ಕಷ್ಟವಾಗುವುದು. ಆದ್ದರಿಂದ ಇಂತಹ ಕಾಯಿದೆ ಗಳನ್ನು ಸವಿನಯ ಕಾಯಿದೆಭಂಗದ ಮೂಲಕ ಮುರಿಯಲಾಗದು.

೪ ಜನರು ಯಾವುದೊಂದು ರಾಜ್ಯದ ಬಗೆಗೆ ಇದ್ದ ತಮ್ಮ ಅಸಂತೋಷ ವನ್ನು ಈ ಕೆಳಗಿನ ಎರಡು ಕಾರಣಗಳಿಂದ ವ್ಯಕ್ತಮಾಡುತ್ತಿರಲಿಕ್ಕಿಲ್ಲ. (೧) ಆ ರಾಜ್ಯದ ಬಗೆಗೆ ಅವರಲ್ಲಿ ಸಂತೋಷವಿರಬಹುದು, ಮತ್ತು ಭಕ್ತಿ ಇರಬಹುದು. (೨) ಕಾಯಿದೆಗಳಿಗೆ ಅಂಜಿ ಅವರು ಅಸಂತೋಷವನ್ನು ವ್ಯಕ್ತಮಾಡುತ್ತಿರಲಿಕ್ಕಿಲ್ಲ. ಅದರೆ ಸತ್ಯಾಗ್ರಹಿಯು ರಾಜ್ಯದ ಬಗೆಗೆ ಇರುವ ತನ್ನ ಅಸಂತೋಷವನ್ನು ವ್ಯಕ್ತಮಾಡುವಾಗ ಕಾಯಿದೆಗಳಿಗೆ ಎಂದಿಗೂ ಹೆದರುವುದಿಲ್ಲ. ಸವಿನಯ ಕಾಯಿದೆಭಂಗದ ಪ್ರಸಂಗವು ಬಂದರೆ ಅನ್ಯಾ

ಯದ ಕಾಯಿದೆಗಳನ್ನು ಮುರಿಯುವದು ಸಹ ಅವನ ಕರ್ತವ್ಯವಾಗುವದು.

೫ ಇದೇ ಪ್ರಕಾರವಾಗಿ, ತನ್ನ ದೇಶದ ಯಾವುದೇ ಭಾಗಕ್ಕೆ ಹೋಗಲು, ಅಲ್ಲಿ ವಾಸಮಾಡಲು, ಅದರಂತೆ ಶಾಂತಿಯುಕ್ತವಾದ ಚಟು ವಟಿಕೆಗಳನ್ನು ಮಾಡಲು, ಸಭೆ ಜಾತ್ರೆಗಳನ್ನು ಜರುಗಿಸಲು, ಪ್ರಜಾಸೇವೆ ಯನ್ನು ಮಾಡಲು, ಅಯೋಗ್ಯ ಚಟಗಳ ವಿರುದ್ಧ ಪಿಕೆಟಿಂಗ್ ಮಾಡಲು ಪ್ರತಿಯೊಬ್ಬನಿಗೂ ಅಧಿಕಾರವುಂಟು. ಇದಕ್ಕೆ ವಿರುದ್ಧವಾಗಿ ಸರಕಾರವು ಪ್ರತಿಬಂಧದ ಹುಕುಮನ್ನು ಹೊರಡಿಸಿದರೆ ಅದನ್ನು ಈ ಕೆಳಗಿನ ಕಾರಣ ಗಳಿಂದ ಸತ್ಯಾಗ್ರಹಿಯು ಮುರಿಯುವುದಿಲ್ಲ.

(ಅ) ಸರಕಾರವು ತೋರಿಸುವ ಪ್ರತಿಬಂಧದ ಕಾರಣಗಳು ಯೋಗ್ಯ ವೆನಿಸಬೇಕು

(ಆ) ಇಂಥ ಹುಕುಮುಗಳನ್ನು ಮುರಿಯಲು ಹೊರಟಾಗ ಸರಕಾರದ ಮತ್ತು ಪ್ರಜರ ನಡುವೆ ಇರುವ ಮುಖ್ಯ ತಕರಾರಿನ ಮೂಲ ಸಂಗತಿಯು ಒಂದು ಕಡೆ ಉಳಿದು ಅಪ್ರಸ್ತುತ ಸಂಗತಿಗಳಿಗೆ ಮಹತ್ವವು ಬರುವದುಂಟು. ಪ್ರಜರ ಧ್ಯಾನವು ಮೂಲ ಮಾತಿನ ಕಡೆಗೆ ಹೋಗುವುದರ ಬದಲು ಮಹ ತ್ವವಿಲ್ಲದ ಚಿಕ್ಕ ಪುಟ್ಟ ಸಂಗತಿಗಳ ಕಡೆಗೆ ಹೋಗುವುದುಂಟು. ಇಂಥ ಕಾರಣಗಳು ಇಲ್ಲದಿದ್ದರೆ ಮಾತ್ರ ಇಂಥ ಹುಕುಮುಗಳನ್ನು ಸವಿನಯದಿಂದ ಮುರಿಯಬಹುದು.

೬ ಇದೇ ರೀತಿ ರಾಜ್ಯವು ಇರುವದು ಒಳಿತಾದುದು ಎಂದು ತಿಳಿದೇ ಸತ್ಯಾಗ್ರಹಿಯು ರಾಜ್ಯಕ್ಕೆ ಕರವನ್ನು ಕೊಡುವನು. ಈ ರಾಜ್ಯವನ್ನು ನಾಶ ಮಾಡುವುದೆ ತನ್ನ ಧರ್ಮವೆಂದು ಯಾವಾಗ ಅವನಿಗೆ ಮನದಟ್ಟಾಗುವುದೊ ಆಗ ಅವನು ಕರನಿರಾಕರಣೆಯನ್ನು ಮಾಡುವನು. ರಾಜ್ಯದಿಂದ ದೊರೆ ಯುವ ಎಲ್ಲ ಲಾಭಗಳನ್ನು ಪ್ರಯತ್ನಪೂರ್ವಕವಾಗಿ ತ್ಯಜಿಸುವನು.

೭ ಪ್ರಜಾಸತ್ತಾತ್ಮಕ ರಾಜ್ಯವು ನಡೆಯುತ್ತಿರುವಲ್ಲಿ, ಅಥವಾ ಸರಕಾರ ಮತ್ತು ಪ್ರಜರಲ್ಲಿ ಸಹಕಾರವಿರುವಲ್ಲಿ, ಅಥವಾ ಅವರ ನಡುವೆ ಕಡುತರವಾದ ಕಾಳಗ ನಡೆಯದೆ ಇದ್ದಲ್ಲಿ ಅಧಿಕಾರಿಗಳು ತಪ್ಪು ತಿಳಿವಳಿಕೆಯಿಂದ ಇಲ್ಲವೆ ಅಧಿಕಾರ ಮದದಿಂದ ಅನ್ಯಾಯದ ಹುಕುಮುಗಳನ್ನು ಹೊರಡಿಸುವುದುಂಟು. ಇಂಥ ಹುಕುಮುಗಳನ್ನು ಮುರಿದೇಬಿಡಬೇಕೆಂಬುದು ಯೋಗ್ಯವಾದುದಲ್ಲ. ಇಂಥ ಚಿಲ್ಲರೆ ಅನ್ಯಾಯಗಳನ್ನು ಸಹಿಸುವುದರಿಂದ ಹಾನಿಯಾಗುವದೆಂದು ತಿಳಿಯಲಾಗದು. ಇಂತಹ ಪ್ರಸಂಗಗಳಲ್ಲಿ ಪ್ರಜರು ಮತ್ತು ಮುಂದಾಳು

ಗಳು ತೋರಿಸುವ ಧೈರ್ಯವೂ ಉದಾರತನವೂ ಬೋಧಪ್ರದವಾಗಿರುವುದು. ಯಾವನು ಭಯದಿಂದ ಅನ್ಯಾಯದ ಹುಕುಮುಗಳನ್ನು ಸಹಸಮಾಡುವುದರ ಬದಲು ತಿಳಿದೂ ತಿಳಿದೂ ಅವುಗಳಿಂದಾಗುವ ದುಃಖವನ್ನು ಸಹಿಸಿ ಅವನ್ನು ಪಾಲಿಸುವನೋ ಅವನೇ ಸಮಯ ಬಂದಾಗ ಸವಿನಯ ಕಾಯಿದೆ ಭಂಗವನ್ನು ಚನ್ನಾಗಿ ಮಾಡಬಲ್ಲನು.

೮ ವಿರೋಧಿಯ ಮತ್ತು ತಟಸ್ಥ ಜನರ ವಿತ್ತ ಜೀವಿತಗಳಿಗೆ ಸವಿನಯ ಕಾಯಿದೆಭಂಗದಿಂದ ದುಃಖವೂ ಹಾನಿಯೂ ಆಗುತ್ತಿರುವವೆಂದು ಎನಿಸಿದ ಕೂಡಲೆ ಸತ್ಯಾಗ್ರಹಿಯು ಹಾಗಾಗದಂತೆ ಮಾಡಲು ಯತ್ನಿಸುವನು. ಈ ತನ್ನ ಪ್ರಯತ್ನವು ಸಫಲವಾಗುವುದಿಲ್ಲವೆಂದು ತೋರಿದ ಕೂಡಲೆ ಸವಿನಯ ಕಾಯದೆಭಂಗವನ್ನೇ ನಿಲ್ಲಿಸಿಬಿಡುವನು. ಇಂತಹ ಹಾನಿಯನ್ನೂ ದುಃಖವನ್ನೂ ನಿಲ್ಲಿಸುವುದಕ್ಕಾಗಿ ಸತ್ಯಾಗ್ರಹಿಯು ತನ್ನ ಸರ್ವ ಶಕ್ತಿಯನ್ನೂ ವೆಚ್ಚ ಮಾಡುವನು.

## ೧೧ ನ್ಯಾಯಾಸ್ಥಾನದಲ್ಲಿ ಸತ್ಯಾಗ್ರಹಿಯ ನಡತೆ

೧ ಸವಿನಯ ಕಾಯಿದೆಭಂಗದ ಸಂಕಲ್ಪಮಾಡುವವನು ಕಾಯಿದೆ ಭಂಗದಿಂದ ಆಗುವ ಪೂರ್ಣ ಶಿಕ್ಷೆಯನ್ನು ಅನುಭವಿಸಲು ಸಿದ್ಧನೆ ಇರುವನು.

೨ ಇಂಥ ಒಂದು ಕಾಯಿದೆಯನ್ನು ಸತ್ಯಾಗ್ರಹಿಯು ಮುರಿದಿರುವನೆಂದು ಆರೋಪಿಸಿ ಅಧಿಕಾರಿಯು ಅವನನ್ನು ಬಂಧಿಸಲು ಬಂದರೆ ಹಿಂದುಮುಂದು ನೋಡದೆ ಅವನು ಆ ಅಧಿಕಾರಿಯ ವಶಕ್ಕೆ ಹೋಗಬೇಕು.

೩ ಸತ್ಯಾಗ್ರಹಿಯು ವಾಸ್ತವಿಕವಾಗಿ ಕಾಯಿದೆಗಳನ್ನು ಮುರಿಯದಿದ್ದರೂ ಪೋಲೀಸರು ಅವನ ವಿರುದ್ಧ ಸುಳ್ಳು ಪ್ರಮಾಣಗಳನ್ನು ಹುಟ್ಟಿಸಿ ಕಾಯಿದೆಭಂಗ ಮಾಡಿರುವನೆಂದು ತೋರಿಸಬಹುದು. ಹೀಗಿದ್ದಲ್ಲಿ ನ್ಯಾಯಾಸ್ಥಾನದ ಕಾರ್ಯದಲ್ಲಿ ಸತ್ಯಾಗ್ರಹಿಯು ಯಾವ ತರದ ಭಾಗವನ್ನು ತೆಗೆದುಕೊಳ್ಳುವದಿಲ್ಲ, ತನ್ನ ರಕ್ಷಣೆಯನ್ನೂ ಮಾಡಿಕೊಳ್ಳುವುದಿಲ್ಲ. ಅವನಿಗೆ ಕಾಯಿದೆಗಳನ್ನು ಮುರಿಯುವ ವಿಚಾರವು ಇದ್ದೇ ಇದ್ದುದರಿಂದ ಅವುಗಳನ್ನು ಅವನು ಮುರಿದಿರದಿದ್ದರೂ ಅವನಿಗೆ ಶಿಕ್ಷೆಯಾಗುತ್ತಿದ್ದರೆ ಅದನ್ನು ಹೊಂದುವದು ಯೋಗ್ಯವಾದುದೇ ಸರಿ.

೪ ತಾನು ಸ್ವತಃ ಕಾಯಿದೆಗಳನ್ನು ಮುರಿದಿದ್ದರೆ ತನ್ನ ಅಪರಾಧವನ್ನು ಒಪ್ಪಿಕೊಂಡು ತನಗೆ ಶಿಕ್ಷೆಯನ್ನು ವಿಧಿಸಲು ಸತ್ಯಾಗ್ರಹಿಯು

ನ್ಯಾಯಾಧೀಶನಿಗೆ ಹೇಳಬೇಕು.

೫ 'ರಕ್ಷಣೆ' ಮಾಡಿಕೊಳ್ಳದೆ ಇರುವ ವಿಷಯಗಳಲ್ಲಿ ಕೆಳಗಿನವು ಅಪ-ವಾದಗಳಾಗಿರುವವು—

(ಅ) ಸತ್ಯಾಗ್ರಹಿಗೆ ಸತ್ಯಾಗ್ರಹದ ಸಿದ್ಧಾಂತಕ್ಕೆ ವಿರುದ್ಧವಿರುವ ಅಪರಾಧಗಳನ್ನು ಮಾಡುವ ವಿಚಾರವಿಲ್ಲದಿದ್ದರೂ ಅವನ ಮೇಲೆ ಅಂಥ ಅಪರಾಧದ ಆರೋಪ ಹೊರಿಸಿದರೆ ಆಗ ಅವನು ಸತ್ಯಕ್ಕೋಸ್ಕರ ತನ್ನ ರಕ್ಷಣೆ ಮಾಡಿಕೊಳ್ಳಬೇಕು. ಉದಾಹರಣೆಗೆ ಕೊಲೆಯ ಆರೋಪವನ್ನು ಹೊರಿಸಿದಾಗ.

(ಆ) ಸತ್ಯಾಗ್ರಹಿಗಳ ಅಥವಾ ಅಧಿಕಾರಿಗಳ ನೀತಿ ನಡತೆಯ ವಿಷಯವು ಉತ್ಪನ್ನವಾಗಿ ಅದರಲ್ಲಿ ಸತ್ಯಾಂಶವು ಹೊರಬೀಳುವುದು ಅತ್ಯಂತ ಅವಶ್ಯವೆಂದು ಕಂಡು ಬಂದರೆ ಸತ್ಯಾಗ್ರಹಿಯು ತನ್ನ ರಕ್ಷಣೆಮಾಡಿಕೊಳ್ಳಬೇಕು. ಉದಾಹರಣೆಗೆ ಪೋಲೀಸರು ಅತ್ಯಾಚಾರ ಮಾಡಿರುವರೆಂಬುದನ್ನು ಚನ್ನಾಗಿ ಅರಿತುಕೊಂಡು ಅದನ್ನು ಪತ್ರಿಕೆಗಳಲ್ಲಿ ಪ್ರಕಟಿಸಿದ ಮೇಲೆ ಅದು ಸುಳ್ಳೆಂದು ಪ್ರತಿಪಾದಿಸಿ ಸುಳ್ಳು ಸುದ್ದಿ ಪ್ರಕಟಿಸಿದ್ದಕ್ಕಾಗಿ ಸತ್ಯಾಗ್ರಹಿಯನ್ನು ಕಟ್ಟಳೆಗೆ ಗುರಿಮಾಡಿದಾಗ: ಸತ್ಯಾಗ್ರಹಿಯು ಬಡೆದಾಟಕ್ಕೆ ಅಥವಾ ರಕ್ತಪಾತಕ್ಕೆ ಉತ್ತೇಜನ ಕೊಡುವನೆಂದು ಆರೋಪ ಹೊರಿಸಿದಾಗ.

(ಇ) ಅಧಿಕಾರಿಗಳು ಅತಿ ಉತ್ಸಾಹದಿಂದಲೂ ತಪ್ಪುಗ್ರಹಿಕೆಯಿಂದಲೂ ಒಮ್ಮೊಮ್ಮೆ ಅನ್ಯಾಯದ ಹುಕುಮುಗಳನ್ನು ಹೊರಡಿಸುವರು. ಅಂಥ ಹುಕುಮುಗಳನ್ನು ಹೊರಡಿಸುವದು ಸರಕಾರಕ್ಕೆ ಬೇಕಾಗಿರಲಿಲ್ಲವೆಂಬುದಕ್ಕೆ ಪ್ರಬಲವಾದ ಕಾರಣಗಳು ದೊರೆತು ಆ ಹುಕುಮುಗಳಿಗೆ ಕಾಯಿದೆಗಳ ಬೆಂಬಲ ತಕ್ಕಷ್ಟು ಇಲ್ಲ ಎಂದು ತಿಳಿದುಕೊಳ್ಳಲು ಬರುವಂತಿದ್ದರೆ, ಮತ್ತು ಆ ಹುಕುಮುಗಳನ್ನು ಮುರಿಯುವ ವಿಚಾರವಿಲ್ಲದಂಥ ಪ್ರಜೆಗೆ ಅವುಗಳಿಂದ ಅತ್ಯಂತ ಕಷ್ಟವಾಗುವದೆಂದು ಎನಿಸಿದರೆ ಸತ್ಯಾಗ್ರಹಿಯು ತನ್ನ ರಕ್ಷಣೆ ಮಾಡಿಕೊಳ್ಳುವ ಅವಶ್ಯಕತೆ ಉಂಟಾಗುವುದು.

೬ ಸತ್ಯಾಗ್ರಹಿಯು ನ್ಯಾಯಾಲಯದ ಕಾರ್ಯದಲ್ಲಿ ಭಾಗವನ್ನು ವಹಿಸುವುದಿಲ್ಲ. ಹೀಗೆಂದರೆ ಸತ್ಯಾಗ್ರಹಿಯು ನ್ಯಾಯಾಲಯದಲ್ಲಿ ಉದ್ಧಟತನದಿಂದಲೂ ಅವಿನಯದಿಂದಲೂ ವರ್ತಿಸಬೇಕೆಂದಲ್ಲ ಅಥವಾ ಸುಳ್ಳು ಹೇಳಬೇಕೆಂದೂ ಅಲ್ಲ. ಆದ್ದರಿಂದ ಸತ್ಯಾಗ್ರಹಿಯು ಯಾವ ಅಧಿಕಾರಿಗೂ ಅಪಮಾನ ಕುಚೇಷ್ಟೆಯನ್ನು ಮಾಡಬಾರದು, ಒರಟು ಉತ್ತರಗಳನ್ನು ಕೊಡಬಾರದು. ಅವನು ತನ್ನ ಹೆಸರನ್ನು ಗುಪ್ತವಾಗಿಡಬಾರದು. ತನ್ನ ವಿಚಾ

ರಣೆಗೆ ಸಂಬಂಧಪಡದ ಅಥವಾ ಅನ್ಯ ಆರೋಪಿಗಳಿಗೆ ಮತ್ತು ಮನುಷ್ಯರಿಗೆ ಕುರಿತ ವಿಷಯಗಳ ಬಗೆಗೆ ಅಧಿಕಾರಿಗಳು ವಿಚಾರಿಸಿದರೆ ಅವುಗಳಿಗೆ ಉತ್ತರವನ್ನೀಯಲು ಸತ್ಯಾಗ್ರಹಿಯು ಬದ್ಧನಲ್ಲ. ಆದ್ದರಿಂದ ಇಂಥ ಪ್ರಶ್ನೆಗಳಿಗೆ ಉತ್ತರ ಕೊಡಲಾರೆನೆಂದು ಅವನು ವಿನಯದಿಂದ ಹೇಳಬೇಕು.

೭ ಸತ್ಯಾಗ್ರಹಿಯು ಪೋಲೀಸರ ವಶದಲ್ಲಿರುವಾಗ ಅವನ ಸ್ನಾನ ಊಟ ಮತ್ತು ಬಟ್ಟೆಗಳನ್ನು ಒಗೆಯುವ ಅನುಕೂಲತೆಯನ್ನು ಮಾಡಿಕೊಡುವುದು, ಅವನನ್ನು ಕಾಣಲು ಬಂದ ಮಿತ್ರರನ್ನೂ ಸಲಹೆಗಾರರನ್ನೂ ಭೆಟ್ಟಿ ಮಾಡಿಸುವುದು, ಮತ್ತು ಅವನೊಡನೆ ಸಭ್ಯತನದಿಂದ ನಡೆಯುವುದು ಪೋಲೀಸರ ಕರ್ತವ್ಯ. ಇದೇ ರೀತಿಯಾಗಿ ಪೋಲೀಸರೊಡನೆ ವಿನಯದಿಂದ ವರ್ತಿಸುವುದೂ ಸತ್ಯಾಗ್ರಹಿಯ ಕರ್ತವ್ಯ. ಒಂದು ವೇಳೆ ಪೋಲೀಸರು ತನ್ನೊಡನೆ ಅಸಭ್ಯತನದಿಂದ ವರ್ತಿಸಿದರೆ, ತನಗೆ ಅನಾನುಕೂಲತೆ ಮಾಡಿದರೆ, ಹೊಡೆದರೆ, ಬಯ್ದರೆ ಅದನ್ನು ಅವರ ಮೇಲಧಿಕಾರಿಗೆ ತಿಳಿಸಬೇಕು. ಪೋಲೀಸರ ಮೇಲಧಿಕಾರಿ ಸಿಗದಿದ್ದರೆ ಅಥವಾ ತನ್ನ ಮಾತಿಗೆ ಅವನು ಗಮನ ಕೊಡದಿದ್ದರೆ ನಡೆದ ಸಂಗತಿಯನ್ನು ನ್ಯಾಯಾಧೀಶರಿಗೆ ತಿಳಿಸಬೇಕು. ಅವರು ಇತ್ತ ಗಮನ ಕೊಡದಿದ್ದರೆ ಈ ಕಷ್ಟಗಳು ಸರಕಾರಕ್ಕೆ ಸಮ್ಮತವಿರುವವೆಂದು ತಿಳಿದು ಅದನ್ನು ತನ್ನ ಸಲಹೆಗಾರರಿಗೆ ತಿಳಿಸಿ ಶಾಂತ ರೀತಿಯಿಂದ ಇರಬೇಕು.

೮ ತನಗೆ ದಂಡವಾದರೆ ಸತ್ಯಾಗ್ರಹಿಯು ಅದನ್ನು ತಾನಾಗಿಯೇ ಕೈಯೆತ್ತಿ ಕೊಡಬಾರದು, ಕೊಡಲು ಯಾರಿಗೂ ಹೇಳಬಾರದು. ದಂಡವನ್ನು ಕೊಡದಿರುವುದೇ ತನ್ನ ಧರ್ಮವೆಂದು ತಿಳಿದು ಅದಕ್ಕಾಗಿ ಆದ ಶಿಕ್ಷೆಯನ್ನು ಸೈರಿಸಿಕೊಳ್ಳಬೇಕು.

೯ ಅಧಿಕಾರಿಗಳು ದಂಡದ ಹಣವನ್ನು ವಸೂಲು ಮಾಡಲು ಮನೆಗೆ ಮುಟ್ಟುಗೋಲಿಗೆ ಬಂದರೆ ತನ್ನ ಒಡವೆಗಳನ್ನು ಮುಟ್ಟುಗೋಲು ಹಾಕಲು ಬಿಡಬೇಕು. ಅದರಿಂದ ಆಗುವ ಹೆಚ್ಚಿನ ಹಾನಿಯನ್ನೂ ಸಹಿಸಬೇಕು. ದಂಡವನ್ನು ಕೈಯೆತ್ತಿ ಸ್ವತಃ ಎಂದಿಗೂ ಕೊಡಬಾರದು. ತನ್ನ ಸತ್ವರಕ್ಷಣೆಗಾಗಿ ಕಾಯಿದೆಗಳನ್ನು ಮುರಿದವನು ಅದರಿಂದ ಆಗುವ ಕಷ್ಟನಷ್ಟಗಳಿಗೆಲ್ಲ ಸಿದ್ಧನೆ ಇರುವನು. ಆದುದರಿಂದ ಅವನು ತಾನೇ ದಂಡದ ಹಣವನ್ನು ಕೊಟ್ಟು ತಾನೇ ತನ್ನ ಸತ್ವಹಾನಿ ಮಾಡಿಕೊಳ್ಳುವುದಿಲ್ಲ.

೧೦ ಸತ್ಯಾಗ್ರಹಿಯು ಸೆರೆಮನೆಯಲ್ಲಿ ಉಚ್ಚವರ್ಗವನ್ನು ಪಡೆಯಲು

ಯತ್ನಿಸಬಾರದು. ಏಕೆಂದರೆ ಹಲವು ಮಟ್ಟಿಗೆ, ವರ್ಗೀಕರಣದ ಹಿಂದೆ ಸತ್ಯಾಗ್ರಹಿಗಳಲ್ಲಿ ಮತ್ತು ಸಾಮಾನ್ಯ ಕೈದಿಗಳಲ್ಲಿ ಮತ್ತು ಸತ್ಯಾಗ್ರಹಿಗಳಲ್ಲಿಯೆ ಭೇದವನ್ನುಂಟುಮಾಡುವ ಉದ್ದೇಶವಿರುತ್ತದೆ. ಇದರಿಂದ ಅಸೂಯೆಯು ಮತ್ತು ಅತ್ಯಾಶೆಯು ಹೆಚ್ಚುವುದು. ಮೇಲಾಗಿ ಈ ವರ್ಗೀಕರಣದ ಬಳಿಕೆ ಮನಬಂದಂತೆ ನಡೆಯುವುದು. ಇದರಿಂದ ಮೇಲಿನ ವರ್ಗದವರನ್ನು ಕೆಳಗಿನ ವರ್ಗಕ್ಕೆ ಹಾಕಿ ಶಿಕ್ಷಿಸಲು ಅನುವಾಗುವದು. ಆದ್ದರಿಂದ ವರ್ಗೀಕರಣ ಧೋರಣೆಯೆ ಯೋಗ್ಯವಾದದ್ದಲ್ಲ. ಆದರೂ ಸತ್ಯಾಗ್ರಹಿಯು ತನಗೆ ಸಿಕ್ಕ ವರ್ಗದ ಅನುಕೂಲತೆಗಳನ್ನು ಭೋಗಿಸಿದರೆ ಸತ್ಯದ ಭಂಗವಾಗುವದೆಂದು ಎನ್ನಲಾಗದು.

## ೧೨ ಸೆರೆಮನೆಯಲ್ಲಿ ಸತ್ಯಾಗ್ರಹಿಯ ನಡತೆ

೧ ಸೆರೆಮನೆಯಲ್ಲಿ ಕೂಡ ಸತ್ಯಾಗ್ರಹಿಯು ಸಭ್ಯರೀತಿಯಿಂದಲೂ ನಮ್ರತೆಯಿಂದಲೂ ವರ್ತಿಸಬೇಕು.

೨ ಸೆರೆಮನೆಯ ನಿಯಮಗಳನ್ನು ಮುರಿಯಬಾರದು. ಅವನ್ನು ಪಾಲಿಸುವ ಪ್ರವೃತ್ತಿ ಇರಬೇಕು. ಸೆರೆಮನೆಯಲ್ಲಿ ತನ್ನ ಜೀವನಕ್ರಮವನ್ನು ಅವಕ್ಕೆ ಅನುಸಾರವಾಗಿ ಇಟ್ಟುಕೊಳ್ಳಬೇಕು. ಸಿದ್ಧಾಂತಕ್ಕೂ ಸ್ವಾಭಿಮಾನಕ್ಕೂ ಕುಂದುತರುವಂಥ ನಿಯಮಗಳನ್ನು ಮಾತ್ರ ಮುರಿಯಲು ಹವಣಿಸಬೇಕು. ಆದ್ದರಿಂದ ಸೆರೆಮನೆಯಲ್ಲಿ ಯಾವ ವಸ್ತುವನ್ನೂ ಕದ್ದು ತರಬಾರದು, ನಿಯಮದ ಹೊರಗಿನ ಅನುಕೂಲತೆಯನ್ನು ಒದಗಿಸಿಕೊಳ್ಳಲು ಯಾವ ಅಧಿಕಾರಿಗೂ ಲಂಚ ಕೊಡಬಾರದು ಮತ್ತು ಅವರನ್ನು ದೈನ್ಯದಿಂದ ಬೇಡಬಾರದು.

೩ ದುಡಿಯುವುದು ಸೆರೆಮನೆಯ ನಿಯಮವಲ್ಲ, ಸೃಷ್ಟಿಯ ನಿಯಮ; ಇಲ್ಲವೆ ಧರ್ಮದ ನಿಯಮ. ಆದುದರಿಂದ ಸೆರೆಮನೆಯ ಕಟ್ಟಳೆಯ ಮೇರೆಗೆ ಒಪ್ಪಿಸಿಕೊಟ್ಟಷ್ಟು ಕೆಲಸವನ್ನು ಸ್ವೀಕರಿಸಿ ಅದನ್ನು ಮಾಡಲು ಸತ್ಯಾಗ್ರಹಿಯು ಹಿಂದು-ಮುಂದು ನೋಡಬಾರದು.

೪ ತನಗೆ ಒಪ್ಪಿಸಿದ ಕೆಲಸವು ಗೊತ್ತುಪಡಿಸಿದ ವೇಳೆಯಲ್ಲಿ ಆರೋಗ್ಯದ ಅಥವಾ ಮತ್ತಾವ ಕಾರಣದಿಂದಲಾದರೂ ಮುಗಿಯುವಂತಿಲ್ಲದಿದ್ದರೆ ಅದನ್ನು ಕುರಿತು ವಿನಯದಿಂದ ಅಧಿಕಾರಿಗೆ ತಿಳಿಸಬೇಕು; ಪುನಃ ಕೆಲಸ ಮಾಡಲು ಹೇಳಿದರೆ ಸಾಧ್ಯವಿದ್ದಷ್ಟು ಮಾಡಲು ಯತ್ನಿಸಬೇಕು, ಕಷ್ಟ

ವಾದರೆ ಅದನ್ನು ಸಹಿಸಿಕೊಳ್ಳಬೇಕು.

೫ ಪಂಡಿತರು–ವೈದ್ಯರು–ಆರೋಗ್ಯವನ್ನು ಪರೀಕ್ಷಿಸುವಾಗ ಸತ್ಯಾಗ್ರಹಿಯು ತನಗಿದ್ದ ರೋಗಗಳನ್ನು ಬಚ್ಚಿಡದೆ ಹೇಳಬೇಕು. ಅಂಟು ರೋಗವಿದ್ದರೆ ನಾಚಿಕೆಯಿಂದ ಅದನ್ನು ಹೇಳಲು ಹಿಂಜರಿಯಬಾರದು.

೬ ತನ್ನ ಧರ್ಮಕ್ಕೆ ಅಥವಾ ನಿಯಮಕ್ಕೆ ಕುಂದು ತರುವಂಥ ಔಷಧೋಪಚಾರವನ್ನು ಪಡೆಯಲು ಸೆರೆಯಾಳು ಬದ್ಧನಲ್ಲ. ಆದರೆ ಅನ್ಯತರದ ಔಷಧೋಪಚಾರವನ್ನು ಅಧಿಕಾರವಾಣಿಯಿಂದ ಬೇಡಲಾರನು. ಮೈಲಿಯನ್ನು ಚುಚ್ಚಿಸಿಕೊಳ್ಳದಿರುವುದು ಮುಂತಾದವುಗಳಿಗಾಗಿ ಶಿಕ್ಷೆಯನ್ನು ಅನುಭವಿಸಬೇಕಾಗುವುದು. ನಿಜವಾಗಿಯೂ ಇಂತಹ ಔಷಧೋಪಚಾರದ ಬಗೆಗೆ ಧಾರ್ಮಿಕ ನಿರ್ಬಂಧವಿದ್ದರೆ ಮಾತ್ರ ಶಿಕ್ಷೆಗೆ ಗುರಿಯಾಗಬೇಕು; ಬರಿಯ ಶಿಕ್ಷಿಸಿಕೊಳ್ಳುವ ಪೊಳ್ಳುಗುರಿಯಿಂದ ಸುಮ್ಮಸುಮ್ಮನೆ ತನ್ನ ನಿಯಮಕ್ಕೆ ಧಾರ್ಮಿಕ ಸ್ವರೂಪವನ್ನು ಕೊಟ್ಟು ಅದಕ್ಕಾಗಿ ಹಟ ಹಿಡಿಯಬಾರದು.

೭ ತನ್ನ ಆರೋಗ್ಯಸಂಬಂಧವಾಗಿ ಏನಾದರೂ ಹೇಳುವುದಿದ್ದರೆ ಮತ್ತು ತನಗೆ ಯಾವುದಾದರೂ ಅನುಕೂಲತೆ ಬೇಕಾಗಿದ್ದರೆ ಅದನ್ನು ಒದಗಿಸಿಕೊಡಬಲ್ಲ ಯೋಗ್ಯ ಅಧಿಕಾರಿಗೆ ತಿಳಿಸಬೇಕು. ಅಧಿಕಾರಿಯು ಅತ್ತ ಸರಿಯಾಗಿ ಗಮನ ಕೊಡದಿದ್ದರೆ ಅದೂ ಸತ್ಯಾಗ್ರಹದಲ್ಲಿ ಆಗತಕ್ಕ ಕಷ್ಟಗಳಲ್ಲಿ ಒಂದೆಂದು ತಿಳಿದು ಅದನ್ನು ಸಹಿಸಬೇಕು. ತನಗೆ ಬೇಕಾದ ಅನುಕೂಲತೆಯನ್ನು ಕಳವಿನಿಂದ ಒದಗಿಸಿಕೊಂಡು ತನ್ನ ಆರೋಗ್ಯವನ್ನು ಸುಧಾರಿಸಿಕೊಳ್ಳುವ ಯತ್ನವನ್ನು ಸತ್ಯಾಗ್ರಹಿಯು ಮಾಡಬಾರದು. ಒಂದು ವೇಳೆ ಹೀಗೆ ಮಾಡಿದರೆ ಅವನ ಬೇಡಿಕೆಗಳು ಅಯೋಗ್ಯವಿದ್ದುವೆಂದು ಅಧಿಕಾರಿಯು ತಿಳಿದುಕೊಳ್ಳುವನು.

೮ ಸೆರೆಮನೆಯಲ್ಲಿಯೂ ಪಾಲಿಸಲೇಬೇಕಾದ ಯಾವುದಾದರೂ ವ್ರತ-ನಿಯಮವಿದ್ದರೆ ಅದನ್ನು ಸತ್ಯಾಗ್ರಹಿಯು ಯೋಗ್ಯ ಅಧಿಕಾರಿಗೆ ಅರುಹಿ ಅದಕ್ಕಾಗಿ ಯೋಗ್ಯ ಅನುಕೂಲತೆಗಳನ್ನು ಬೇಡಬೇಕು. ವ್ರತೋಪಾಸಕನು ತನ್ನ ವ್ರತಪಾಲನೆಗೆ ತಗಲುವ ವೆಚ್ಚವನ್ನು ಸರಕಾರವೇ ಕೊಡಬೇಕೆಂಬ ಆಗ್ರಹ ಹಿಡಿಯಬಾರದು. ಸತ್ಯಾಗ್ರಹಿಗೆ ತನ್ನ ವೆಚ್ಚದಿಂದ ವ್ರತವನ್ನು ಪಾಲಿಸಲು ಅಪ್ಪಣೆ ದೊರೆತರೆ ಅಷ್ಟರಿಂದಲೆ ಸಂತುಷ್ಟನಾಗಬೇಕು. ಒಂದು ವೇಳೆ ಅಪ್ಪಣೆ ದೊರೆಯದೆ ವ್ರತಪಾಲನೆಗೆ ಕಷ್ಟವಾದರೆ ಅದನ್ನು ಸಹಿಸಿಕೊಳ್ಳಬೇಕು.

೯ ಸೆರೆಮನೆಯ ಮಟ್ಟಿಗೇ ಯಾವುದಾದರೂ ವಿಶೇಷತರದ ಹೊಸವ್ರತ ನಿಯಮವನ್ನು ಸತ್ಯಾಗ್ರಹಿಯು ಹಿಡಿಯಬಾರದು.

೧೦ ಕೈದಿಯು ಹೊಡೆತ ಅಥವಾ ಬೈಗಳನ್ನು ತಿನ್ನಬೇಕೆಂದು ವಿಧಿಯಿಲ್ಲ. ಎಂಜಲು, ತಂಗಳು, ಹೊಲಸಾದ, ಅರಬೆಂದ ಅಥವಾ ಹುಳುಗಳಿದ್ದ ಆಹಾರವನ್ನು ತಿನ್ನಬೇಕೆಂಬ ನಿಯಮವೂ ಇಲ್ಲ. ಆದ್ದರಿಂದ ಇಂಥ ಆಹಾರವನ್ನು ಕೊಟ್ಟರೆ, ಹೊಡೆದರೆ, ಬೈದರೆ ಸಹಿಸಿಕೊಳ್ಳಬಾರದು. ಹೊಡೆದ ಬಗೆಗೆ ಬೈದಬಗೆಗೆ ಫಿರ್ಯಾದಿ ಕೊಡಬೇಕು. ಅದನ್ನು ಕೇಳದೆ ಮತ್ತೆ ಮತ್ತೆ ಹೊಡೆಯಲಾರಂಭಿಸಿದರೆ, ಬೈಯತೊಡಗಿದರೆ, ಶಿಕ್ಷೆಕೊಟ್ಟರೆ ಎಲ್ಲವನ್ನೂ ಸಹಿಸಬೇಕು, ಆದರೆ ಕೆಲಸ ಮಾಡಲು ಒಲ್ಲೆನ್ನಬಾರದು; ಅವಶ್ಯಕತೆಯು ಕಂಡರೆ ಉಪವಾಸ ಮಾಡಬೇಕು.

೧೧ ತಿನ್ನಲಾಗದಂಥ ಆಹಾರವನ್ನು ಸತ್ಯಾಗ್ರಹಿಯು ಸ್ವೀಕರಿಸಬಾರದು. ಇದಕ್ಕಾಗಿ ಶಿಕ್ಷೆಯಾದರೆ ಸಹಿಸಿಕೊಳ್ಳಬೇಕು.

೧೨ ಸತ್ಯಾಗ್ರಹಿಯು ತನಗೆ ಮತ್ತು ತನ್ನ ವರ್ಗದ ಸೆರೆಯಾಳುಗಳಿಗಾಗಿಯಷ್ಟೆ ಸೆರೆಮನೆಯ ನಿಯಮಗಳಲ್ಲಿ ಸುಧಾರಣೆಗಳನ್ನು ಮಾಡುವುದಕ್ಕಾಗಿ, ಅನುಕೂಲತೆಗಳನ್ನು ಒದಗಿಸಿಕೊಳ್ಳುವುದಕ್ಕಾಗಿ ಸೆರೆಮನೆಯಲ್ಲಿ ಸತ್ಯಾಗ್ರಹವನ್ನು ಹೂಡಬಾರದು. ಕೇವಲ ತನ್ನ ಮತ್ತು ತನ್ನವರ್ಗದ ಕೈದಿಗಳ ಮೇಲೆ ಅಷ್ಟೇ ಅನ್ಯಾಯವಾಗುತ್ತಿದ್ದರೆ ಸತ್ಯಾಗ್ರಹ ಹೂಡಬಹುದು. ಇಡಿಯ ಸೆರೆಮನೆಯ ಆಡಳಿತದಲ್ಲಿಯೆ ಸುಧಾರಣೆ ಮಾಡುವುದು ಅವಶ್ಯವೆಂದು ಕಂಡುಬಂದರೆ ಮತ್ತು ಅದಕ್ಕೆ ತಕ್ಕ ಪರಿಸ್ಥಿತಿಯು ಇದ್ದರೆ ಮಾತ್ರ ಸೆರೆಮನೆಯಲ್ಲಿ ಸತ್ಯಾಗ್ರಹವನ್ನು ಮಾಡಬಹುದು.

೧೩ ಸೆರೆಮನೆಯ ಆಡಳಿತವು ವ್ಯವಸ್ಥಿತವಾಗಿ ನಡೆಯುವಂತೆ ವರ್ತಿಸುವುದು, ಸಹಕಾರವೀಯುವುದು ಸತ್ಯಾಗ್ರಹದ ಸಿದ್ಧಾಂತಕ್ಕೆ ವಿರೋಧವಲ್ಲ. ಆ ಬಗೆಗೆ ಅಧಿಕಾರಿಗಳಿಗೆ ಎಲ್ಲ ರೀತಿಯಿಂದ ನೆರವಾಗುವುದು ಸತ್ಯಾಗ್ರಹಿಯ ಧರ್ಮ. ಆದರೆ ಸತ್ಯಾಗ್ರಹಿಯು ವಾರ್ಡರ್ ಮತ್ತು ವಾಚ್‌ಮನ್ನರ ಅಧಿ-ಕಾರಗಳನ್ನು ಸ್ವೀಕರಿಸಬಾರದು.

೧೪ ಬಿಡುವಿನ ದಿನಗಳನ್ನು ಹೆಚ್ಚಿಸಿಕೊಳ್ಳಲು ಸತ್ಯಾಗ್ರಹಿಯು ಬಯಸಬಾರದು.

೧೫ ಸ್ವರಾಜ್ಯ ಸಂಪಾದನೆಯ ಸಲುವಾಗಿ ಹೂಡಿದ ಸತ್ಯಾಗ್ರಹದ ಉದ್ದೇಶವು ಇಡಿಯ ರಾಜ್ಯದ ಆಡಳಿತವನ್ನು ಸಂಪೂರ್ಣ ಬದಲು ಮಾಡು

ವದೇ ಆದ್ದರಿಂದ ಸೆರೆಮನೆಯ ಸುಧಾರಣೆಗಾಗಿ ಸೆರೆಮನೆಯಲ್ಲಿ ಒಂದು ಸ್ವತಂತ್ರವಾದ ಸತ್ಯಾಗ್ರಹ ಯುದ್ಧವನ್ನು ಹೂಡಬಾರದು. ಆದರೆ ಸೆರೆಮನೆಯಲ್ಲಿ ಅಕ್ಷಮ್ಯ, ಅಮಾನುಷ ವರ್ತನೆ ಇದ್ದರೆ, ನಿಯಮಗಳಿದ್ದರೆ, ಅವುಗಳ ವಿರುದ್ಧವಾಗಿ ಸಂದರ್ಭದಲ್ಲಿ ಸತ್ಯಾಗ್ರಹ ಯುದ್ಧವನ್ನು ಹೂಡಬೇಕು.

## ೧೩ ಸತ್ಯಾಗ್ರಹಿಯ ನಿಯಮಾವಲಿ

ಸ್ವಲ್ಪ ಪುನರುಕ್ತಿಯ ದೋಷವಾದರೂ ೨೩-೨-೧೯೩೦ ನೇ ದಿನಾಂಕದ ' ನವಜೀವನ ' ದಲ್ಲಿ ಗಾಂಧೀಜಿ ಬರೆದಿರುವ ' ಸತ್ಯಾಗ್ರಹಿಯ ನಿಯಮಾವಲಿ ' ಇಲ್ಲಿ ಕೊಡಲಾಗಿದೆ. ಅದರಿಂದ ಈ ಖಂಡವು ಪರಿಪೂರ್ಣವಾಗುವುದಲ್ಲದೆ ಇದರ ಅತ್ಯಂತ ಸುಂದರವಾದ ಉಪಸಂಹಾರವೂ ಆಗುವುದು.

೧ ಸತ್ಯಾಗ್ರಹವೆಂದರೆ ಸತ್ಯವನ್ನು ಕುರಿತು ಆಗ್ರಹ ಹಿಡಿಯುವುದು. ಈ ಆಗ್ರಹದಿಂದ ಮನುಷ್ಯನಿಗೆ ಅತುಲ ಬಲವು ಬರುವುದು. ಇದೇ ಸತ್ಯಾಗ್ರಹದ ಬಲವು.

೨ ಸತ್ಯದ ಬಗೆಗೆ ನಮ್ಮಲ್ಲಿ ನಿಜವಾದ ಆಗ್ರಹವಿದ್ದರೆ ತಂದೆ–ತಾಯಿ ಸ್ತ್ರೀ–ಪುರುಷ, ರಾಜ–ಪ್ರಜೆ, ಅಷ್ಟೇಕೆ ಇಡೀ ಜಗತ್ತೇ ನಮಗೆ ಎದುರಾದರೂ ಅದನ್ನು ನಾವು ನಡೆಸಲೇಬೇಕಾಗುವುದು. ಅದೇ ನಿಜವಾದ ಸತ್ಯಾಗ್ರಹ.

೩ ಇಷ್ಟು ವ್ಯಾಪಕವಾದ ಆಗ್ರಹದಲ್ಲಿ ಸ್ವಜನರು ಅಥವಾ ಪರಜನರು, ಬಾಲಕರು ಅಥವಾ ಮುದುಕರು, ಸ್ತ್ರೀಯರು ಅಥವಾ ಪುರುಷರು ಎಂಬ ಭೇದ ಮಾಡಲು ಬರುವುದಿಲ್ಲ. ಯಾರ ವಿರುದ್ಧವಾಗಿಯೂ ಶಾರೀರಿಕ ಬಲವನ್ನು ಉಪಯೋಗಿಸಬಾರದು. ಶರೀರದ ಬಲವೊಂದನ್ನು ಬಿಟ್ಟರೆ ಇನ್ನುಳಿದುದೇ ಅಹಿಂಸೆಯ ಬಲ, ಪ್ರೇಮದ ಬಲ. ಇದೇ ಆತ್ಮಬಲ.

೪ ಪ್ರೇಮದ ಬಲದಿಂದ ದುಃಖವಾಗುವುದು ಅನ್ಯರಿಗಲ್ಲ, ತನಗೆ. ಆದ್ದರಿಂದ ಸತ್ಯಾಗ್ರಹಿಯಲ್ಲಿ ಮರಣಪರ್ಯಂತರದ ಎಲ್ಲ ಕಷ್ಟಗಳನ್ನೂ ನಗುಮೊಗದಿಂದ ಸಹಿಸುವ ಶಕ್ತಿಯಿರಬೇಕು.

೫ ಪ್ರತಿಪಕ್ಷಿಯು ಬಹಳವಾಗಿ ವಿರೋಧಿಸುತ್ತಿದ್ದರೂ ಸತ್ಯಾಗ್ರಹಿಯು ಕಾಯಾ ವಾಚಾ ಮನಸಾ ಅವನ ಮತ್ತು ಅವನಪಕ್ಷದ ಯಾವುದೆ ವ್ಯಕ್ತಿಯ ಅಹಿತವನ್ನು ಬಯಸುವುದೂ ಇಲ್ಲ, ಅಹಿತವನ್ನು ಮಾಡುವದೂ ಇಲ್ಲ. ಅಸಹಕಾರ, ಸವಿನಯ ಕಾಯಿದೆಭಂಗ ಮೊದಲಾದವುಗಳ ಹುಟ್ಟು ಇಂತಹ

ಯೋಗ್ಯ ವಿಚಾರಗಳಲ್ಲಿದೆ,

೬ ಸತ್ಯಾಗ್ರಹದ ಈ ಹುಟ್ಟನ್ನು ನೆನಪಿನಲ್ಲಿಟ್ಟವರಿಗೆ ಕೆಳಗಿನ ನಿಯಮ ಗಳು ಸುಲಭವಾಗಿ ತಿಳಿಯುವವು.

(೧) ಸತ್ಯಾಗ್ರಹಿಗೆ ಯಾರ ಬಗೆಗೂ ಕ್ರೋಧವಿಲ್ಲ.

(೨) ಅವನು ವಿರೋಧಿಗಳ ಕ್ರೋಧವನ್ನು ಸಹಿಸುವನು.

(೩) ತನ್ನ ಕೋಪವನ್ನು ಸಹಿಸುತ್ತ ವಿರೋಧಿಯು ಕೊಟ್ಟ ಪೆಟ್ಟು ಗಳನ್ನು ಅವನು ಸಹಿಸುವನು; ಆದರೆ ತಿರುಗಿ ಅವನಿಗೆ ಹೊಡೆಯುವುದಿಲ್ಲ. ವಿರೋಧಿಯು ಸಿಟ್ಟಿನ ಭರದಲ್ಲಿ ಮಾಡಿದ ಯೋಗ್ಯ ಅಥವಾ ಅಯೋಗ್ಯ ಅಪ್ಪಣೆಯನ್ನು ಸತ್ಯಾಗ್ರಹಿಯು ಹೆದರಿಕೆಗೆ ಇಲ್ಲವೆ ಹೊಡೆತಗಳಿಗೆ ಒಪ್ಪಿ ಅವನಿಗೆ ಶರಣು ಹೋಗುವುದಿಲ್ಲ.

(೪) ಪೋಲೀಸರು ಸೆರೆ ಹಿಡಿಯಲು ಬಂದರೆ ಸತ್ಯಾಗ್ರಹಿಯು ಸಂತೋಷದಿಂದ ಅವರ ವಶಕ್ಕೆ ಹೋಗುವನು. ತನ್ನ ವಸ್ತುಗಳನ್ನು ಮುಟ್ಟು ಗೋಲು ಹಾಕಲು ಬಂದರೆ ಅದಕ್ಕೆ ಆನಂದದಿಂದ ಒಪ್ಪಿಕೊಳ್ಳುವನು.

(೫) ಅಗತ್ಯವಿರುವಾಗ ಎರಡನೆಯವರ ಆಸ್ತಿಯ ರಕ್ಷಣೆ ಮಾಡುವ ಹಕ್ಕು ಸತ್ಯಾಗ್ರಹಿಗೆ ಇದ್ದೇ ಇದೆ. ಅದನ್ನು ಅವನು ಜೀವಹೋದರೂ ಬಿಟ್ಟುಕೊಡುವುದಿಲ್ಲ. ಅದನ್ನು ವಶಪಡಿಸಿಕೊಳ್ಳಲು ಬಂದವನನ್ನು ಹೊಡೆಯುವುದೂ ಇಲ್ಲ.

(೬) ಹೊಡೆಯುವುದು ಮಾತ್ರವಲ್ಲ, ಬೈಯುವುದೂ ಇಲ್ಲ.

(೭) ಸತ್ಯಾಗ್ರಹಿಯು ವಿರೋಧಿಯ ಅವಮಾನ ಮಾಡುವುದಿಲ್ಲ. ಈಗ ದೇಶದಲ್ಲಿ ಬಳಕೆಯಲ್ಲಿರುವ ಹಿಂಸಾತ್ಮಕವಾದ ಎಲ್ಲ ಜಯಘೋಷಗಳನ್ನು ಅವನು ಬಿಟ್ಟು ಬಿಡುವನು.

(೮) ಸತ್ಯಾಗ್ರಹಿಯು ಬ್ರಿಟಿಷ್ ಧ್ವಜಕ್ಕೆ ವಂದನೆ ಮಾಡುವುದಿಲ್ಲ. ಆದರೆ ಅವನು ಎಂದಿಗೂ ಅದರ ಅಪಮಾನ ಮಾಡುವುದಿಲ್ಲ. ಅಧಿಕಾರಿಗಳ ಮತ್ತು ಇಂಗ್ಲಿಷ ಜನರ ಅಪಮಾನವನ್ನೂ ಮಾಡುವುದಿಲ್ಲ.

(೯) ಸರಕಾರದೊಡನೆ ಹೋರಾಟ ನಡೆದಾಗ ಕೂಡ ಯಾರಾದರೂ ಇಂಗ್ಲಿಷರ ಇಲ್ಲವೆ ಅಧಿಕಾರಿಗಳ ಅಪಮಾನ ಮಾಡಲು ಬಂದರೆ ಅಥವಾ ಹೊಡೆಯಹೋದರೆ ಸತ್ಯಾಗ್ರಹಿಯು ತನ್ನ ಜೀವದ ಹಂಗುದೊರೆದು ಅವ ರನ್ನು ಕಾಪಾಡುವನು.

ಸೆರೆಮನೆಯ ಬಗೆಗೆ :

(೧) ಸತ್ಯಾಗ್ರಹಿಯು ಸೆರೆಮನೆಯಲ್ಲಿದ್ದಾಗ ತನ್ನ ಮಾನಕ್ಕೆ ಕುಂದು ತರದಂಥ ಸೆರೆಮನೆಯ ಎಲ್ಲ ನಿಯಮಗಳನ್ನು ಪಾಲಿಸುವನು. ಅಧಿಕಾರಿಗಳೊಡನೆ ವಿವೇಕದಿಂದ ವಿನಯದಿಂದ ವರ್ತಿಸುವನು. ಉದಾಹರಣೆಗೆ:- ಸತ್ಯಾಗ್ರಹಿಯು ಅಧಿಕಾರಿಗಳಿಗೆ ನಮಸ್ಕಾರ ಮಾಡುವನು. ಆದರೆ ಅವನಿಗೆ ನೆಲಕ್ಕೆ ಮೂಗು ಉಜ್ಜಲು ಹೇಳಿದರೆ ಹಾಗೆ ಮಾಡಲಾರನು. 'ಸರಕಾರ್‌ಕೀ ಜಯ್' ಎನ್ನಲು ಹೇಳಿದರೆ ಹಾಗೆ ಹೇಳಲಾರನು. ತನ್ನ ಧರ್ಮದ ಕಟ್ಟು ಬಾಧೆಗಳಿಲ್ಲದಿದ್ದರೆ ಸೆರೆಮನೆಯ ಆರೋಗ್ಯಕರವಾದ ಆಹಾರವನ್ನು ತೆಗೆದುಕೊಳ್ಳುವನು. ಆದರೆ ಅಪಕ್ವ, ಕೊಳೆತ, ಹೊಲಸು ಪಾತ್ರೆಯಲ್ಲಿ ಬಡಿಸಿದ, ಅಪಮಾನಿಸುವ ಉದ್ದೇಶದಿಂದ ಕೊಟ್ಟ ಆಹಾರವನ್ನು ತೆಗೆದುಕೊಳ್ಳುವುದಿಲ್ಲ.

(೨) ಸತ್ಯಾಗ್ರಹಿಯು ಕೊಲೆಗಡಕರಾದ ಸೆರೆಯಾಳುಗಳ ಮತ್ತು ತನ್ನ ನಡುವೆ ಭೇದವನ್ನೆಣಿಸುವುದಿಲ್ಲ. ಅವರಿಗಿಂತಲೂ ತಾನು ಉಚ್ಚನೆಂದು ತಿಳಿದುಕೊಂಡು ಇಲ್ಲವೆ ಅಧಿಕಾರಿಗಳಿಗೆ ಹಾಗೆ ಹೇಳಿ ತನಗೆ ಹೆಚ್ಚಿನ ಸವಲತ್ತುಗಳನ್ನು ಪಡೆಯಲು ಯತ್ನಿಸುವುದಿಲ್ಲ. ಶರೀರಕ್ಕೂ ಆತ್ಮಕ್ಕೂ ಅವಶ್ಯವಾಗಿ ಬೇಕಾದ ವಸ್ತುಗಳನ್ನು ಬೇಡಲು ಎಲ್ಲರಿಗೂ ಅಧಿಕಾರವುಂಟು.

(೩) ಯಾವ ಅನುಕೂಲತೆಗಳಿಲ್ಲದಿದ್ದರೆ ಮಾನಹಾನಿಯಾಗುವುದಿಲ್ಲವೊ ಅಂಥವು ಸಿಕ್ಕದಿದ್ದರೂ ಸತ್ಯಾಗ್ರಹಿಯು ಉಪವಾಸಾದಿಗಳನ್ನು ಮಾಡವುದಿಲ್ಲ.

ದಲದ ಬಗೆಗೆ :

(೧) ತನ್ನ ಗುಂಪಿನ ಅಧಿಕಾರಿಯು ಹೊರಡಿಸಿದ ಎಲ್ಲ ಹುಕುಮುಗಳು ತನ್ನ ಮನಸ್ಸಿಗೆ ಬರಲಿ ಬರದಿರಲಿ ಅವನ್ನು ಸತ್ಯಾಗ್ರಹಿಯು ಸಂತೋಷದಿಂದ ಪಾಲಿಸುವನು.

(೨) ಹುಕುಮು ಅಪಮಾನಕರವಾದುದು, ದ್ವೇಷಯುಕ್ತವಾದುದು ಮತ್ತು ಮೂರ್ಖತನದ್ದು ಎಂದು ತೋರಿದರೂ ಅವನು ಮೊದಲು ಅದನ್ನು ಪಾಲಿಸಿ ಆ ಮೇಲೆ ತನ್ನ ಅಭಿಪ್ರಾಯವನ್ನು ಮೇಲಿನವರಿಗೆ ತಿಳಿಸುವನು. ದಲದಲ್ಲಿ ಸೇರುವ ಮೊದಲು ಆ ದಲವು ಯೋಗ್ಯವಿರುವುದೊ ಇಲ್ಲವೊ ಎಂಬುದನ್ನು ಯೋಚಿಸುವ ಹಕ್ಕು ಅವನಿಗೆ ಇರುವದು. ಒಂದು ಸಲ ಸೇರಿದ ಬಳಿಕ ಅದರ ಒಳ್ಳೆಯ ಇಲ್ಲವೆ ಕೆಟ್ಟ ನಿಯಮಗಳನ್ನೆಲ್ಲ ಪಾಲಿಸು

ವುದು ಅವನ ಧರ್ಮವಾಗುವುದು. ದಲದಲ್ಲಿದ್ದುಕೊಂಡು ನಿಯಮಗಳನ್ನು ಮುರಿಯಲು ಅವನಿಗೆ ಅಧಿಕಾರವಿರುವದಿಲ್ಲ.

(೩) ಸತ್ಯಾಗ್ರಹಿಯು ತನ್ನನ್ನು ಅವಲಂಬಿಸಿಕೊಂಡಿರುವವರ ಹೊಟ್ಟೆಯ ಬಗೆಗೆ ಯಾರಿಂದಲೂ ಏನೂ ಅಪೇಕ್ಷಿಸುವುದಿಲ್ಲ. ತನ್ನನ್ನು ಅವಲಂಬಿಸಿಕೊಂಡವರ ಉದರಪೋಷಣೆಯ ವ್ಯವಸ್ಥೆ ಆದರೆ ಅದು ಅನಪೇಕ್ಷಿತವೆಂದು ತಿಳಿಯುವನು. ತನ್ನ ಆಶ್ರಿತರನ್ನು ಅವನು ಈಶ್ವರನ ಚರಣದಲ್ಲಿ ಅರ್ಪಿಸುವನು. ಎಲ್ಲಿ ಶಾರೀರಕ ಬಲದ ಯುದ್ಧಗಳಾಗುವವೋ ಅಲ್ಲಿ ಸಾವಿರಾರು ಜನರು ತೊಡಗುವರು. ಅಂಥ ಕಡೆಗಳಲ್ಲಿಯೂ ಯಾರೂ ಯಾರನ್ನೂ ಅವಲಂಬಿಸಿಕೊಂಡಿರುವುದಿಲ್ಲ. ಸತ್ಯಾಗ್ರಹೀ ಯುದ್ಧದ ವಿಷಯ ಕೇಳಬೇಕಾದುದೇನು? ಇಂಥವರನ್ನು ದೇವರು ಹಸಿವೆಯಿಂದ ಬಳಲಿಸಿ ಕೊಲ್ಲುವುದಿಲ್ಲವೆಂಬುದು ಸರ್ವರ ಅನುಭವಕ್ಕೂ ಬಂದಿದೆ.

ಜಾತಿಜಾತಿಗಳ ನಡುವಿನ ಜಗಳದ ಬಗೆಗೆ :

(೧) ಸತ್ಯಾಗ್ರಹಿಯು ಜಾತೀಯ ಜಗಳಕ್ಕೆ ಮತ್ತು ತಿಕ್ಕಾಟಕ್ಕೆ ತಿಳಿದೂ ತಿಳಿದೂ ಕಾರಣನಾಗುವುದಿಲ್ಲ.

(೨) ಜಾತೀಯ ಜಗಳದಲ್ಲಿ ಅವನು ಯಾವ ಪಕ್ಷದ ಪರವಾಗಿಯೂ ತೊಡಗುವುದಿಲ್ಲ. ಯಾವ ಪಕ್ಷವು ನ್ಯಾಯವಾದದ್ದೊ ಅದಕ್ಕೆ ಅವನು ಸಹಾಯ ಮಾಡುವನು. ತಾನು ಹಿಂದೂವಾಗಿದ್ದರೆ ಮುಸಲ್ಮಾನ ಮುಂತಾದ ಇತರ ಧರ್ಮೀಯರ ಬಗೆಗೆ ಉದಾರವೃತ್ತಿಯನ್ನು ತೋರಿಸುವನು. ಹಿಂದೂಗಳು ಮುಸಲ್ಮಾನ ಮುಂತಾದ ಅನ್ಯ ಜಾತಿಗಳ ಮೇಲೆ ಆಕ್ರಮಣ ಮಾಡಿದರೆ ಆಕ್ರಮಿತರನ್ನು ತನ್ನ ಜೀವದ ಹಂಗುದೊರೆದು ಕಾಪಾಡುವನು. ಹಿಂದೂಗಳ ಮೇಲೆ ಆಕ್ರಮಣವಾದರೂ ಅವರನ್ನುಳಿಸಲು ತಪ್ಪದೆ ಮುಂದೆ ಬರುವನೇ ಹೊರತು ಜಾತಿಜಾತಿಗಳಲ್ಲಿ ನಡೆದ ಹೋರಾಟದಲ್ಲಿ ಎಂದೂ ತೊಡಗುವುದಿಲ್ಲ.

(೩) ಜಾತೀಯ ಜಗಳಗಳಿಂದ ಆದಷ್ಟು ದೂರ ಇರಲು ಯತ್ನಿಸುವನು.

(೪) ಅವನು ಯಾವ ಜಾತಿಯವರ ಮನಸ್ಸಿಗೂ ನೋವಾಗದಂತೆ ಮೆರವಣಿಗೆಯನ್ನು ಹೊರಡಿಸಬೇಕು. ಯಾವುದೆ ಜಾತಿಯ ಮನಸ್ಸಿಗೆ ನೋವಾಗುವ ಮೆರವಣಿಗೆಯಲ್ಲಿ ತೊಡಗಕೂಡದು.

## ೧೪ ಸತ್ಯಾಗ್ರಹಿಗೆ ಅವಶ್ಯವಿರುವ ಗುಣಗಳು

(" ಹರಿಜನ ಬಂಧು " ವಿನಲ್ಲಿ ಗಾಂಧೀಜಿಯವರು ೨೬-೩-೩೯ ರಲ್ಲಿ ಬರೆದುದು)

೧ ಸತ್ಯಾಗ್ರಹಿಯು ಪರಮಾತ್ಮನಲ್ಲಿ ಸಂಪೂರ್ಣ ಮತ್ತು ಜೀವಂತ ಶ್ರದ್ಧೆಯುಳ್ಳವನಿರುವನು. ಪರಮಾತ್ಮನೇ ಸನಾತನವಾದ ಆಧಾರನು.

೨ ಸತ್ಯಾಗ್ರಹಿಯು ಧರ್ಮದಲ್ಲಿರುವಷ್ಟು ಆಸ್ಥೆಯನ್ನು ಸತ್ಯ ಅಹಿಂಸೆಗಳ ಬಗೆಗೂ ವಹಿಸುವನು. ಆದುದರಿಂದ ಮನುಷ್ಯನಲ್ಲಿರುವ ಸ್ವಾಭಾವಿಕ ಒಳ್ಳೇತನದಲ್ಲಿ ಅವನ ವಿಶ್ವಾಸವಿರುವದು. ಈ ಒಳ್ಳೇತನವನ್ನು ಜಾಗ್ರತಗೊಳಿಸಲು ಅವನು ಯಾವಾಗಲೂ ಹೆಣಗುವನು. ಈ ಪ್ರಯತ್ನವು ಸತ್ಯ ಮತ್ತು ಪ್ರೇಮದ ಮಾರ್ಗದಿಂದಲೆ ನಡೆಯುವುದು. ಹಾಗೆ ಮಾಡುವಾಗ ಉಂಟಾದ ಕಷ್ಟನಷ್ಟಗಳನ್ನೆಲ್ಲ ಅವನು ತಾಳ್ಮೆಯಿಂದ ಸಹಿಸುವನು.

೩ ಅವನ ಜೀವನಕ್ರಮವು ಯಾವಾಗಲೂ ಶುದ್ಧವಿರಬೇಕು. ತನ್ನ ಕಾರ್ಯಕ್ಕಾಗಿ ಸರ್ವಸ್ವವನ್ನೂ ಆನಂದದಿಂದ ಬಲಿಕೊಡಲು ಅವನು ಸಿದ್ಧನಿರಬೇಕು.

೪ ಅವನು ನೂಲುತ್ತಿರಬೇಕು, ಸತತವಾಗಿ ಖಾದೀಧಾರಿಯಾಗಿರಬೇಕು. ಹಿಂದೀಯರಿಗೆ ಇದು ಅವಶ್ಯ.

೫ ಅವನು ನಿರ್ವ್ಯಸನಿಯೂ ಎಲ್ಲ ಮಾದಕ ಪದಾರ್ಥಗಳನ್ನು ಬಿಟ್ಟವನೂ ಇರಬೇಕು. ಇದರಿಂದ ಅವನ ಮನಸ್ಸು ನಿರ್ಮಲವೂ ನಿಶ್ಚಲವೂ ಇರಬಲ್ಲದು.

೬ ಕಾಲಕಾಲಕ್ಕೆ ಮಾಡಲಾದ ಶಿಸ್ತಿನ ನಿಯಮಗಳನ್ನು ಅವನು ಸ್ವಸಂತೋಷದಿಂದ ಬಿಟ್ಟುಬಿಡದೆ ಪಾಲಿಸುವನು.

೭ ಸಾಮಾನ್ಯವಾಗಿ ಅವನು ಸೆರೆಮನೆಯ ನಿಯಮಗಳನ್ನು ಪಾಲಿಸುವನು; ಆದರೆ ಮಾನಭಂಗವಾಗುವಂಥವುಗಳಿದ್ದರೆ ಮಾತ್ರ ಮುರಿಯುವನು.

## ೧೫ ಸಾಮುದಾಯಿಕ ಕಾಯಿದೆಭಂಗ

೧ ಯಾವುದೇ ಸ್ಥಾನದಲ್ಲಿ ಸಾಮುದಾಯಿಕ ಸತ್ಯಾಗ್ರಹವನ್ನು ಹೂಡಬೇಕಾದರೆ ಕೆಳಗೆ ತೋರಿಸಿದ ಅನುಕೂಲ ಪರಿಸ್ಥಿತಿ ಇರಬೇಕು. ಇಲ್ಲದೆ ಹೋದರೆ ಹಿಂಸೆ, ಪರಸ್ಪರ ವೈರಭಾವ, ಇದಲ್ಲದೆ ಒತ್ತಾಯ ಮತ್ತು

ದಮನನೀತಿಯ ಮೂಲಕ ಉಂಟಾಗುವ ಭಯ-ಭೀತಿ ಇವುಗಳ ಪ್ರಾದು ರ್ಭಾವವಾಗುವ ಸಂಭವವುಂಟು.

೨ ಸತ್ಯಾಗ್ರಹವನ್ನು ಯೋಜಿಸುವ ಮುಂದಾಳುಗಳಲ್ಲಿ ಒಮ್ಮನಸ್ಸೂ ಪರಸ್ಪರರಲ್ಲಿ ವಿಶ್ವಾಸವೂ ಅವಶ್ಯ. ಪರಸ್ಪರರ ನಡತೆಯ ಬಗೆಗೆ ಸಂದೇಹ, ಮುಂದಾಳುಗಳ ಧೋರಣೆಯ ಬಗೆಗೆ ಅನುಯಾಯಿಗಳಲ್ಲಿ ಅವಿಶ್ವಾಸ ಅಥವಾ ಅರೆವಿಶ್ವಾಸ ಕಂಡುಬಂದರೆ ಅದು ಪ್ರತಿಕೂಲ ಪರಿಸ್ಥಿತಿ ಎಂದು ತಿಳಿಯಬೇಕು.

೩ ಸತ್ಯಾಗ್ರಹವನ್ನು ಯೋಜಿಸುವ ಮುಂದಾಳುಗಳು ಬೇರೆ ಬೇರೆ ರಾಜಕೀಯ ವಿಚಾರದವರಾದರೆ ಆ ಆ ಸತ್ಯಾಗ್ರಹದ ತಾತ್ಕಾಲಿಕ ಉದ್ದೇಶ ವನ್ನು ಕುರಿತು ಎಲ್ಲರೂ ಸ್ಪಷ್ಟವಿರಬೇಕು. ಸತ್ಯಾಗ್ರಹ ನಡೆಯುತ್ತಿರುವ ವರೆಗೆ ಮತಭೇಧಗಳುಳ್ಳ ರಾಜಕೀಯ ವಾದ-ವಿವಾದಗಳನ್ನು ನಿಲ್ಲಿಸ ಬೇಕೆಂಬ ಬಗೆಗೆ ಎಲ್ಲರಲ್ಲಿ ಒಮ್ಮತವಿರಬೇಕು.

೪ ಆ ಆ ಅನುಯಾಯಿಗಳಿಗೆ ಮುಂದಾಳುಗಳು ಸೂಚಿಸಿದ ಕ್ರಮ ಗಳನ್ನು ಸ್ವಸಂತೋಷದಿಂದಲೂ ಜಿಗುಟುತನದಿಂದಲೂ ಪಾಲಿಸುವಷ್ಟು ವಿಶ್ವಾಸವಿರಬೇಕು. ಮುಂದಾಳುಗಳಿಗೆ ಆ ಆ ಅನುಯಾಯಿಗಳ ಮೇಲೆ ಇಂತಹದನ್ನು ಮಾಡಬೇಡಿರಿ ಎಂದು ಹೇಳಿದ್ದನ್ನು ಕೇಳುವಷ್ಟು ಪ್ರಭಾವವು ಇರಬೇಕು.

೫ ಅನುಯಾಯಿಗಳಿಗೆ ವಿರೋಧಿಪಕ್ಷವು ತಮ್ಮ ಮುಂದಾಳುಗಳ ಮೇಲೆ ಹೊರಿಸಬಹುದಾದ ಯಾವುದೆ ದೋಷಾರೋಪಗಳನ್ನು ನಂಬದಷ್ಟು ವಿಶ್ವಾಸವಿರಬೇಕು. ಅಂಥ ಯಾವ ದೋಷಾರೋಪದಿಂದಲೂ ಅನು ಯಾಯಿಗಳಲ್ಲಿ ಬುದ್ಧಿಭೇದವಾಗಕೂಡದು.

೬ ಸ್ವರಾಜ್ಯ ಇಲ್ಲವೆ ಹೊಣೆಗಾರ ರಾಜ್ಯಪದ್ಧತಿಯ ಬಗೆಗೆ ಸತ್ಯಾಗ್ರಹ ಹೂಡುವ ಮೊದಲು ಆದಷ್ಟು ಮಟ್ಟಿಗೆ ಜಾತಿ ಜಾತಿಗಳ ಪ್ರಶ್ನೆಗಳನ್ನು ನಿವಾರಿಸಿರುವುದು ಅಗತ್ಯ. ಆ ಪ್ರಶ್ನೆಗಳ ಕಡೆಗೆ ಬೆರಳು ತೋರಿಸಿ ಒಡಕು ಹುಟ್ಟಿಸಲು ವಿರೋಧಿಪಕ್ಷಕ್ಕೆ ಅವಕಾಶವಿರಕೂಡದು. (ಪರ ಕೀಯ ಆಡಳಿತವು ಇಲ್ಲಿರುವ ವರೆಗೆ ಜಾತಿ ಜಾತಿಗಳ ಪ್ರಶ್ನೆ ಬಿಡುವುದು ದುಸ್ಸಾಧ್ಯವು. ಆದುದರಿಂದ ಈ ತೊಡಕು ಸತ್ಯಾಗ್ರಹ ಹೂಡದಿರಲು ಕಾರಣವಾಗಲಾರದು ಎಂಬುದು ಗಾಂಧೀಜಿಯವರ ಈಗಿನ ಮತ.
—ಸಂಪಾದಕ)

೭ 'ಸತ್ಯಾಗ್ರಹಿಗೆ ಅವಶ್ಯವಿರುವ ಗುಣಗಳು' ಎಂಬ ಪ್ರಕರಣದಲ್ಲಿ ಹೇಳಿದ ಮಾತುಗಳಲ್ಲಿ ವಿಶ್ವಾಸವಿದ್ದರೂ ಅವುಗಳನ್ನು ಕೂಡಲೆ ಪೂರೈಸುವ ಸಾಮರ್ಥ್ಯವಿಲ್ಲದವರು ಸತ್ಯಾಗ್ರಹದ ತೀವ್ರವಾದ ಮತ್ತು ಹೊಣೆಗಾರ ಕಾರ್ಯಕ್ರಮಗಳಲ್ಲಿ ತೊಡಗಬಾರದು. ಆದರೆ ಅವರು ರಚನಾತ್ಮಕ ಕಾರ್ಯವನ್ನು ಚನ್ನಾಗಿ ನಡೆಸುವುದಲ್ಲದೆ ಅದರ ಸಂಪೂರ್ಣ ಹೊಣೆ ಹೊರಬೇಕು. ಜನರು ಅದಕ್ಕೆ ತಮ್ಮ ಪೂರ್ಣ ಬೆಂಬಲಕೊಡಬೇಕು.

೮ ಸತ್ಯ ಅಹಿಂಸೆಗಳ ಮೂಲಕ ಸ್ವರಾಜ್ಯ ದೊರಕಿಸಲು ಜಾತಿ ಜಾತಿಗಳಲ್ಲಿ ಐಕ್ಯ, ಅಸ್ಪೃಶ್ಯತಾನಿವಾರಣೆ, ವ್ಯಾಪಕ ಖಾದೀ ಪ್ರಚಾರ, ಮದ್ಯ ಮಾದಕ ಪದಾರ್ಥಗಳ ಪ್ರತಿಬಂಧ ಮುಂತಾದವುಗಳ ಬಗೆಗೆ ಜನಸಾಮಾನ್ಯರಲ್ಲಿ ದೊಡ್ಡ ಬಹುಮತವು ಅವಶ್ಯ. ಅದೇ ರೀತಿ ಸತ್ಯಾಗ್ರಹಮಾರ್ಗದ ಬಗೆಗೆ ಸಹಾನುಭೂತಿ ಇದ್ದವರಲ್ಲಿಯೂ ಪೂರ್ಣ ಒಮ್ಮತವು ಅವಶ್ಯ. ಅದರ ಹೊರತು ಸಾಮುದಾಯಿಕ ಸತ್ಯಾಗ್ರಹಕ್ಕೆ ಅನುಕೂಲ ಪರಿಸ್ಥಿತಿ ಇದೆ ಎಂದು ಹೇಳಲಿಕ್ಕಾಗದು. ಆ ವರೆಗೆ ನಿಜವಾದ ಸ್ವರಾಜ್ಯವು ಅಶಕ್ಯಪ್ರಾಯವೆ ಸರಿ.

೯ ಸತ್ಯಾಗ್ರಹದ ಯಾವುದೇ ಹೋರಾಟವನ್ನು ಹೂಡುವ ಮೊದಲು, ಅದೇ ರೀತಿ ಅದು ನಡೆದಿರುವಾಗ ಕೂಡ ವಿರೋಧಿ ಪಕ್ಷ, ಇಲ್ಲವೆ ಸಂಸ್ಥೆ, ಇಲ್ಲವೆ ಅಧಿಕಾರಿಗಳನ್ನು ಕುರಿತು ಜನಸಾಮಾನ್ಯರಲ್ಲಿ ತಿರಸ್ಕಾರದ ಭಾವನೆ ಇರಕೂಡದು. ಅಂಥ ತಿರಸ್ಕಾರದ ಭಾವನೆಯ ಭಾಷೆಯನ್ನು ಉಪಯೋಗಿಸಕೂಡದು. ಅಂಥ ಭಾಷೆ ಉಪಯೋಗಿಸುವಂಥ ಪ್ರಚಾರಕರನ್ನು ಅಂಕೆಯಲ್ಲಿಟ್ಟುಕೊಳ್ಳುವುದು ಸಾಧ್ಯವಾಗದೆ ಹೋದರೆ ಪರಿಸ್ಥಿತಿಯು ಸತ್ಯಾಗ್ರಹಕ್ಕೆ ಅನುಕೂಲವಿಲ್ಲ ಎಂದು ತಿಳಿಯಬೇಕು.

೧೦ ಗುಪ್ತ ವ್ಯವಸ್ಥೆ ಮಾಡದೆ ಸತ್ಯಾಗ್ರಹವು ನಡೆಯಬಲ್ಲದು ಎಂಬ ವಿಶ್ವಾಸವಿಲ್ಲದಿದ್ದರೆ ಅದು ಅನುಕೂಲ ಸ್ಥಿತಿಯಲ್ಲ ಎಂದು ತಿಳಿಯಬೇಕು.

೧೧ ಪರಿಸ್ಥಿತಿ ಅನುಕೂಲವಾಗುವ ವರೆಗೆ ಚತುರ್ವಿಧ (ಈಗ ಚತುರ್ದಶ ವಿಧ-ಸಂಪಾದಕ) ರಚನಾತ್ಮಕ ಕಾರ್ಯಕ್ರಮ ಮತ್ತು ಇತರ ಲೋಕಸೇವೆಯ ಕಾರ್ಯಕ್ರಮಗಳನ್ನು ಮಾಡುತ್ತಿರುವುದೇ ಸ್ವರಾಜ್ಯದ ಸಾಧನೆ ಎನ್ನಿಸುವದು. ಇಂಥ ಸಾಧನೆಯನ್ನು ವರ್ಷಗಟ್ಟಲೆ ಮಾಡುವ ಸಂದರ್ಭ ಬಂದರೂ ಅದರಲ್ಲಿ ಹಾನಿ ಯಾವುದೂ ಇಲ್ಲ. ಅದು ಪ್ರಗತಿಯೇ ಸರಿ. ಅದು ತುಚ್ಛವಾದ ಪ್ರಗತಿಯಲ್ಲ.

## ಪಂಚಮ ಖಂಡ

# ಸ್ವರಾಜ್ಯ

### ೧ ರಾಮರಾಜ್ಯ

೧ ರಾಮರಾಜ್ಯವೆ ಸ್ವರಾಜ್ಯದ ಆದರ್ಶ. ರಾಮರಾಜ್ಯವೆಂದರೆ ಧರ್ಮದ ರಾಜ್ಯ ಅಥವಾ ನ್ಯಾಯದ ಮತ್ತು ಪ್ರೇಮದ ರಾಜ್ಯ ಅಥವಾ ಅದು ಅಹಿಂಸಕ ಸ್ವರಾಜ್ಯ ಇಲ್ಲವೆ ಜನತೆಯ ಸ್ವರಾಜ್ಯ.

೨ ಜನರ ಸ್ವರಾಜ್ಯವೆಂದರೆ, ಪ್ರತಿಯೊಂದು ವ್ಯಕ್ತಿಯ ಸ್ವರಾಜ್ಯದ ಮೂಲಕ ಉಂಟಾದ ಪ್ರಜಾಸತ್ತಾತ್ಮಕ ರಾಜ್ಯ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ನಾಗರಿಕ ಧರ್ಮದ ಪರಿಪಾಲನೆ ಮಾಡುವುದರಿಂದ ಈ ಬಗೆಯ ರಾಜ್ಯವು ನಿರ್ಮಾಣವಾಗಬಲ್ಲುದು.

೩ (ಅ) ಈ ಬಗೆಯ ಸ್ವರಾಜ್ಯದಲ್ಲಿ ಯಾರಿಗೂ ತನ್ನ ಅಧಿಕಾರದ ಅಹಂಕಾರಪೂರ್ವಕ ಅರಿವು ಎಂಬುದು ಇರುವುದಿಲ್ಲ. ಅವಶ್ಯವಿದ್ದಾಗ ಆ ಆ ಅಧಿಕಾರವು ಅವನವನ ಕಡೆಗೆ ಬಂದೇ ಬರುವುದು. ಆಗ ಜನರು ಅವಶ್ಯವಾಗಿ ತಿಳಿದುಕೊಳ್ಳಬೇಕಾದುದು ತಮ್ಮ ಹಕ್ಕುಗಳನ್ನಲ್ಲ,ತಮ್ಮ ಧರ್ಮವನ್ನೂ, ಕರ್ತವ್ಯವನ್ನೂ. ಪ್ರತಿಯೊಂದು ಕರ್ತವ್ಯಪಾಲನೆಯ ಫಲವಾಗಿ ಯಾವುದೊಂದು ಹಕ್ಕು ತನ್ನಿಂದ ತಾನೆ ಪ್ರಾಪ್ತವಾಗುವುದು. ಕರ್ತವ್ಯಪಾಲನೆಯ ಮೂಲಕ ಪ್ರಾಪ್ತವಾದ ಹಕ್ಕುಗಳು ಅಥವಾ ಅಧಿಕಾರಗಳೇ ನಿಜವಾದ ಅಧಿಕಾರಗಳು.

(ಆ) ಸೇವಾಧರ್ಮವನ್ನು (ಲೋಕ ಸೇವೆ) ಪಾಲಿಸುವವನಿಗೇ ನಾಗರಿಕತ್ವದ ನಿಜವಾದ ಹಕ್ಕುಗಳು ಪ್ರಾಪ್ತವಾಗುವವು ಮತ್ತು ದಕ್ಕುವವು.

(ಇ) ಹಾಗೆಯೇ, ಸತ್ಯ ಮತ್ತು ಅಹಿಂಸಾಧರ್ಮವನ್ನು ಪಾಲಿಸುವವರಿಗೆ ಪ್ರತಿಷ್ಠೆ ದೊರಕುವುದು. ಆ ಮೂಲಕ ಅವರಿಗೆ ಅಧಿಕಾರಗಳೂ ಪ್ರಾಪ್ತವಾಗುವವು. ಅಂಥವರು ತಮ್ಮ ಅಧಿಕಾರಗಳನ್ನು ಸ್ವಾರ್ಥಕ್ಕಾಗಿ ಉಪಉಪಯೋಗಿಸುವ ಬದಲು ಸೇವೆಗಾಗಿ ಉಪಯೋಗಿಸುವರು.

೪ ರಾಮರಾಜ್ಯದಲ್ಲಿ ಒಂದುಕಡೆ ಅಪಾರವಾದ ಸಂಪತ್ತು ರಾಶಿರಾಶಿಯಾಗಿ ಬಿದ್ದಿರುವುದೂ ಇನ್ನೊಂದು ಕಡೆ ದೈನ್ಯದಿಂದ, ಹಸಿವೆಯಿಂದ ಸಾಯುವುದೂ ನಡೆಯಲಾರದು. ಅಲ್ಲಿ ಯಾರೂ ಹೊಟ್ಟೆಗೆ ಕೂಳಿಲ್ಲದೆ ಸಾಯಲಾರರು. ಆ ರಾಜ್ಯಕ್ಕೆ ಆಧಾರವು ಪಶುಬಲವಲ್ಲ; ಜನರಪ್ರೀತಿ, ಅವರ ಜ್ಞಾನಪೂರ್ವಕವಾದ ಸ್ವೇಚ್ಛೆಯು ಮತ್ತು ನಿರ್ಭಯದ ಸಹಕಾರದ ಅಡಿಗಲ್ಲು.

೫ ರಾಮರಾಜ್ಯದಲ್ಲಿ ಬಹುಸಂಖ್ಯಾಕರು ಅಥವಾ ಬಹುಸಂಖ್ಯ ಜಾತಿಯವರು ಅಲ್ಪಸಂಖ್ಯಾಕರನ್ನು ಅಥವಾ ಅಲ್ಪಸಂಖ್ಯ ಜಾತಿಯವರನ್ನು ಕುಗ್ಗುಬಡೆಯುವದಿಲ್ಲ; ಆದರೆ ಅಲ್ಪಸಂಖ್ಯಾಕರೂ ಬಹುಸಂಖ್ಯಾಕರಂತೆಯೆ ಸ್ವಾತಂತ್ರ್ಯಸುಖವನ್ನು ಅನುಭವಿಸುವರು ಮತ್ತು ಬಹುಸಂಖ್ಯ ಜಾತಿಯವರು ಅಲ್ಪಸಂಖ್ಯ ಜಾತಿಯವರ ಹಿತವನ್ನು ಸಾಧಿಸುವುದೆ ತಮ್ಮ ಕರ್ತವ್ಯವೆಂದು ತಿಳಿದುಕೊಳ್ಳುವರು.

೬ ರಾಮರಾಜ್ಯವು ಕೋಟಿಗಟ್ಟಲೆ ಜನರ ಸಲುವಾಗಿ ಮತ್ತು ಜನರ ಸುಖದ ಸಲುವಾಗಿ ನಡೆಯತಕ್ಕ ರಾಜ್ಯ. ಆ ರಾಜ್ಯಕಾರಭಾರದಲ್ಲಿ ಮುಖ್ಯ ಅಧಿಕಾರಪದವು ಪ್ರಜರ ನಿಜವಾದ ಸೇವಕನಿಗೇ ಸಿಕ್ಕುವುದು. ಅವನಿಗೆ ರಾಜನೆನ್ನಬಹುದು, ಅಧ್ಯಕ್ಷನೆನ್ನಬಹುದು, ಅಥವಾ ಮತ್ತಾವ ಹೆಸರಿನಿಂದಾದರೂ ಕರೆಯಬಹುದು. ಅವನು ಪ್ರಜರ ಸೇವಕನಿರುವುದರಿಂದಲೆ ಆ ಸ್ಥಾನವನ್ನು ಪಡೆಯುವನು. ಪ್ರಜರ ಪ್ರೀತಿಗೆ ಪಾತ್ರನಾಗಿದ್ದರೆ ಮಾತ್ರ ಆ ಅಧಿಕಾರ ಸ್ಥಾನದಲ್ಲಿ ಉಳಿಯುವನು ಮತ್ತು ಅವರ ಕಲ್ಯಾಣಕ್ಕಾಗಿಯೆ ಪ್ರಯತ್ನಿಸುವನು. ಅವನು ಪ್ರಜರ ಧನವನ್ನು ದುಂದುಗಾರಿಕೆಯಿಂದ ಹಾಳುಮಾಡುತ್ತ ಅಧಿಕಾರ ಬಲದಿಂದ ಪ್ರಜರನ್ನು ಪೀಡಿಸುತ್ತ ಇರಲರಿಯನು. ಅವನಿಗೆ ರಾಜನೆಂದು ಹೆಸರಿದ್ದರೂ ಓರ್ವ ಯತಿಯಂತೆ ಇರುವನು.

೭ ರಾಮರಾಜ್ಯದಲ್ಲಿ ಆಳಿಕೆ ಎಂಬದು ತೀರ ಕಡಿಮೆ. ಜನರು ತಾವೇ ಸೇರಿಕೊಂಡು ತಾವೇ ಹೆಚ್ಚಾಗಿ ರಾಜ್ಯಕಾರಭಾರವನ್ನು ನಡೆಸಿಕೊಳ್ಳುತ್ತಿರುವರು. ಜನರಿಗೆ ಶಿಕ್ಷೆಯ ಭೆಯವನ್ನು ತೋರಿಸಿ ಕಾಯಿದೆಗಳನ್ನು ಪಾಲಿಸಲು ಒತ್ತಾಯಪಡಿಸುವ ಕ್ರಮವು ಅಲ್ಲಿರಬಾರದು. ಪ್ರಜರು ತಮ್ಮಲ್ಲಿ ಸುಧಾರಣೆಗಳನ್ನು ಮಾಡಿಕೊಳ್ಳುವುದಕ್ಕಾಗಿ ಕೌನ್ಸಿಲ್ಲು-ಅಸೆಂಬ್ಲಿಗಳ ಹಾಗೂ ಅಧಿಕಾರಿಗಳ ಸಹಾಯವನ್ನು ಕೋರುತ್ತ ಕುಳಿತುಕೊಳ್ಳುವು

ದಿಲ್ಲ. ಜನರು ತಾವಾಗಿ ಮಾಡಿಕೊಂಡ ಸುಧಾರಣೆಗಳಿಗೆ ಅನುಕೂಲ ವಾಗುವಂತೆ ಕಾಯಿದೆಗಳನ್ನು ತಿದ್ದುವುದಕ್ಕಾಗಿ ಕೌನ್ಸಿಲ್ಲು-ಅಸೆಂಬ್ಲಿಗಳು ಯತ್ನಿಸುವವು, ವ್ಯವಸ್ಥೆಯನ್ನು ಸರಿಯಾಗಿ ಇಡುವುದಕ್ಕಾಗಿ ಅಧಿಕಾರಿ ಗಳು ಹೆಣಗಾಡುವರು.

೮ ರಾಮರಾಜ್ಯದಲ್ಲಿ ಒಕ್ಕಲುತನವು ಊರ್ಜಿತಸ್ಥಿತಿಯಲ್ಲಿರುವದು ಮತ್ತು ಇತರ ಉದ್ಯೋಗಗಳು ಇದನ್ನು ಹೊಂದಿಕೊಂಡೆ ನಡೆಯುತ್ತಿರುವವು. ಅನ್ನ ವಸ್ತ್ರಗಳ ವಿಷಯದಲ್ಲಿ ಪ್ರಜರು ಸ್ವತಂತ್ರರಿರುವರು. ಹೋರಿ-ಪಸು ಗಳ ಸ್ಥಿತಿಯು ಸಾಕಷ್ಟು ಚನ್ನಾಗಿರುವದರಿಂದ ಅಲ್ಲಿ ಆದರ್ಶ ಗೋರಕ್ಷಣೆಯು ಆಗುತ್ತಿರುವುದು.

೯ ರಾಮರಾಜ್ಯದಲ್ಲಿ ಸರ್ವಧರ್ಮಗಳೂ ಸರ್ವವರ್ಣಗಳೂ ಸರ್ವವರ್ಗ ಗಳೂ ಸಮಭಾವನೆಯಿಂದಲೂ ಸಖ್ಯಭಾವದಿಂದಲೂ ಇರುವವು. ಧಾರ್ಮಿಕ ಜಗಳಗಳು, ಕೀಳುತರದ ಸ್ಪರ್ಧೆಗಳು, ವಿರೋಧವನ್ನು ಬೆಳೆಸುವಂತಹ ಸ್ವಾರ್ಥ ಗಳು ಅಲ್ಲಿ ದೃಷ್ಟಿಗೋಚರವಾಗವು.

೧೦ ರಾಮರಾಜ್ಯದಲ್ಲಿ ಸ್ತ್ರೀಯರ ಮಟ್ಟವೂ ಪುರುಷರ ಮಟ್ಟವಷ್ಟೇ ಎತ್ತರವಾಗಿರುವದು.

೧೧ ರಾಮರಾಜ್ಯದಲ್ಲಿ ಯಾವನೂ ಸಿರಿವಂತಿಕೆಯ ಮೂಲಕ ಇಲ್ಲವೆ ಸೋಮಾರಿತನದ ಮೂಲಕ ನಿರುದ್ಯೋಗಿಯಾಗಿರುವದಿಲ್ಲ; ಪರಿಶ್ರಮ ಪಡು ತ್ತಿರುವ ಯಾವನೂ ಹಸಿವೆಯಿಂದ ಸಾಯಲಾರನು; ಅನುದ್ಯೋಗದ ಮೂಲಕ ಮನುಷ್ಯನು ಸೋಮಾರಿಯಾಗುವಂತಹ ಸಂದರ್ಭವು ಅಲ್ಲಿ ಬರು ವುದೇ ಇಲ್ಲ.

೧೨ ರಾಮರಾಜ್ಯದಲ್ಲಿ ಗೃಹಕಲಹವುಂಟಾಗುವುದಿಲ್ಲ, ಅದರಂತೆ ಪರ ರಾಜ್ಯದೊಡನೆ ಯುದ್ಧವೂ ಆಗುವುದಿಲ್ಲ. ಅದರಲ್ಲಿ ಪರರ ರಾಜ್ಯಗಳನ್ನು ಅಪಹರಿಸುವಂಥ, ಗೆಲ್ಲುವಂಥ, ಅವುಗಳ ವ್ಯಾಪಾರ ಉದ್ಯೋಗಗಳನ್ನು ಮತ್ತು ನೀತಿಯನ್ನು ನಾಶಪಡಿಸುವಂಥ ರಾಜಕೀಯಕ್ಕೆ ಎಡೆಯಿರುವದಿಲ್ಲ. ಆ ರಾಜ್ಯವು ಇತರರೊಡನೆ ಮಿತ್ರಭಾವದಿಂದಲೆ ವರ್ತಿಸುವುದು.

೧೩ ಆದ್ದರಿಂದ ರಾಮರಾಜ್ಯದಲ್ಲಿ ಸೈನ್ಯದ ವೆಚ್ಚವು ತೀರ ಕಡಿಮೆ.

೧೪ ರಾಮರಾಜ್ಯದ ಪ್ರಜರು ಬರಿಯ ಓದು-ಬರಹ ಬಲ್ಲವರಲ್ಲ, ನಿಜವಾದ ಶಿಕ್ಷಣವನ್ನು ಪಡೆದವರು. ಎಂದರೆ ಅವರಿಗೆ ಸಿಗುವ ಶಿಕ್ಷಣವು ಮುಕ್ತಿಯನ್ನು ಕೊಡುವಂತಹದು, ಮುಕ್ತಾವಸ್ಥೆಯಲ್ಲಿ ಸ್ಥಿರವಾಗಿರಲು

ಬರುವಂತಹದು.

೧೫ ರಾಮರಾಜ್ಯವೆಂಬುದು ಬರಿಯ ಒಂದು ದೇಶದ ಸಲುವಾಗಿ ಇಲ್ಲವೆ ಒಂದು ವರ್ಗದ ಪ್ರಜೆಗಳ ಸಲುವಾಗಿ ಆದರ್ಶಭೂತವಾದ ರಾಜ್ಯವಲ್ಲ. ಅದು ಇಡಿ ಜಗತ್ತಿಗೇ ಆದರ್ಶ ರಾಜ್ಯ. ರಾಮರಾಜ್ಯವು ಎಲ್ಲಿಯೋ ಒಂದು ಕಡೆ ಸ್ಥಾಪಿತವಾದರೂ ಅದರ ವರ್ಚಸ್ಸು ಎಲ್ಲೆಲ್ಲಿಯೂ ಕಂಡೇಕಾಣುವುದು.

೧೬ ಈ ಸ್ಥಿತಿಯು ಬಂತೆಂದರೆ ರಾಜ್ಯಗಳ ನಡುವೆ ಜಗಳದ ಕಾರಣವೇ ಉಳಿಯುವುದಿಲ್ಲ. ಅರ್ಥಾತ್ ಯುದ್ಧವೆಂಬ ವಸ್ತುವೆ ನಾಮಶೇಷವಾಗುವುದು. ಎಲ್ಲ ಬಗೆಯ ಮತಭೇದಗಳು, ಜಗಳಗಳು, ವಿರೋಧಗಳು ಅಹಿಂಸೆಯ ಮೂಲಕವೆ ಇಲ್ಲದಂತಾಗುವವು.

## ೨ ತಂತ್ರಸುಧಾರಣೆ ಮತ್ತು ರಾಜ್ಯಶಾಸನಸುಧಾರಣೆ

೧ ತಂತ್ರಸುಧಾರಣೆ ಮತ್ತು ರಾಜ್ಯಶಾಸನ ಸುಧಾರಣೆ ಇವು ಎರಡೂ ಒಂದೇ ಅಲ್ಲ.

೨ ಅಧಿಕಾರದ ಉಪಯೋಗವನ್ನು ಮಾಡುವಂಥವರು ಪ್ರಜರೊಡನೆ ನಡೆದುಕೊಳ್ಳುವ ಮನೋವೃತ್ತಿಯಲ್ಲಿ ಸಂಪೂರ್ಣ ಸುಧಾರಣೆ ಮಾಡುವುದೇ ತಂತ್ರಸುಧಾರಣೆ ಎನಿಸುವುದು.

೩ ರಾಜ್ಯಶಾಸನ ಸುಧಾರಣೆಯೆಂದರೆ ಕಾಯಿದೆಗಳನ್ನು ಮಾಡುವುದಕ್ಕಾಗಿಯೂ ರಾಜ್ಯದ ಬೇರೆ ಬೇರೆ ಖಾತೆಗಳ ಮೇಲ್ವಿಚಾರಣೆಯನ್ನು ನಡೆಸುವುದಕ್ಕಾಗಿಯೂ ಆ ಆ ಖಾತೆಗಳ ನೀತಿಯನ್ನು ನಿಶ್ಚಯಿಸುವುದಕ್ಕಾಗಿಯೂ ಎಷ್ಟು ಜನರು ಎಲ್ಲಿ ಸೇರಬೇಕು, ಅವರು ಯಾವರೀತಿ ವಿಷಯಗಳನ್ನು ಚರ್ಚಿಸಬೇಕು, ಅವರನ್ನು ಈ ಕಾರ್ಯಕ್ಕಾಗಿ ಯಾವ ರೀತಿಯಿಂದ ನಿಯಮಿಸಬೇಕು ಮುಂತಾದ ವಿಷಯಗಳ ವಿಚಾರ.

೪ ಸದ್ಯಕ್ಕೆ ಅವಶ್ಯವಿದ್ದುದಕ್ಕಿಂತ ಹೆಚ್ಚು ಮಹತ್ವವನ್ನು ರಾಜ್ಯಶಾಸನದ ಪ್ರಶ್ನೆಗೆ ಕೊಡಲಾಗಿದೆ. ಇದರಿಂದ ನಾವು ಮೂಲ ವಿಷಯವನ್ನು ಮೂಲೆಗೆ ತಳ್ಳಿ ರಾಜ್ಯದ ಬಾಹ್ಯ ರೂಪಕ್ಕೆ ಮಹತ್ವವನ್ನು ಕೊಟ್ಟು ಅದರ ವಿಚಾರಣೆಯಲ್ಲಿಯೆ ತೊಡಗಿದಂತಾಗಿದೆ.

೫ ರಾಜ್ಯಶಾಸನದ ಗಹನ ವಿಚಾರಗಳು, ಅದರ ಭಿನ್ನ-ಭಿನ್ನವಾದ ಯೋಜನೆಗಳಲ್ಲಿರುವ ಸೂಕ್ಷ್ಮ ಭೇದಗಳು ಮತ್ತು ಅವುಗಳ ಮಹತ್ವವು ನಾಡಿನ ಕೋಟಿಗಟ್ಟಲೆ ಜನರಿಗೆ ತಿಳಿಯುವವು ಎಂದು ಯಾರೂ ಆಶಿಸಬಾರದು. ಏಕೆಂದರೆ ಅವರು ಈ ವಿಷಯಗಳನ್ನು ಕುರಿತು ಆಸ್ಥೆಯಿಂದ

ಯೋಚನೆ ಮಾಡಲು ಮುಂದೆಬರುವುದಿಲ್ಲ.

೬ ತನ್ನ ದೇಶದ ರಾಜ್ಯಶಾಸನವು ರಾಜಸತ್ತಾತ್ಮಕವೊ ಪ್ರಜಾಸತ್ತಾತ್ಮಕವೊ ಸಾಮ್ರಾಜ್ಯದ ಒಂದು ಅಂಗವೊ ಸ್ವತಂತ್ರವಾದುದೊ ಎನ್ನುವದು, ರಾಜ್ಯಶಾಸನವು ಮತ್ತು ೬೦೦೦ ಪ್ರತಿನಿಧಿಗಳಿಂದ ನಡೆಯುತ್ತಿದೆಯೊ ೬೦೦ ಪ್ರತಿನಿಧಿಗಳಿಂದ ನಡೆಯುತ್ತಿದೆಯೊ ಅವರಲ್ಲಿ ಹಿಂದೂಗಳು ಹೆಚ್ಚಿರುವರೊ ಮುಸಲ್ಮಾನರು ಹೆಚ್ಚಿರುವರೊ ಎನ್ನುವದು, ಮತ್ತು ಈ ಎಲ್ಲ ವಿಷಯಗಳ ಮಹತ್ವವು ಅಶಿಕ್ಷಿತ ಹಳ್ಳಿಗರಿಗೆ ತಿಳಿಯುವುದು ಕಠಿಣವಿರುವದು. ಈ ವಿಷಯಗಳ ಚರ್ಚೆಯಲ್ಲಿ ತೊಡಗುವುದರಿಂದ ಅವರಿಗೆ ಬಹಳ ಲಾಭವೂ ಅಗುವಂತೆ ತೋರುವುದಿಲ್ಲ.

೭ ತಮ್ಮ ಹಳ್ಳಿಯ ಪ್ರಮುಖರು ಪೋಲೀಸಗೌಡ ಮತ್ತು ಶಾನಭೋಗರು ತಮ್ಮ ಅಧಿಕಾರದ ದರ್ಪವನ್ನು ತೋರಿಸುವರೊ, ಅಧಿಕಾರದ ಬೆದರಿಕೆ ಹಾಕಿ ತಮ್ಮಿಂದ ಲಂಚವನ್ನು ತೆಗೆದುಕೊಳ್ಳಲು ಬರುವರೊ, ಅಥವಾ ತಮ್ಮ ಮಿತ್ರರಂತೆ ಸಲಹೆಗಾರರಂತೆ ಸಂಕಟಗಳಲ್ಲಿ ಸಂಗಡಿಗರಂತೆ ಇರುವರೊ ಹೇಗೆ ? ಎಂಬುದೇ ಹಳ್ಳಿಗರಿಗೆ ಮಹತ್ವದ ಪ್ರಶ್ನೆಯಾಗಿರುವದು. ಇದಲ್ಲದೆ ತಾವು ಪ್ರಜರನ್ನು ತಮ್ಮ ಮನಸ್ಸಿಗೆ ಬಂದಂತೆ ನಡೆಸಿಕೊಳ್ಳಲಿಕ್ಕೆ ನಿಯಮಿಸಲ್ಪಟ್ಟ ದೊಡ್ಡ ಅಥವಾ ಚಿಕ್ಕ ಅಧಿಕಾರಿಗಳು ಎಂದು ತಿಳಿದುಕೊಳ್ಳುವರೊ ಅಥವಾ ತಾವು ಪ್ರಜರ ಸೇವಕರೆಂದು ತಿಳಿದುಕೊಳ್ಳುವರೊ ? –ಎಂಬ ಪ್ರಶ್ನೆಯೂ ಅವರಿಗೆ ಮಹತ್ವಪೂರ್ಣವಾದದ್ದು.

೮ ಅದೇ ರೀತಿ ತಮ್ಮ ಮೇಲೆ ಹೊರಿಸಲ್ಪಟ್ಟ ಕರದ ಹೊರೆಯು ಹೆಚ್ಚು ಭಾರವಾದದ್ದೊ ಹಗುರಾದದ್ದೊ, ಈ ಕರವು ತಮ್ಮಿಂದ ಯಾವ ರೀತಿಯಾಗಿ ಯಾವ ರೂಪದಲ್ಲಿ ಮತ್ತು ಯಾವ ಸಮಯದಲ್ಲಿ ವಸೂಲು ಮಾಡಲ್ಪಡುವುದು, ಮತ್ತು ಈ ಕರದ ಉಪಯೋಗವು ಯಾವ ಕೆಲಸಗಳಿಗಾಗಿ ಆಗುವುದು ?– ಎಂಬ ಪ್ರಶ್ನೆಯಂತೂ ಪ್ರಜರಿಗೆ ಅತ್ಯಂತ ಮಹತ್ವಪೂರ್ಣವಾದದ್ದು.

೯ ಈ ತರದ ಸುಧಾರಣೆಯು ರಾಜ್ಯಶಾಸನಕ್ಕೆ ಒಂದು ಪದ್ಧತಿಯು ಪ್ರಾಪ್ತವಾಗುತ್ತಲೆ ಆಗುವದಿಲ್ಲ; ಆದರೆ ಆ ಪದ್ಧತಿಯನ್ನು ಅಮಲಿನಲ್ಲಿ ತರುವ ಅಧಿಕಾರಿಗಳ ಧರ್ಮಬುದ್ಧಿಯಿಂದಲೂ ತಮ್ಮ ಮತವನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ಮಾಡಲಿಕ್ಕೆ ಪ್ರಜರಲ್ಲಿ ಅವಶ್ಯವಿದ್ದ ಪುರುಷಾರ್ಥದ ಶಕ್ತಿಯಿಂದಲೂ ಆಗುವದು. ರಾಜ್ಯಶಾಸನದ ಬಾಹ್ಯಸ್ವರೂಪವು

ಯಾವುದೆ ತರದ್ದಿರಲಿ, ಅಧಿಕಾರಿಗಳು ಧರ್ಮಬುದ್ಧಿಯುಳ್ಳವರಾಗಿ ಪ್ರಜರ ಸೇವಕರಾದರೆ ಮತ್ತು ಪ್ರಜರು ಪುರುಷಾರ್ಥಿಗಳಾಗಿದ್ದರೆ ಸರಕಾರದಿಂದ ಅನ್ಯಾಯವೂ ಬಲಾತ್ಕಾರವೂ ಬಹಳ ವೇಳೆಯ ವರೆಗೆ ಆಗಲರಿಯದು.

## ೩ ಜಾತಿಗಳಲ್ಲಿ ಐಕ್ಯ

೧ ದೇಶದ ಬೇರೆ ಬೇರೆ ಜಾತಿಗಳಲ್ಲಿ ಐಕ್ಯವೂ ಸಮಾಧಾನ ಶಾಂತಿಗಳೂ ಉಂಟಾಗುವ ವರೆಗೆ ಸ್ವರಾಜ್ಯವನ್ನು ದೊರಕಿಸುವುದೂ ಅದನ್ನು ಕಾಯ್ದಿಟ್ಟುಕೊಳ್ಳುವುದೂ ಅಶಕ್ಯ.

೨ ಈ ಐಕ್ಯಕ್ಕಾಗಿ ಸರ್ವ ಜಾತಿಗಳಲ್ಲಿ ಮುಕ್ತವಾದ ಭೋಜನದ ಮತ್ತು ವಿವಾಹದ ವ್ಯವಹಾರವು ಆಗಲೇಬೇಕು, ಅಥವಾ ಜಾತಿಜಾತಿಗಳ ನಡುವಿನ ಭಿನ್ನ ಭಿನ್ನ ಧರ್ಮ ಮತ್ತು ಸಂಸ್ಕೃತಿಗಳ ಭೇದವು ಇಲ್ಲದಂತಾಗಬೇಕು, ಯಾವುದಾದರೊಂದೇ ಧರ್ಮವನ್ನವಲಂಬಿಸಿಯಾಗಲಿ ಅಥವಾ ಧರ್ಮಗಳನ್ನೆಲ್ಲ ತೊರೆದಾಗಲಿ ಒಂದೇ ಸಂಸ್ಕೃತಿಯನ್ನು ನಿರ್ಮಿಸಬೇಕು, ಎನ್ನುವುದು ಅವಶ್ಯವಲ್ಲ ಮತ್ತು ಇದು ಇಷ್ಟವಾದುದೂ ಅಲ್ಲ. ಆದರೆ ಪ್ರತಿಯೊಂದು ಜಾತಿಯೂ ತನ್ನ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಸಹಿಷ್ಣುತೆಯ ಮೂಲಕ ಐಕ್ಯವನ್ನುಂಟುಮಾಡಿಕೊಳ್ಳಬೇಕು.

೩ ಆದರೆ ಈ ಐಕ್ಯಕ್ಕಾಗಿ ಬಹುಸಂಖ್ಯಾಕರಾದ ಜಾತಿಗಳು ಅಲ್ಪಸಂಖ್ಯಾಕರಾದ ಜಾತಿಗಳಿಗೆ ಅಭಯವನ್ನೀಯಬೇಕು. ನ್ಯಾಯ ಮತ್ತು ಸಾರ್ವಜನಿಕ ಹಿತಕ್ಕೆ ವಿರೋಧವಾಗದಂತಹ ರೀತಿಯಲ್ಲಿ ಅಲ್ಪಸಂಖ್ಯಾಕ ಜಾತಿಗಳಿಗೆ ಧರ್ಮ, ಭಾಷೆ, ಸಾಹಿತ್ಯ, ಜಾತಿಗಳ ಕಾಯಿದೆ, ನಡತೆ–ನಡಾವಳಿ, ಶಿಕ್ಷಣ, ಅರ್ಥಪ್ರಾಪ್ತಿ ಮುಂತಾದವುಗಳ ಬಗೆಗೆ ತೊಂದರೆಯಾಗಗೊಡದಿರುವುದೇ ಬಹುಸಂಖ್ಯಾಕ ಜಾತಿಗಳ ಗುರಿಯಾಗಿರಬೇಕು. ಬಹುಸಂಖ್ಯಾಕ ಜಾತಿಗಳು ತಮ್ಮ ಹಿತಚಿಂತಕವಿರುವವೆಂದು ಅಲ್ಪಸಂಖ್ಯಾಕ ಜಾತಿಗಳಲ್ಲಿ ನಂಬಿಗೆ ಹುಟ್ಟಿಸಬೇಕು.

೪ ಬಹುಸಂಖ್ಯಾಕ ಜಾತಿಗೆ ಅಲ್ಪಸಂಖಾಕ ಜಾತಿಯ ಭಯವುಂಟಾದರೆ ಅದು ಈ ಕೆಳಗಿನ ಎರಡರಲ್ಲಿ ಒಂದು ಸ್ಥಿತಿಯನ್ನು ಸೂಚಿಸುವುದು; (೧) ಬಹುಸಂಖ್ಯಾಕ ಜಾತಿಯ ಜೀವನದಲ್ಲಿ ಹುಳುಕು ಇರುವುದು ಇಲ್ಲವೆ ಅದು ಹೇಡಿಯಾಗಿರುವುದು ಮತ್ತು ಅಲ್ಪಸಂಖ್ಯಾಕ ಜಾತಿಗೆ ಪಶುಬಲದ ಹೆಮ್ಮೆ ಇರುವುದು.( ಈ ಹೆಮ್ಮೆಯು ರಾಜಸತ್ತೆಯಿಂದಾಗಲಿ ಸ್ವತಂತ್ರ

ವಾಗಿಯಾಗಲಿ ಇರಬಹುದು. )(೨) ಬಹುಸಂಖ್ಯಾಕ ಜಾತಿಯಿಂದ ಯಾವುದಾದರೊಂದುಅನ್ಯಾಯವು ಆಗುತ್ತಿರಬೇಕು, ಮತ್ತು ಅಲ್ಪಸಂಖ್ಯಾಕ ಜಾತಿಯಲ್ಲಿ ನಿರಾಶೆಯಿಂದ ಹಂಗುದೊರೆದು ಸಾಯುವವೃತ್ತಿಯು ಬಂದಿರಬೇಕು. ಇವೆರಡಕ್ಕೂ ಒಂದೇ ಒಂದು ಉಪಾಯವಿರುವದು; ಬಹು ಸಂಖ್ಯಾಕ ಜಾತಿಯು ಸತ್ಯಾಗ್ರಹದ ಸಿದ್ಧಾಂತಗಳ ಮೇರೆಗೆ ತನ್ನ ಜೀವನವನ್ನಿಡುವುದು, ಸತ್ಯಾಗ್ರಹಿಯಾಗಿ ಎಷ್ಟು ಬೆಲೆಯನ್ನಾದರೂ ಕೊಟ್ಟು ಅನ್ಯಾಯವನ್ನು ದೂರಮಾಡುವದು ತನ್ನ ಹೇಡಿತನವನ್ನು ಬಿಟ್ಟು ಅಲ್ಪಸಂಖ್ಯಾಕ ಸುಜಾತಿಯ ಪಶುಬಲವನ್ನು ಸತ್ಯಾಗ್ರಹದಿಂದ ಗೆಲ್ಲುವುದು.

೫ ಜಾತಿ ಜಾತಿಗಳಲ್ಲಿ ಜಗಳವುಂಟಾದಾಗ ಸರ್ಕಾರದ ಅಥವಾ ಕಾಯಿದೆಗಳ ಸಹಾಯವನ್ನು ಬೇಡುವುದೆಂದರೆ ಪ್ರಜರನ್ನು ನಿರ್ವೀರ್ಯರನ್ನಾಗಿ ಮಾಡಿದಂತೆಯೆ. ಎರಡು ಜಾತಿಗಳು ಜಗಳವಾಡಿ ಪರಸ್ಪರರ ನೆತ್ತರುಹರಿಸಿ ಬಿಟ್ಟು ಶಾಂತವಾಗಬೇಕು; ಆದರೆ ಒಂದು ಜಾತಿಯು ಇನ್ನೊದು ಜಾತಿಯ ವಿರುದ್ಧ ದೂರು ಹೇಳುವುದಕ್ಕಾಗಿ ಸರಕಾರದ ಕಡೆಗೆ ಓಡುವುದು ಸರಿಯಲ್ಲ. ಮೇಲಿನದು ಆದರ್ಶಭೂತವಾದ ರೀತಿಯಲ್ಲ. ಆದರೂ ಇದು ಪರದೇಶಿ ಸರಕಾರದ ಇಲ್ಲವೆ ಬಾಡಿಗೆ ಮನುಷ್ಯರ ಸಹಾಯದಿಂದ“ಶಾಂತಿ” ಯನ್ನು ನೆಲೆಗೊಳಿಸುವುದಕ್ಕಿಂತ ಕಡಿಮೆ ದುಃಖ ಕೊಡುವಂತಹದು.

೬ ಬಹುಸಂಖ್ಯಾಕ ಜಾತಿಯ ನಂಬಿಗೆಯ ವಿಷಯದಲ್ಲಿ ಅಲ್ಪಸಂಖ್ಯಾಕ ಜಾತಿಯ ಮನಸ್ಸಿನಲ್ಲಿ ಸಂದೇಹವಿರುವ ವರೆಗೆ ಬಹುಸಂಖ್ಯಾಕ ಜಾತಿಯು ಅಲ್ಪಸಂಖ್ಯಾಕ ಜಾತಿಯು ಬೇಡಿದ ಎಲ್ಲ ಜಾಮೀನು ಕೊಡುವುದು ಅಲ್ಪ ಸಂಖ್ಯಾಕ ಜಾತಿಯನ್ನು ವಶಪಡಿಸಿಕೊಳ್ಳುವ ಅತ್ಯಂತ ಉತ್ತಮವಾದ ಉಪಾಯ. ಯಾವ ಕರಾರುಗಳನ್ನು ಸ್ವೀಕರಿಸುವುದರಿಂದ ಅಲ್ಪಸಂಖ್ಯಾಕ ಜಾತಿಗೆ ನಿರ್ಭಯವೆನಿಸುವುದೊ ಅವೆಲ್ಲವುಗಳಿಗೆ ಸಾಧ್ಯವಿದ್ದಷ್ಟು ಹೆಚ್ಚಿಗೆ ಒಪ್ಪಿಗೆಯನ್ನೀಯುವುದೇ ಜಾಮೀನು ಎನಿಸುವುದು.

೭ ಅಲ್ಪಸಂಖ್ಯಾಕ ಜಾತಿಯ ಪ್ರಗತಿಯು ಬಹುಸಂಖ್ಯಾಕ ಜಾತಿಗಿಂತ ಕಡಿಮೆ ಪ್ರಗತಿ ಹೊಂದಿದಲ್ಲಿ ಮಾತ್ರ ಈ ನಿಯಮವು ಹತ್ತುವುದು. ಬಹುಸಂಖ್ಯಾಕ ಜಾತಿಗಿಂತ ಅಲ್ಪಸಂಖ್ಯಾಕ ಜಾತಿಯೇ ಹೆಚ್ಚು ಸಮೃದ್ಧಿಯುಳ್ಳದ್ದೂ ಬಲಿಷ್ಠವೂ ಇದ್ದಲ್ಲಿ ಬಹುಸಂಖ್ಯಾಕ ಜಾತಿಯಿಂದ ಹೆಚ್ಚಿನ ಮತ್ತು ವಿಶೇಷತರವಾದ ಅಧಿಕಾರವನ್ನು ಅಲ್ಪಸಂಖ್ಯಾಕ ಜಾತಿಗಾಗಿ ಬೇಡುವುದು ಸರಿಯಾದುದಲ್ಲ.

೮ ಅಲ್ಪಸಂಖ್ಯಾಕ ಜಾತಿಗೆ ಹೆಚ್ಚು ಅಧಿಕಾರ, ಧನ, ವಿದ್ಯೆ, ಅನುಭವ ಮುಂತಾದುವುಗಳಿದ್ದರೆ ಮತ್ತು ಇದರಿಂದ ಬಹುಸಂಖ್ಯಾಕ ಜಾತಿಗೆ ಭಯವೆನಿಸುತ್ತಿದ್ದರೆ ಅಲ್ಪಸಂಖ್ಯಾಕ ಜಾತಿಯು ಬಹು ಸಂಖ್ಯಾಕ ಜಾತಿಯ ಹಿತಕ್ಕಾಗಿ ಪ್ರಾಮಾಣಿಕವಾಗಿ ತನ್ನ ಶಕ್ತಿಯನ್ನು ಉಪಯೋಗಿಸಬೇಕು. ಹೀಗೆ ಮಾಡುವುದೆ ಅದರ ಧರ್ಮ. ಯಾವುದೆ ತರದ ಶಕ್ತಿಗಳು ಪರರ ಕಲ್ಯಾಣಕ್ಕಾಗಿ ಉಪಯೋಗವಾದರೆ ಮಾತ್ರ ಅವು ಪ್ರೋತ್ಸಾಹನಕ್ಕೆ ಪಾತ್ರವಾಗಿರುವವು. ಅವುಗಳ ದುರುಪಯೋಗವು ಆಗತೊಡಗಿದರೆ ಅವನ್ನು ನಷ್ಟಪಡಿಸುವುದು ಶ್ರೇಯಸ್ಕರವು ಮತ್ತು ಅವು ಒಂದಿಲ್ಲೊಂದು ದಿನ ನಾಶ ಹೊಂದೇ ಬಿಡುವವು.

೯ ಸಾರ್ವಜನಿಕ ಸಂಸ್ಥೆಗಳಲ್ಲಿ ಆಳುಗಳನ್ನು, ಅಧಿಕಾರಿಗಳನ್ನು ನಿಯಮಿಸುವಾಗ ಜಾತೀಯ ತತ್ವಗಳ ಕಡೆಗೆ ಲಕ್ಷ್ಯಗೊಡಬಾರದು. ಹೀಗೆ ಮಾಡಿದಲ್ಲಿ ಆ ಆ ಜಾತಿಗಳಲ್ಲಿ ಕೌಶಲ್ಯವು ನಷ್ಟವಾಗುವುದು. ಆದ್ದರಿಂದ ನಂಟುತನ, ಜಾತಿ, ಧರ್ಮ ಮುಂತಾದ ಯೋಚನೆ ಮಾಡದೆ, ಕೆಲಸ ಮಾಡುವ ಯೋಗ್ಯತೆ ಇದೆಯೋ ಇಲ್ಲವೋ ಎಂಬುದನ್ನಷ್ಟೆ ನೋಡಬೇಕು. ಆಳುಗಳು ಮುಂತಾದವರನ್ನು ನಿಯಮಿಸಿಕೊಳ್ಳುವಾಗಲೂ ಇದೇ ಧೋರಣವನ್ನಿಡಬೇಕು.

೧೦ ಈ ಸಿದ್ಧಾಂತಗಳು ಹಿಂದು–ಮುಸಲ್ಮಾನ–ಸೀಖ್ ಮುಂತಾದ ಜಾತಿಗಳಿಗೆ ಅನ್ವಯಿಸುವವು; ಇದೇ ರೀತಿ ಶ್ರೀಮಂತರು, ಬಡವರು; ಜಮೀನುದಾರರು, ಒಕ್ಕಲಿಗರು; ಒಡೆಯರು, ಆಳುಗಳು; ಬ್ರಾಹ್ಮಣರು, ಬ್ರಾಹ್ಮಣೇತರರು ಮುಂತಾದ ವರ್ಗಗಳಿಗೂ ಅನ್ವಯಿಸುವವು.

## ೪ ಬ್ರಿಟಿಷರೊಡನೆ ಸಂಬಂಧ

೧ ಬ್ರಿಟಿಷ್ ಸರಕಾರದೊಡನೆ ಹಿಂದುಸ್ತಾನದ ಸಂಬಂಧವು ಯಾವ ತರದ್ದಿರಬೇಕೆನ್ನುವುದನ್ನು ನಿಶ್ಚಯಿಸುವ ಹಕ್ಕು ಭಾರತೀಯರಿಗೆ ಇರುವುದು. ಈ ಅಧಿಕಾರವು ದೊರಕುವ ವರೆಗೆ ಹಿಂದುಸ್ತಾನಕ್ಕೆ ಸ್ವರಾಜ್ಯವು ಸಿಕ್ಕಿದಂತಾಗುವುದಿಲ್ಲ.

೨ ಈ ತರದ ಅಧಿಕಾರ ಪಡೆದ ಹಿಂದುಸ್ತಾನದ ಸ್ನೇಹಸಂಬಂಧವು ಬ್ರಿಟಿಷ್ ಸಾಮ್ರಾಜ್ಯದ ಸಂಗಡ ಇದ್ದರೆ ಅದರಿಂದ ಪೂರ್ಣ ಸ್ವರಾಜ್ಯಕ್ಕೆ ಕೊರತೆ ಉಂಟಾಗುವುದಿಲ್ಲವೆನ್ನಬಹುದು. ಬ್ರಿಟಿಷ್ ಸಾಮ್ರಾಜ್ಯದ

ಸಂಬಂಧವನ್ನು ನಿರ್ಣಯಿಸುವ ಹಕ್ಕು ಬಂದಾಗ ಹಿಂದುಸ್ತಾನಕ್ಕೆ ಸಮಾನವಾದ ಅಧಿಕಾರವಿರುವದು, ಸಾಮ್ರಾಜ್ಯದ ಭಿನ್ನ ಭಿನ್ನ ಅಂಗಗಳ ಮೇಲೆ ತನ್ನ ವಿಶಾಲದೃಷ್ಟಿಯ ಮತ್ತು ದೊಡ್ಡತನದ ಪ್ರಭಾವ ಬೀರಲು ಅಸುವು ಇರುವುದು.

೩ ಹೀಗೆ ಬ್ರಿಟಿಷ್ ಸಾಮ್ರಾಜ್ಯದೊಳಗಿನ ಎಲ್ಲ ಅಂಗಗಳೊಡನೆ ಹಿಂದುಸ್ತಾನದ ಸಂಬಂಧವು ಬೆಳೆದರೆ ಮತ್ತು ಹಿಂದುಸ್ತಾನವು ಸತ್ಯ ಮತ್ತು ಅಹಿಂಸೆಯನ್ನೆ ಸರ್ವತ್ರ ಹಬ್ಬಿಸುವ ನೀತಿಯುಳ್ಳದ್ದಾದರೆ ಬ್ರಿಟಿಷ್ ಸಾಮ್ರಾಜ್ಯವು ಜಗತ್ತಿಗೆ ಇಂದಿನಂತೆ ಭಯಾನಕವಾಗಿ ಉಳಿಯುವುದರ ಬದಲು ಪ್ರಜರಿಗೆಲ್ಲರಿಗೂ ಅಭಯವನ್ನೀಯುವಂತಹ ಸಾಮ್ರಾಜ್ಯವಾಗುವುದು.

೪ ಆದರೆ ಈ ಸ್ಥಿತಿಯು ಬರುವ ಮೊದಲು ಹಿಂದುಸ್ತಾನವು ಇನ್ನೂ ಬಹಳ ಮಾರ್ಗಕ್ರಮಣ ಮಾಡಬೇಕಾಗುವುದು. ತನ್ನ ಶಕ್ತಿಯನ್ನೂ ಸಂಸ್ಕೃತಿಯನ್ನೂ ಅರಿತುಕೊಂಡು ಆದರಲ್ಲಿ ಸಂಪೂರ್ಣ ಶ್ರದ್ಧೆಯಿಟ್ಟುಕೊಂಡು ಈ ಸ್ಥಿತಿಯನ್ನು ಸಾಧಿಸಿಕೊಳ್ಳಬೇಕು. ಎಲ್ಲಿಯ ವರೆಗೆ ಹಿಂದುಸ್ತಾನವು ನಿರ್ಬಲವೂ ಹೇಡಿಯೂ ಆಗಿರುವುದೊ ಅಲ್ಲಿಯ ವರೆಗೆ ಅದಕ್ಕೆ ಈ ತರದ ಸ್ಥಿತಿಯು ಬರುವುದು ಅಸಂಭವ.

೫ ಬ್ರಿಟಿಷ್ ಸಾಮ್ರಾಜ್ಯವು ಆಸುರೀತಂತ್ರವಾಗಿದೆ. ಇದರ ನಾಶವಾಗುವುದು ಯೋಗ್ಯವಾದದ್ದೆಂಬುದೂ ನಿಜವು. ಆದರೆ ಬ್ರಿಟಿಷ್ ಸಾಮ್ರಾಜ್ಯವೂ ಬ್ರಿಟಿಷ್ ಪ್ರಜರೂ ಒಂದೇ ಅಲ್ಲ, ಭಿನ್ನ ಭಿನ್ನವಾಗಿರುವರು. ಬ್ರಿಟಿಷ್ ಜನಾಂಗವು ಜಗತ್ತಿನ ಅಥವಾ ಯುರೋಪ್‌ಖಂಡದ ಬೇರೆ ಜನಾಂಗಗಳಿಗಿಂತ ಹೆಚ್ಚು ದುಷ್ಟವಾದದ್ದೂ ಸದ್ಗುಣರಹಿತವಾದದ್ದೂ ಅಲ್ಲ. ಆ ಜನಾಂಗದಲ್ಲಿಯೂ ಸನ್ಮಾನನೀಯ ಮತ್ತು ಅನುಕರಣೀಯವಾದ ಸದ್ಗುಣಗಳಿವೆ. ಆದರೆ ಇಂದಿನ ವಿಷಮ ಪರಿಸ್ಥಿತಿಯಲ್ಲಿ ಆ ಜನಾಂಗದೊಡನೆ ಇರುವ ನಮ್ಮ ವಿಷಮ ಸಂಬಂಧದಿಂದ ಅದರ ಗುಣಗಳನ್ನು ಸನ್ಮಾನಿಸಲು ನಾವು ಅಸಮರ್ಥರಾದುದು ದುರ್ಭಾಗ್ಯವೆ ಸರಿ.

೬ ಹಿಂದುಸ್ತಾನವು ಸ್ವರಾಜ್ಯವನ್ನು ಗಳಿಸಿಕೊಂಡ ಬಳಿಕ ಅವರಲ್ಲಿ ಇಂಗ್ಲಿಷರೂ ಭಾರತದ ಬೇರೆ ಜಾತಿಗಳಂತೆ ವಾಸಿಸಬಲ್ಲರು, ಹಿಂದುಸ್ತಾನದ ಬೇರೆ ಬೇರೆ ಜಾತಿಗಳಂತೆ ಅವರೂ ಭಾರತೀಯರಾಗಿ ದೇಶ

ಸೇವೆಯಲ್ಲಿ ತೊಡಗಬಲ್ಲರು, ಮತ್ತು ಕೊನೆಯ ಪ್ರಕರಣದಲ್ಲಿ ಹೇಳಿದ ಸಿದ್ಧಾಂತಗಳ ಮೇರೆಗೆ ಅವರ ಮತ್ತು ಹಿಂದುಸ್ತಾನದ ಬೇರೆ ಜಾತಿಗಳ ಸಂಬಂಧವಿರಬಲ್ಲುದು. ಆದರೆ ಇಂಗ್ಲಿಷರು ಪರದೇಶೀಯರಾಗಿಯೆ ವಾಸಿಸಲು ಬಯಸಿದರೆ ಅವರು ಹಿಂದುಸ್ತಾನಕ್ಕೆ ಅನುಕೂಲವಿರುವ ನಿಯಮಗಳಿಗೆ ಬದ್ಧರಾಗಿದ್ದುಕೊಂಡೆ ನೌಕರಿಯನ್ನು ಮಾಡಬಲ್ಲರು.

## ೫ ದೇಶೀ ರಾಜ್ಯಗಳು

೧ ಇಂದು ದೇಶೀರಾಜ್ಯಗಳು ಬದುಕಿಕೊಂಡಿರುವುದು ತಮ್ಮ ಪರಾಕ್ರಮದಿಂದ ಅಲ್ಲ, ಬ್ರಿಟಿಷ್ ರಾಜ್ಯದ ಆಶ್ರಯದಿಂದ. ಬ್ರಿಟಿಷ್ ರಾಃ ಅಳಿದರೆ ತಾವೂ ಬದುಕುವುದಿಲ್ಲವೆಂಬ ಹೆದರಿಕೆಯು ಇವುಗಳಿಗೆ ಇದ್ದೇ ಇದೆ. ಆದ್ದರಿಂದ ಅವು ಬ್ರಿಟಿಷ್ ರಾಜ್ಯದ ರಕ್ಷಣೆಗೆ ಬ್ರಿಟಿಷ್ ಪ್ರಜೆಗಿಂತಲೂ ಹೆಚ್ಚು ಆಸ್ಥೆಯನ್ನು ತೋರಿಸಲು ಹವಣಿಸುತ್ತಿವೆ.

೨ ಹೀಗೆ ಹೆಚ್ಚು ಆಸ್ಥೆಯನ್ನು ತೋರಿಸುವುದು ಹೆಚ್ಚು ಗುಲಾಮತನದ ದ್ಯೋತಕವಾಗಿದೆ. ಈ ಆಸ್ಥೆಯಲ್ಲಿ ಶುದ್ಧವಾದ ಭಕ್ತಿ ಇರುವುದಿಲ್ಲ, ತಪ್ಪುತಿಳಿವಳಿಕೆಯಿಂದ ಕೂಡಿದ ಅಶುದ್ಧವಾದ ಸ್ವಾರ್ಥವಿದೆ.

೩ ಆದ್ದರಿಂದ ದೇಶೀರಾಜ್ಯಗಳ ಪ್ರಜರ ಸ್ಥಿತಿಯು ಬ್ರಿಟಿಷ್ ಪ್ರಜರಿಗಿಂತ ಇಮ್ಮಡಿ ದಾಸ್ಯಪೂರ್ಣವಿರುವುದು. ಗುಲಾಮತನದಲ್ಲಿ ಗುಲಾಮರ ಹಿರಿಯನು ತನ್ನ ಒಡೆಯನಿಗಿಂತ ಹೆಚ್ಚು ಕಠೋರತೆಯನ್ನು ತೋರಿಸುವಂತೆ ದೇಶೀರಾಜರು ತಮ್ಮ ಪ್ರಜರೊಡನೆ ಹೆಚ್ಚು ಕಠೋರತೆಯಿಂದ ವರ್ತಿಸುವರು. ಇದೇನೂ ಆಶ್ಚರ್ಯದ ಸಂಗತಿಯಲ್ಲ.

೪ ಈ ಪರಿಸ್ಥಿತಿಯನ್ನು ಹೋಗಲಾಡಿಸಬೇಕಾದರೆ ಬ್ರಿಟಿಷ್ ಭಾರತೀಯರು ಮೊದಲು ಸ್ವರಾಜ್ಯವನ್ನು ಸಂಪಾದಿಸಬೇಕು. ಅದಕ್ಕೆ ಇದೇ ಉತ್ತಮ ಮಾರ್ಗ. ತಾವು ಸ್ವತಂತ್ರರಾಗುವ ವರೆಗೆ ಹಿಂದುಸ್ತಾನದ ಬ್ರಿಟಿಷ್ ಪ್ರಜೆಗಳಿಗೆ ದೇಶೀರಾಜ್ಯಗಳ ಪ್ರಜೆಗಳ ಸಂಕಟಗಳನ್ನು ನಿವಾರಿಸುವ ಶಕ್ತಿಯು ಬರುವುದಿಲ್ಲ. ತಮ್ಮ ಶಕ್ತಿ ಸಾಮರ್ಥ್ಯದಿಂದ, ಪುರುಷಾರ್ಥದಿಂದ ಬ್ರಿಟಿಷ್ ಹಿಂದುಸ್ತಾನದ ಪ್ರಜೆಗಳು ಸ್ವತಂತ್ರರಾದರೆ ಮಾತ್ರ ದೇಶೀರಾಜರ ಕಣ್ಣು ತೆರೆಯುವವು. ಆಗ ಬ್ರಿಟಿಷರ ಕತ್ತಿಯ ಮೊನೆಯಿಂದ ತಮ್ಮ ಪ್ರಜೆಗಳನ್ನು ನೆಲಕ್ಕೊತ್ತಿ ಅಲ್ಪ ಸ್ವಲ್ಪ ಅಧಿಕಾರವನ್ನೂ ವಿಷಯಸುಖವನ್ನೂ ಈಗಿನಂತೆ ಪಡೆಯುವದಕ್ಕಿಂತ ತನು–ಮನ–ಧನದಿಂದ ಪ್ರಜರ ಸೇವೆ ಮಾಡಿ, ಅವರ

ಸುಖದುಃಖಗಳಲ್ಲಿ, ಬಡತನದಲ್ಲಿ ಸಮಭಾಗಿಗಳಾಗಿ ಪ್ರೀತಿಯಿಂದ ಅವರ ಹೃದಯದ ಮೇಲೆ ಅಧಿಕಾರ ನಡೆಸುವುದರಲ್ಲಿ ಮಾತ್ರ ತಮ್ಮ ಹಿರಿದಾದ ಶ್ರೇಯಸ್ಸಿರುವುದೆಂದು ದೇಶೀರಾಜರ ಮನವರಿಕೆಯಾಗುವುದು.

೫ ಹೀಗೆ ಎಚ್ಚತ್ತ ದೇಶೀರಾಜರು ತಮ್ಮ ರಾಜ್ಯಗಳಲ್ಲಿ ತಾವೇ ಸುಧಾರಣೆಗಳನ್ನು ಮಾಡತೊಡಗುವರು. ಆಗ ಕೂಡ ಈ ದೇಶೀಯ ರಾಜರು ಎಚ್ಚರಾಗದಿದ್ದರೆ ಅವರ ರಾಜ್ಯಗಳು ಉಳಿಯಲಾರವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಎಂದರೆ ಈತರದ ಜಡಭರತರಾದ ರಾಜರುಗಳು ಸಹ ಸ್ವಚ್ಛಂದವಾಗಿ ಇರಲಾರರು; ಏಕೆಂದರೆ ಸ್ವಾತಂತ್ರ್ಯವನ್ನು ಪಡೆದ ಬ್ರಿಟಿಷ್ ಹಿಂದುಸ್ತಾನದ ಮತ್ತು ಸುಧಾರಿಸಿದ ದೇಶೀರಾಜ್ಯಗಳ ಒಟ್ಟು ಪ್ರಜಾಮತವು ಅತ್ಯಂತ ಬಲಶಾಲಿಯಾಗುವದು. ಆಗ ಅತಿ ದುಷ್ಟರು ಕೂಡ ತಮ್ಮ ದುಷ್ಟತನಕ್ಕೆ ಎಳ್ಳುನೀರು ಬಿಟ್ಟು ಬೆದರಿಕೊಂಡಿರಬೇಕಾಗುವದು; ಇಲ್ಲದಿದ್ದರೆ ಅವರೂ ಬದುಕಿರಲಾರರು.

೬ ಬಲಶಾಲಿಯಾದ ಮತ್ತು ಸ್ವತಂತ್ರವಿದ್ದ ಶಿಕ್ಷಿತ ಪ್ರಜರ ಸಂಘಟಿತ ಲೋಕಮತದಲ್ಲಿ ಎಷ್ಟು ಸಾಮರ್ಥ್ಯವಿರುವುದೆಂಬುದರ ಅನುಭವವು ನಮಗೆ ಸಾಮಾಜಿಕ ವ್ಯವಹಾರಗಳಲ್ಲಿ ಬಂದರೂ ಅದನ್ನು ನಾವು ಮರೆತುಬಿಟ್ಟಿರುವೆವು. ಪಶುಬಲದ ಆಧಾರದಿಂದಲೆ ಅಧಿಕಾರವನ್ನು ನಡೆಯಿಸುವ ಪ್ರಭುತ್ವಗಳು ಕೂಡ ಪ್ರಜಾಮತವು ಅತ್ಯಂತ ಸಾಮರ್ಥ್ಯವುಳ್ಳದ್ದಾಗುವ ವರೆಗೆ ಮಾತ್ರ ಆ ಪಶುಬಲದ ಸಹಾಯದಿಂದ ಬದುಕಿಕೊಂಡಿರುವವು. ಅತ್ಯಂತ ಬಲಿಷ್ಠ ಪ್ರಜಾಮತದ ಎದುರಿನಲ್ಲಿ ಅತ್ಯಂತ ವಿಶಾಲವಾದ ಬಲಶಾಲಿಯಾದ ಸಾಮ್ರಾಜ್ಯವೂ ಕತ್ತನ್ನು ಬಗ್ಗಿಸಬೇಕಾಗುವುದು.

೭ ಪ್ರಜಾಮತವು ಅತ್ಯಂತ ಬಲಿಷ್ಠವಾಗಿರುವುದೆಂಬುದಕ್ಕೆ ಅದರ ಕೈಯೊಳಗಿನ ಒಂದೇ ಒಂದಾದ ಅಜೇಯ ಸತ್ಯಾಗ್ರಹ-ಶಸ್ತ್ರವೇ ಗುರುತು. ತನ್ನ ಮತಕ್ಕಾಗಿ ಪ್ರಾಣಾರ್ಪಣ ಮಾಡಲು ಸಿದ್ಧವಿದ್ದ ಪ್ರಜೆಯ ಎದುರಿನಲ್ಲಿ ಮಹಾ ಗರ್ವಿಷ್ಟರಾದ ಮುಕುಟಧಾರಿಗಳಿಗೂ ತಲೆಬಗ್ಗಿಸದಿದ್ದರೆ ನಡೆಯುವಂತಿಲ್ಲ.

೧ ಸ್ವರಾಜ್ಯವನ್ನು ಪಡೆದ ಮೇಲೆ ತನ್ನ ದೇಶವನ್ನು ಸಂರಕ್ಷಿಸಿಕೊಳ್ಳುವಷ್ಟು ಬಲವು ಹಿಂದುಸ್ತಾನಕ್ಕೆ ಇಲ್ಲವೆನ್ನುವುದು ತೀರ ತಪ್ಪು.

೨ ಅಹಿಂಸಾಧರ್ಮವನ್ನು ಚನ್ನಾಗಿ ಅರಿತುಕೊಂಡು ಅದರಂತೆ ನಡೆಯುವ ಜನಾಂಗಕ್ಕೆ ದೇಶವನ್ನು ರಕ್ಷಿಸುವುದಕ್ಕಾಗಿ ತೋಪು-ತುಪಾಕಿ ಮುಂತಾದ ಸೈನಿಕ ಸರಕುಗಳ ಅವಶ್ಯಕತೆಯೇ ಇಲ್ಲ. ಆದರೆ ಈ ಸ್ಥಿತಿಯು ಸದ್ಯಕ್ಕಂತೂ ಬರಿಯ ಊಹೆಗೆ ಒಳಪಟ್ಟದ್ದು.

೩ ಆದರೂ ಸ್ವತಂತ್ರವಾದ ಮತ್ತು ಅನ್ಯ ರಾಜ್ಯಗಳ ಕೂಡ ಸಹಕಾರದಿಂದ ವರ್ತಿಸುವ, ಮತ್ತು ಪರರಾಷ್ಟ್ರಗಳ ಉಪಜೀವನದ ವಸ್ತುಗಳ ಮೇಲೆ ಆಕ್ರಮಣ ಮಾಡಬಾರದೆಂಬ ಧೋರಣವುಳ್ಳ ಹಿಂದುಸ್ತಾನಕ್ಕೆ ಈಗಿನಂತಹ ಮತ್ತು ಈಗಿನಷ್ಟು ಸೈನ್ಯವೂ ಸೈನ್ಯದ ಸರಕುಗಳೂ ಬೇಕಾಗುವುದಿಲ್ಲ.

೪ ಸ್ವರಾಜ್ಯದಲ್ಲಿ, ವಿಶಿಷ್ಟ ನಿಯಮಗಳಿಗೆ ಒಳಗಾಗಿ ಮಿತವಾಗಿ ಶಸ್ತ್ರಾಸ್ತ್ರಗಳನ್ನು ಇಟ್ಟುಕೊಳ್ಳುವ ಹಕ್ಕು ಪ್ರತಿಯೊಬ್ಬ ಯೋಗ್ಯ ಮನುಷ್ಯನಿಗೆ ಉಂಟು. ಸ್ವರಾಜ್ಯದ ಕಾರಭಾರವು ತನ್ನ ಮೇಲೆ ಪರರು ಆಕ್ರಮಣ ಮಾಡುವರೆಂಬ ಹೆದರಿಕೆಯಿಂದಲೆ ನಡೆಯುವುದೆಂದು ತಿಳಿಯಕೂಡದು. ಆದರೆ ಮುಂದೆ ಅಕಸ್ಮಾತ್ ಆಗುವ ಆಕ್ರಮಣವನ್ನು ಅಥವಾ ಬರುವ ಸಂಕಟಗಳನ್ನು ಮೊದಲಿಗೇ ದೂರೀಕರಿಸುವುದಕ್ಕಾಗಿ ಬೇಕಾಗುವಷ್ಟು ದಂಡನ್ನೂ ಯುದ್ಧ ಸಾಮಗ್ರಿಗಳನ್ನೂ ಹಿಂದುಸ್ತಾನವು ಸಂಗ್ರಹಿಸಿ ಇಟ್ಟುಕೊಂಡಿರುವದು. ಮುಂದೆ ಸಂದರ್ಭ ಬಂದರೆ ಇಡೀ ದೇಶವನ್ನೇ ಕ್ಷಣದಲ್ಲಿ ಸಜ್ಜುಗೊಳಿಸುವ ಆಶೆಯನ್ನಿಟ್ಟುಕೊಂಡಿರುವುದು.

೫ ಕಾಯಿದೆಯ ಮತ್ತು ಅಧಿಕಾರಿಗಳ ದಾರಿಯನ್ನು ಕಾಯದೆ ಜನರು ತಾವೇ ಜಾಗ್ರತರಾಗಿ ತಮ್ಮ ದೇಶದ ಕಾರಭಾರವನ್ನು ಸಾಗಿಸಿಕೊಂಡು ಹೋಗುವಂತಹ ಶಿಕ್ಷಣವನ್ನು ಕೊಡಿಸುವ ಏರ್ಪಾಡು ಮಾಡಿದರೆ ಮತ್ತು ಅದರಲ್ಲಿ ಯಶಸ್ಸು ದೊರೆತರೆ ಜನತೆಯ ಸೇವೆಯನ್ನೆ ತಮ್ಮ ಜೀವನದ ಗುರಿಯಾಗಿಟ್ಟುಕೊಂಡ ಮತ್ತು ಜನತೆಯ ಸುಖದ ಸಲುವಾಗಿ ತಮ್ಮ ಸರ್ವಸ್ವವನ್ನೂ ಸೂರೆ ಮಾಡಲು ಸಿದ್ಧರಾದ ಸ್ವಯಂಸೇವಕರ ಅನೇಕ ಮಂಡಲಗಳು ಹುಟ್ಟುವವು. ಈ ಮಂಡಲಗಳು ಕೇವಲ ಯುದ್ಧಪ್ರಿಯ ಕ್ಷತ್ರಿಯ ವರ್ಗಗಳಾಗುವ ಬದಲು ಪ್ರಜೆಗಳಿಗೆ ಶಿಕ್ಷಣವನ್ನು ಕೊಟ್ಟು ಅವರಲ್ಲಿ ಒಂದು ಸುವ್ಯವಸ್ಥೆಯನ್ನು ತರುವಂಥ, ಪ್ರಜೆಗಳ ವ್ಯವಹಾರವು ಸರಾಗವಾಗಿ ಸಾಗುವಂತೆ ಮಾಡಿ ಅವರನ್ನು ಸುಖಿಗಳನ್ನಾಗಿಯೂ ಸಂತೋಷಪಡುವಂತೆಯೂ ಮಾಡುವಂಥ ವರ್ಗವಾಗುವವು. ದೇಶಕ್ಕೆ ಏನಾದರೂ ಸಂಕಟ ಒದಗಿದರೆ ಮೊದಲಿನ ಪೆಟ್ಟು ಬೀಳುವದು ಮಂಡಲಗಳಿಗೇ.

೬ ತನ್ನ ದೇಶದ ಸೈನ್ಯಕ್ಕೆ ತಾನೇ ಅಂಜುವಂತಹ ಸ್ಥಿತಿ ಇದ್ದರೆ ಮತ್ತು ತಮ್ಮ ಮೇಲೆಯೆ ಸೈನ್ಯದ ಕೋವಿಗಳು ಹಾರುವವೆಂದು ಪ್ರಜರಿಗೆ ಎನಿಸಿದರೆ ಅದು ಸ್ವರಾಜ್ಯ ಅಥವಾ ರಾಮರಾಜ್ಯವಲ್ಲ, ರಾಕ್ಷಸೀ ರಾಜ್ಯ. ಆ ರಾಜ್ಯವನ್ನು ವಿರೋಧಿಸುವುದೂ ಸತ್ಯಾಗ್ರಹಿಯ ಧರ್ಮವೆ ಆಗುವುದು.

೭ ಯಾವ ಸೈನಿಕನು ಜನತೆಯ ಸ್ನೇಹಿತನೂ ತನ್ನ ಪ್ರಾಣವನ್ನಿತ್ತು ಅವರನ್ನು ಸಂಕಟಗಳಿಂದ ಕಾಪಾಡುವವನೂ ಇರುವನೊ ಅವನೇ ಕ್ಷತ್ರಿಯನು. ಯಾವನು ಪ್ರಜರನ್ನು ಹೆದರಿಸುವವನೂ ಶಾರೀರಿಕ ಬಲದಿಂದ ಇಲ್ಲವೆ ಶಸ್ತ್ರ ಬಲದಿಂದ ಪೀಡಿಸುವವನೂ ಇರುವನೊ ಅವನು ಕೊಳ್ಳೆಗಾರನು. ಇಂಥ ಸೈನಿಕನಿಗೆ ಆಶ್ರಯಕೊಟ್ಟ ರಾಜ್ಯವು ಕೊಳ್ಳೆಗಾರ ರಾಜ್ಯವೆನಿಸುವುದು.

*ಟಿಪ್ಪಣಿ: ಇದು ಕಾಂಗ್ರೆಸ್ಸಿನ ಇಂದಿನ ಭೂಮಿಕೆ. ಗಾಂಧೀಜಿಯವರು ಸತ್ಯಾಗ್ರಹದ ಮೂಲಕವಾಗಿಯೇ ಸಂರಕ್ಷಣೆ ಮಾಡಿಕೊಳ್ಳಬೇಕೆನ್ನುವರು.

# ಷಷ್ಠ ಖಂಡ

## ವಾಣಿಜ್ಯ

### ಪಾಶ್ಚಿಮಾತ್ಯ ಅರ್ಥಶಾಸ್ತ್ರ

೧ ಪಾಶ್ಚಿಮಾತ್ಯ ಅರ್ಥಶಾಸ್ತ್ರವು ಸರ್ವೋಚ್ಚ ವಿಚಾರದೃಷ್ಟಿ ಬಿಂದುಗಳಿಂದ ರಚಿಸಲ್ಪಟ್ಟಿದ್ದೇನೂ ಅಲ್ಲ. ಆದ್ದರಿಂದ ಅದು ಅರ್ಥಶಾಸ್ತ್ರವಲ್ಲ, ಅನರ್ಥಶಾಸ್ತ್ರ. ಅದರ ದೃಷ್ಟಿಕೋನವು ತಪ್ಪಿರುವುದು.

೨ ಕೆಳಗೆ ಕಾಣಿಸಿದವೇ ಈ ತಪ್ಪುದೃಷ್ಟಿಬಿಂದುಗಳು:-

(೧) ನಾನಾತರದ ಭೋಗಗಳನ್ನು ಹೆಚ್ಚಾಗಿ ಭೋಗಿಸುವುದೆ ಸಂಸ್ಕೃತಿಯ ಪ್ರಾಣವೆಂದು ಇದು ತಿಳಿದಿರುತ್ತದೆ.

(೨) ಇದು ತನ್ನಲ್ಲಿ ಸರ್ವ ದೇಶಗಳಿಗೂ ಸರ್ವ ಕಾಲದಲ್ಲೂ ಉಪಯೋಗವಾಗುವಂಥ, ಆಚರಣೆಯಲ್ಲಿ ತರಬಲ್ಲಂಥ ಸಿದ್ಧಾಂತಗಳ ಸಾರವನ್ನು ತೆಗೆದುಕೊಂಡಿರುವುದಾಗಿ ಹೆಮ್ಮೆಪಡುತ್ತದೆ; ಆದರೆ ನಿಜವಾಗಿಯೂ ಇದರ ಹುಟ್ಟು ಯುರೋಪುಖಂಡದ ತಂಪು ಮತ್ತು ಒಕ್ಕಲುತನಕ್ಕಾಗಿ ಕಡಿಮೆ ಅನು

ಕೂಲತೆಗಳುಳ್ಳ ಚಿಕ್ಕ-ಚಿಕ್ಕ ಅನೇಕ ದೇಶಗಳಲ್ಲಿ ಬಂದ ಅನುಭವದಿಂದ ಜನಸಂಖ್ಯೆಯು ಹೆಚ್ಚಾಗಿದ್ದರೂ ಹಿಡಿತುಂಬ ಜನರ ಇಲ್ಲವೆ ಅತ್ಯಂತ ಕಡಿಮೆ ಜನವಸತಿಯಿದ್ದ ಬೆಳೆಯುಳ್ಳ ಭೂಮಿಯಿದ್ದ ದೊಡ್ಡ ಖಂಡಗಳಲ್ಲಿ ಬಂದ ಅನುಭವದಿಂದ ಆಗಿದೆ.

(೩) (ಅ) ಇದು ವ್ಯಕ್ತಿಗೆ, ಒಂದು ವರ್ಗಕ್ಕೆ, ಬಹಳವಾದರೆ ತನ್ನ ಚಿಕ್ಕ ದೇಶಕ್ಕೆ ಮಾತ್ರ ಆರ್ಥಿಕ ಲಾಭವನ್ನು ಮಾಡಿಕೊಡುವುದೆ, ತನ್ನ ದೇಶದ ಹಿತವನ್ನು ಬಯಸುವುದೆ ತನ್ನ ನೀತಿಯು ಮತ್ತು ಇದೇ ಅರ್ಥಶಾಸ್ತ್ರದ ಅಚಲವಾದ ಸಿದ್ಧಾಂತವು ಎಂದು ಹೇಳುತ್ತದೆ; ಅದರಂತೆ ಎಲ್ಲರೂ ವರ್ತಿಸ ಬೇಕೆಂದೂ ಒತ್ತಾಯಪಡಿಸುತ್ತದೆ. ಹಾಗೂ (ಆ) ಇದು ಈಗಲೂ ಪ್ರಾಚೀನ ಕಾಲದಂತೆ ಬೆಲೆಯುಳ್ಳ ಧಾತುಗಳಿಗೆ ಮಿತಿಮೀರಿದ ಮಹತ್ವ ವನ್ನು ಕೊಡುತ್ತದೆ. ಈ ಮಾತುಗಳನ್ನೆಲ್ಲ ಈ ಶಾಸ್ತ್ರವು ತನ್ನ ಪುಸ್ತಕಗಳಲ್ಲಿ ಖಂಡಿಸಿದರೂ ಯೋಜನೆಯಲ್ಲಿಯೂ ವ್ಯವಹಾರದಲ್ಲಿಯೂ ಇನ್ನೂ ಆ ನೀತಿಯನ್ನೆ ಅವಲಂಬಿಸುತ್ತದೆ.

(೪) ಅರ್ಥಧರ್ಮ ಮತ್ತು ನೀತಿಧರ್ಮದಲ್ಲಿದ್ದ ಸಂಬಂಧವನ್ನು ಕಡಿದು ಹಾಕಿದ್ದರಿಂದ ಈ ಶಾಸ್ತ್ರವು ದುಡ್ಡಿಗಿಂತಲೂ ಹೆಚ್ಚು ಶ್ರೇಷ್ಠವಾದ ಜೀವನದ ವಿಷಯಗಳನ್ನು ತುಚ್ಛೀಕರಿಸುವ ರೂಢಿಯನ್ನು ಕಲಿಸಿದೆ.

೩. ಇವುಗಳ ಪರಿಣಾಮವು ಇಂತಾಗಿದೆ:

(೧) ಈ ಅರ್ಥಶಾಸ್ತ್ರವು ಯಂತ್ರ-ಪಟ್ಟಣ ಹಾಗೂ ( ಒಕ್ಕಲುತನ ಕ್ಕಿಂತಲೂ ) ಉದ್ಯೋಗಗಳ ಕುರುಡು ಪೂಜಾರಿಯಾಗಿದೆ.

(೨) ಜನತೆಯ ವರ್ಗ-ವರ್ಗಗಳಲ್ಲಿ ಮತ್ತು ದೇಶ-ದೇಶಗಳಲ್ಲಿ ಏಕಭಾವ ವನ್ನುಂಟುಮಾಡದೆ ವಿರೋಧವನ್ನು ಹೆಚ್ಚಿಸಿದೆ, ಮತ್ತು ಸರ್ವೋ ದಯವನ್ನು ಸಾಧಿಸದೆ ಸ್ವಲ್ಪ ಜನರಿಗೆ ಅಲ್ಪ ಸಮಯದ ವರೆಗೆ ಮಾತ್ರ ಲಾಭವನ್ನು ದೊರಕಿಸಿಕೊಡುವ ವ್ಯವಸ್ಥೆ ಮಾಡಿದೆ.

(೩) ಹಿಂದುಳಿದವೆಂದು ಎನಿಸುವರಾಷ್ಟ್ರಗಳಲ್ಲಿ ಪ್ರವೇಶಮಾಡಿ ಅಲ್ಲಿಯ ಧನವನ್ನು ಅಪಹರಿಸಿ, ಅಲ್ಲಿಯ ಜನರನ್ನು ಚಟಗಳ ದಾಸರನ್ನಾಗಿ ಮಾಡಿ ಅವರ ನೀತಿಯನ್ನು ಕೆಡಿಸಿ ತನ್ನ ಸಮೃದ್ಧಿಯ ಮಾರ್ಗವನ್ನು ಶೋಧಿಸುತ್ತಿದೆ.

(೪) ಈ ಅರ್ಥಶಾಸ್ತ್ರದಂತೆ ನಡೆಯುವುದರಿಂದ ಪ್ರಜರು ಪಶುಬಲದ ಸಹಾಯದಿಂದ ಜೀವಿಸುವಂತಾಗುತ್ತದೆ.

(೫) ಈ ಶಾಸ್ತ್ರವು ಶಾಸ್ತ್ರೀಯ ಸಿದ್ಧಾಂತಗಳ ಹೆಸರಿನಲ್ಲಿ ಹುಟ್ಟಿಸಿದ ಭ್ರಾಮಕ ಕಲ್ಪನೆಗಳು ಧಾರ್ಮಿಕ ಇಲ್ಲವೆ ಭೂತಾದಿ ಭ್ರಮೆಗಳಿಗಿಂತಲೂ ಕಡಿಮೆ ಬಲಿಷ್ಠವೇನೂ ಅಲ್ಲ.

## ೨ ಭಾರತೀಯ ಅರ್ಥಶಾಸ್ತ್ರ

೧ ಕೆಲವು ವಿಷಯಗಳನ್ನು ಒಂದು ಬದಿಗಿಟ್ಟರೂ ಹಿಂದುಸ್ತಾನವು ಅತ್ಯಂತ ವಿಶಾಲವಾದ ದೇಶ. ಇದರ ಹವೆಯೂ ನೀರೂ ನಾನಾ ಬಗೆಯದು, ಭೂಮಿಯು ನಾನಾ ಪ್ರಕಾರದ್ದು, ಸಾವಿರಾರು ವರ್ಷಗಳ ಬಳಿಕೆಯಿಂದ ಹಾಗೂ ಜನತೆಯ ಬಡತನದಿಂದ ಅದರ ಬೆಳೆವಣಿಗೆಯು ಕಡಿಮೆಯಾಗಿಬಿಟ್ಟಿದೆ. ಮಾನವ ಜಾತಿಯ ೧|೫ ಜನತೆಯು ಭಾರತದಲ್ಲಿದ್ದು ಅದು ಚಿಕ್ಕ ಚಿಕ್ಕ ಹಳ್ಳಿಗಳಲ್ಲಿ ಹರಡಿಕೊಂಡಿದೆ. ಇದರಲ್ಲಿ ನಾನಾ ಧರ್ಮ-ಸಂಸ್ಕೃತಿ ಸ್ವಭಾವ ಹಾಗೂ ನಡತೆ ನಡಾವಳಿಯ ವೈವಿಧ್ಯವುಂಟು. ಪಶ್ಚಿಮದ ಅರ್ಥಶಾಸ್ತ್ರದ ಗುಟ್ಟುಗುರಿಗಳನ್ನು ಮುಂದಿಟ್ಟುಕೊಂಡು ಭಾರತೀಯ ಅರ್ಥಶಾಸ್ತ್ರದ ವಿಚಾರ ಮಾಡಬಾರದೆನ್ನಲು ಈ ಮೇಲ್ಕಂಡ ಕಾರಣಗಳು ಸಾಕಷ್ಟಿರುವವು.

೨ ಭಾರತೀಯ ಅರ್ಥಶಾಸ್ತ್ರದಲ್ಲಿ ಈ ಮುಖ್ಯ ಗುಣಗಳಿರಬೇಕು:

(೧) ಇದರ ಸಿದ್ಧಾಂತಗಳು ಹಳ್ಳಿಗಳ ದೃಷ್ಟಿಯಿಂದ ಯೋಚಿಸಲ್ಪಟ್ಟಿರಬೇಕು.

(೨) ಇದು ಒಕ್ಕಲುತನ ಮತ್ತು ಉದ್ಯೋಗಗಳಲ್ಲಿ ಬಾಂಧವ್ಯವನ್ನು ಸ್ಥಾಪಿಸಬೇಕು. ಒಕ್ಕಲುತನ ಮತ್ತು ಉದ್ಯೋಗ ಇವು ಎರಡೂ ಒಂದೇ ನೆರಳಿನಲ್ಲಿ ಬೆಳೆಯಬೇಕು.

(೩) ನಾನಾ ಧರ್ಮ ಸಂಸ್ಕಾರ ಮತ್ತು ಸ್ವಭಾವಗಳ ಜನರಲ್ಲಿ ಮತ್ತು ನಾನಾ ವರ್ಗಗಳಲ್ಲಿ ಅನುಚಿತವಾದ ಹೋರಾಟ–ಮೇಲಾಟ, ಕೇಡು–ಕ್ಲೇಶಗಳು ಉತ್ಪನ್ನವಾಗಕೂಡದೆಂಬ ಧೋರಣದಿಂದ ಇದು ಯೋಜಿಸಲ್ಪಟ್ಟಿದ್ದಿರಬೇಕು.

(೪) ಆದ್ದರಿಂದ ಇದು ನೀತಿಧರ್ಮವನ್ನು ಅಡಿಗಡಿಗೆ ತನ್ನೆದುರಿನಲ್ಲಿ ಇಟ್ಟುಕೊಂಡು ಜನತೆಯ ಸರ್ವೋದಯವನ್ನು ಮಾಡಲು ಯತ್ನಿಸಬೇಕು.

## ೩ ಗ್ರಾಮದೃಷ್ಟಿ

೧ ಹಿಂದುಸ್ತಾನದ ಪ್ರಾಣವು ಹಳ್ಳಿಗಳಲ್ಲಿದೆಯೆನ್ನುವುದು ಸರ್ವಮಾನ್ಯವಾದ ಮಾತು. ಆದರೆ ಹಿಂದುಸ್ತಾನದ ಆರ್ಥಿಕ ಯೋಜನೆಗಳು ಹಳ್ಳಿಗಳ ಹಿತಕ್ಕಾಗಿ ಮಾಡಲ್ಪಡುವುದರ ಬದಲು ಪಟ್ಟಣಗಳ ಮತ್ತು ಪರದೇಶಗಳ ಕಲ್ಯಾಣಕ್ಕಾಗಿ ಮಾಡಲ್ಪಟ್ಟಿವೆ.

೨ ಇದರಿಂದ ಹಳ್ಳಿಯ ಕಚ್ಚಾವಸ್ತು ಪಟ್ಟಣಕ್ಕೂ ಪಟ್ಟಣದಿಂದ ಪರದೇಶಕ್ಕೂ ಹೋಗುವದು. ಪಟ್ಟಣಗಳಲ್ಲಿಯೂ ಪರದೇಶಗಳಲ್ಲಿಯೂ ತಯಾರಿಸಿದ ಪಕ್ಕಾವಸ್ತು ಹಳ್ಳಿಗಳಲ್ಲಿ ಮಾರಲ್ಪಡುವುದು. ಇದರಿಂದ ಕಚ್ಚಾ ವಸ್ತುವಿನಿಂದ ಬಂದ ಸ್ವಲ್ಪ ಹಣವು ಪಕ್ಕಾವಸ್ತುವನ್ನು ಕೊಳ್ಳುವುದರಲ್ಲಿ ವೆಚ್ಚವಾಗುವುದು, ಮತ್ತು ಹಳ್ಳಿಗನ ಕೈಯು ಬರಿದಾಗಿಯೆ ಉಳಿಯುವುದು.

೩ ಜೀವನಕ್ಕೆ ಬೇಕಾಗುವ ಎಷ್ಟೋ ವಸ್ತುಗಳು ಹಳ್ಳಿಗಳಲ್ಲಿ ಹೊಲಗಳಿಂದಲೂ ಅರಣ್ಯಗಳಿಂದಲೂ ಎಷ್ಟೋ ಮಟ್ಟಿಗೆ ಪುಕ್ಕಟೆ ದೊರೆಯುವವು. ಅವುಗಳನ್ನು ಒಟ್ಟುಗೂಡಿಸಿ ಪಟ್ಟಣಿಗರಿಗೆ ಮಾರುವುದರಿಂದ ಬಡವರ ಉಪಜೀವಿಕೆಯು ಸಹಜವಾಗಿ ಸಾಗಬಹುದು. ಆದರೆ ಇದಕ್ಕೆ ವಿಪರೀತವಾಗಿ ಪಟ್ಟಣಗಳಲ್ಲಿಯೂ ಪರದೇಶಗಳಲ್ಲಿಯೂ ಹುಟ್ಟಿದ, ಕಣ್ಣಿಗೆ ನುಣ್ಣಗೆ ಮತ್ತು ಅನುಕೂಲವಾಗಿ ತೋರುವ, ನಿಜವಾಗಿಯೂ ತೋರಿಕೆಗಾಗಿ ಮಾತ್ರ ಚೆನ್ನಾಗಿರುವ ವಸ್ತುಗಳನ್ನು ಉಪಯೋಗಿಸುವ 'ಫೇಶನ್ನು" (ರೀತಿ-ಕನ್ನಡದಲ್ಲಿ ಇದಕ್ಕೆ ಸೊಗಸು ಎನ್ನಬಹುದು.) ಹೆಚ್ಚಾದದ್ದರಿಂದ ಹಳ್ಳಿಗಳ ಅನೇಕ ಉದ್ಯೋಗಗಳು ಮತ್ತು ಕೂಲಿಯ ಕೈಗಾರಿಕೆಗಳು ಮುಳುಗಿಹೋಗಿವೆ, ಈಗಲೂ ಮುಳಗುತ್ತ ಇವೆ.

೪ ಇಂಥ ಅತ್ಯಂತ ಆಕರ್ಷಕವಾದ ಎಷ್ಟೋ ವಸ್ತುಗಳು ಆರೋಗ್ಯಕ್ಕೂ ಸ್ವಚ್ಛತೆಗೂ ಹಾನಿಕರವಾಗಿರುವುದಲ್ಲದೆ ಅತಿ ತುಟ್ಟಿಯೂ ಇರುವವು. ಇವುಗಳನ್ನು ಬಳಸುವುದರಿಂದ ವ್ಯರ್ಥವಾದ ವೆಚ್ಚದ ಚಟವು ಮಾತ್ರ ಅಂಟುತ್ತದೆ. ಹಲ್ಲು ಉಜ್ಜಿಕೊಳ್ಳುವ ಕರಿಬೆಟ್ಟಿನ ಬದಲು ನಾನಾ ತರದ ದಂತಮಂಜನಗಳು, ಟೂಥ್‌ಪೇಷ್ಟುಗಳು, ಬ್ರಶ್ಶುಗಳು; ಹೊರಸುಗಳ ಕಟ್ಟಿಗೆಯ ಪಲ್ಲಂಗುಗಳ ಬದಲು ಸ್ಪ್ರಿಂಗಿನ ಪಲ್ಲಂಗುಗಳು; ಬೆಲ್ಲ ಅಥವಾ ಗಡಿಗೆಕಲ್ಲು ಸಕ್ಕರೆಯ ಬದಲು ಗಿರಣಿಗಳಲ್ಲಿ ತಯಾರಾದ ಬಿಳಿ ಕಲ್ಲುಸಕ್ಕರೆ; ಹಂಚುಗಳ ಬದಲು ತಗಡುಗಳು; ಕತ್ತದ ಮತ್ತು ನಾರಿನ ಹಗ್ಗಗಳ ಬದಲು ತಂತಿ

ಮತ್ತು ತಂತಿಯ ಹಗ್ಗಗಳು; ಮಣ್ಣಿನ ಪಾತ್ರೆಗಳ ಬದಲು ಜಪಾನಿನ ಮತ್ತು ಚೀನದ ಪಾತ್ರೆಗಳು; ಹಳ್ಳಿಯ ಬಿದರಿನ ಬುಟ್ಟಿ ಮರ ಮುಂತಾದವುಗಳ ಬದಲು ತಗಡಿನ ಬುಟ್ಟಿ ಮೊರ ಡಬ್ಬಿ ಮುಂತಾದವು; ಹಳ್ಳಿಯ ಕಮ್ಮಾರರು ಮಾಡಿದ ಸಳಿ, ಸರಪಳಿ, ಕುಡುಗೋಲು, ಸೌಟು, ಸುತ್ತಿಗೆ, ಕೊಡಲಿಗಳ ಬದಲು ಯಂತ್ರದ ಸಳಿ, ಸರಪಳಿ, ಸೌಟು, ಸುತ್ತಿಗೆ; ಮುಂತಾದ ಆಕರ್ಷಕ ವಸ್ತುಗಳು; ಹಳ್ಳಿಯ ಅಕ್ಕಸಾಲಿಗರು ಮಾಡಿದ ಆಭರಣಗಳ ಬದಲು ಪಟ್ಟಣಗಳಲ್ಲಿ ಯಂತ್ರಗಳಲ್ಲಿ ತಯಾರಾದ ಅಚ್ಚಿನ ಆಭರಣಗಳು; ಹಳ್ಳಿಯ ಹೆಂಗುಸರು ಮಾಡಿದ ಬೀಸಣಿಕೆ, ಆಸನ, ಜಾಜಮು ಶಾಲುಗಳ ಬದಲು ಜಪಾನಿನ ಕಾಗದದ ಬೀಸಣಿಕೆ, ಗಿರಣಿಯ ಆಸನಗಳು, ಶಾಲುಗಳು ಮೊದಲಾದವು; ಸೀಗೆಕಾಯಿ ಅಂಟುವಳಕಾಯಿಗಳ ಬದಲು ಸುಗಂಧಮಿಶ್ರಿತವಾದ ಸಾಬೋನುಗಳು; ಗಲಗಿನ ಲೆಕ್ಕಣಿಕೆಗಳ ಬದಲು ಫೌಂಟನ್‌ಪೆನ್ ಮತ್ತು ಮರದ ಲೆಕ್ಕಣಿಕೆಗಳು; ಹಳ್ಳಿಯಲ್ಲಿ ತಯಾರಾದ ಮಸಿಯ ಬದಲು ರಸಾಯನದಿಂದ ತಯಾರಿಸಲ್ಪಟ್ಟ ಮಸಿ; ಹಳ್ಳಿಯ ಕಾಗದಗಳ ಬದಲು ಯಂತ್ರದಲ್ಲಿ ತಯಾರಾದ ಕಾಗದಗಳು; ಮನೆಯ ಶುದ್ಧ ಕಷಾಯ ಮುಂತಾದ ವನಸ್ಪತಿ ಔಷಧಗಳ ಬದಲು ಸಿದ್ಧೌಷಧಗಳು; ಹಳ್ಳಿಯ ಪಾತ್ರೆಗಳ ಬದಲು ಬಾಟ್ಲಿ ಮುಂತಾದವು.

೫ ಈ ಎಲ್ಲ ವಸ್ತುಗಳು ಹಳ್ಳಿಗಳಲ್ಲಿ ಮಾಡಿದ ವಸ್ತುಗಳಿಗಿಂತ ಕಡಿಮೆ ಬೆಲೆಗೆ ಸಿಕ್ಕುವಂತೆಯೂ ಇರುವುದಿಲ್ಲ. ಆದರೂ ಈ ವಸ್ತುಗಳು ಮೋಹಕವಿರುವುದರಿಂದ, ಶ್ರೀಮಂತರ ಮತ್ತು ಅವಿಚಾರಗಳ ಫೇಶನ್ನಿನ ಅಂಧಾನುಕರಣ ಮಾಡುವುದು ಸಭ್ಯತೆ ಎನಿಸಿದ್ದರಿಂದ, ಪ್ರಜರ ಆರ್ಥಿಕ ಸ್ಥಿತಿಯು ಚನ್ನಾಗಿಲ್ಲದಿದ್ದರೂ ಅವು ಮಾರಿ ಹೋಗುತ್ತವೆ.

೬ ಅವಿಚಾರಿಗಳಾದ ಯಂತ್ರವಾದಿಗಳೂ ಹಳ್ಳಿಗರನ್ನು ನಿರ್ಧನಿಕರನ್ನಾಗಿ ಮಾಡಲು ಬಹಳ ಶ್ರಮಪಟ್ಟಿದ್ದಾರೆ. ಹತ್ತಿಹಿಂಜುವ, ಬತ್ತ ಕುಟ್ಟುವ, ಹಿಟ್ಟುಬೀಸುವ, ಎಣ್ಣೆಗಳನ್ನು ತೆಗೆಯುವ ಕಾರಖಾನೆಗಳನ್ನು ಸ್ಥಾಪಿಸಿದ್ದಾರೆ; ಊರಿಂದೂರಿಗೆ ಹೋಗಿ ಬರುವುದಕ್ಕಾಗಿ ಮೋಟಾರು ಬಸ್ಸುಗಳನ್ನು ಇಟ್ಟಿದ್ದಾರೆ.

೭ ಅಲ್ಪವಾದರೂ ಚಿಂತೆಯಿಲ್ಲ, ತತ್ಕಾಲಕ್ಕೆ ಹೆಚ್ಚು ಲಾಭವು ದೊರೆತರೆ ಸಾಕೆಂಬ ವ್ಯಾಪಾರಿಗಳು ಸ್ವಾರ್ಥದ ದೃಷ್ಟಿಯನ್ನಿಟ್ಟುಕೊಂಡಿದ್ದರಿಂದ ಹಳ್ಳಿಯ ವಸ್ತುಗಳ ಮೂಲ ಬೆಲೆಯು ಪರದೇಶದ ಮತ್ತು ಯಂತ್ರದ ವಸ್ತು

ಗಳ ಬೆಲೆಗಿಂತ ತೀರ ಕಡಿಮೆಯಿದ್ದರೂ ಕೊಳ್ಳುವವನಿಗೆ ಹಳ್ಳಿಯ ವಸ್ತು ಗಳು ತುಟ್ಟಿಯಾಗುತ್ತವೆ. ಇದರಿಂದ ಹಳ್ಳಿಗರ ಕೈಯಲ್ಲಿರಬೇಕಾಗಿದ್ದ ಪೇಟೆ ಗಳು ಪರದೇಶೀಯರ ಮತ್ತು ಗಿರಣಿಗಳ ಒಡೆಯರ ಕೈಯಲ್ಲಿವೆ.

೮ ಅರ್ಥಶಾಸ್ತ್ರವು ಹಳ್ಳಿಯ ದೃಷ್ಟಿಯನ್ನಿಟ್ಟುಕೊಂಡು ಬರೆಯಲ್ಪಟ್ಟ ಮೇಲೆ ಮತ್ತು ಜೀವನದಲ್ಲಿ ದೃಷ್ಟಿಯು ಹಳ್ಳಿಯ ಕಡೆಗೆ ಹೋದ ಬಳಿಕ ಮಾತ್ರ ಹಳ್ಳಿಗಳು ಹುಟ್ಟಿಸಿದ ವಸ್ತುಗಳನ್ನು ಕೊಂಡು ಉಪಯೋಗಿಸು ವುದರ ಕಡೆಗೆ ಜನತೆಯ ಮನಸ್ಸು ಹರಿಯುವುದು. ತಮಗೆ ಅವಶ್ಯವಿದ್ದ ವಸ್ತುಗಳನ್ನು ಹಳ್ಳಿಯಲ್ಲಿಯೆ ಮಾಡಿಸಿಕೊಳ್ಳಬೇಕೆಂದು ಮನಸ್ಸಾಗುವುದು. ಇದರಿಂದ ಹಳ್ಳಿಗಳಲ್ಲಿದ್ದ ಕಲೆ ಮತ್ತು ಉದ್ಯೋಗಗಳ ಪುನರುಜ್ಜೀವನ ಮಾಡುವುದರ ಕಡೆಗೆ ಹಳ್ಳಿಗರಿಗೆ ಶಿಕ್ಷಣವನ್ನೀಯುವುದರ ಕಡೆಗೆ, ಹಳ್ಳಿಯ ಕಾಡುಗಳನ್ನು ಮತ್ತು ಹೊಲಗಳನ್ನು ಹರಗಿ ತಮ್ಮ ಉಪಯೋಗಕ್ಕೆ ತಂದು ಕೊಳ್ಳುವುದರ ಕಡೆಗೆ, ಅವುಗಳನ್ನು ಬೆಳೆಯುಳ್ಳವನ್ನಾಗಿ ಮಾಡುವುದರ ಕಡೆಗೆ, ಜ್ಞಾನದ ಅಭಾವದಿಂದ ವ್ಯರ್ಥವಾಗಿ ಹಾಳಾಗಿ ಹೋಗುವ ಸಂಪ ತ್ತನ್ನೂ ನೈಸರ್ಗಿಕ ವಸ್ತುಗಳನ್ನೂ ಹುಡುಕಿ ಬಳಸಿಕೊಳ್ಳುವುದರ ಕಡೆಗೆ ಜನತೆಯ ಮನಸ್ಸು ಹರಿಯುವುದು.

೯ ಇಂದು ಸಂಪತ್ತು ಹಳ್ಳಿಗಳಿಂದ ಪಟ್ಟಣಗಳಿಗೂ ಪಟ್ಟಣಗಳಿಂದ ಪರದೇಶಗಳಿಗೂ ಹರಿದುಹೋಗುತ್ತದೆ. ಇದನ್ನು ಅಮೂಲಾಗ್ರವಾಗಿ ತಡೆ ಯುವುದು ಮತ್ತು ಪ್ರವಾಹವು ತಿರಿಗಿ ಹಳ್ಳಿಗಳತ್ತ ಹರಿಯುವಂತೆ ಮಾಡು ವುದು ಅತ್ಯಂತ ಅವಶ್ಯವಿದೆ. ಹಳ್ಳಿಗಳ ಸಿರಿಯು ಹಳ್ಳಿಗಳಲ್ಲಿಯೆ ಉಳಿಯು ವಂತೆಯೂ ಹಳ್ಳಿಗಳು ಸ್ವಾವಲಂಬಿಗಳಾಗುವಂತೆಯೂ ಇಷ್ಟೇ ಅಲ್ಲ, ಪಟ್ಟಣ ನಿವಾಸಿಗಳು ತಮಗೆ ಅವಶ್ಯವಿದ್ದ ವಸ್ತುಗಳನ್ನು ಹಳ್ಳಿಗಳಲ್ಲಿಯೆ ಮಾಡಿಸಿಕೊಳ್ಳುವಂತೆಯೂ ಹಳ್ಳಿಗಳೇ ಪಟ್ಟಣಿಗರಿಗೆ ಸರ್ವವಸ್ತುಗಳನ್ನು ಪೂರೈಸಿಕೊಡುವಂತೆಯೂ ಮಾಡುವುದು ಅತ್ಯಂತ ಅವಶ್ಯವಿರುವದು.

## ೪ ಧನೇಚ್ಛೆ

೧ ಸಾಮಾನ್ಯವಾಗಿ ಮಾನವನು ತನ್ನ ಆರ್ಥಿಕ ಸ್ಥಿತಿಯಲ್ಲಿ ಸುಧಾರಣೆ ಯನ್ನೂ ಸುಖಾನುಕೂಲತೆಗಳಲ್ಲಿ ಹೆಚ್ಚಳವನ್ನೂ ಬಯಸುವುದು ಸ್ವಾಭಾ ವಿಕ. ಆದರೆ ಈಗಲಾದರೋ ಮನುಷ್ಯನ ಅತ್ಯಾಸೆಗೆ ಮೇರೆಯೆ ಇಲ್ಲ. ಎಲ್ಲರೂ ಲಕ್ಷಾಧಿಪತಿಗಳಾಗಲೂ ಜಮೀನುದಾರರಾಗಲೂ ಇಲ್ಲವೆ ರಾಜ

ರಾಗಲೂ, ಬಂಗಲೆ ಅರಮನೆಗಳಲ್ಲಿ ವಾಸಿಸಲು ತಲ್ಲಣಿಸುವರು ಎಂದು ಹೇಳಿದರೆ ಆ ವಿಧಾನವು ಸಾಮಾನ್ಯ ಮನುಷ್ಯರಿಗೆ ಅನ್ವಯಿಸುವಂತಹದು ಎಂದು ಅರ್ಥವಲ್ಲ. ಅಲ್ಲದೆ ಹೀಗೆ ಹೇಳುವುದೆಂದರೆ ಸಾಮಾನ್ಯ ಜನರ ವಿಷಯವಾಗಿ ಕೀಳು ಅಭಿಪ್ರಾಯವನ್ನು ವ್ಯಕ್ತಪಡಿಸಿದಂತೆಯೂ ಅವರ ಎದುರು ಕೀಳು ಮಟ್ಟದ ಆದರ್ಶವನ್ನು ಇಟ್ಟಂತೆಯೂ ಆಗುವುದು.

೨ ಬಹಳ ಜನರು ಧನವನ್ನು ತಿರಸ್ಕರಿಸುವುದೂ ಇಲ್ಲ ಅದರ ಅತ್ಯಾಶೆಯುಳ್ಳವರೂ ಇರುವುದಿಲ್ಲ. ಆದರೆ ಅವರು ವರ್ಷದ ಕೊನೆಯಲ್ಲಿ ತಮ್ಮ ಬಳಿಯಲ್ಲಿ ಸ್ವಲ್ಪ ಹಣವು ಕೂಡಿಬಿದ್ದುದನ್ನು ನೋಡಬಯಸುವರು ಎಂಬುದು ನಿಜವು. ಅವರು ಬಯಸುವ ಈ ಹಣವು ಬೇನೆ ಬೇಸರಿಕೆ, ಮದುವೆ ಮುಂಜಿ, ಹಬ್ಬ ಹುಣ್ಣಿಮೆ, ತೀರ್ಥಯಾತ್ರೆ ಮತ್ತು ದಾನಧರ್ಮಕ್ಕೆ ಇಲ್ಲವೆ ಮುಪ್ಪಿನಲ್ಲಿ ವೆಚ್ಚಮಾಡುವದಕ್ಕೆ ಸಾಕಾಗುವಷ್ಟು ಮಾತ್ರ ಇರುತ್ತದೆ. ಧಾರ್ಮಿಕ ಸಂಸ್ಕಾರವಿದ್ದ ಜನರಲ್ಲಿ ಧನದ ಮತ್ತು ಸುಖದ ಅಪಾರವಾದ ತೃಷ್ಣೆಗೆ ಎಲ್ಲೆ ಇದ್ದೇ ಇದೆ.

೩ ಸಿಕಂದರ್ ಅಥವಾ ನೆಪೋಲಿಯನ್ ಭರ್ತೃಹರಿ ಅಥವಾ ಗೋಪಿಚಂದರಾಗಲು ಎಲ್ಲ ರಾಜರಿಗೂ ಹೇಗೆ ಮಹಾತ್ವಾಕಾಂಕ್ಷೆಯೂ ಶಕ್ತಿಯೂ ಇರುವುದಿಲ್ಲವೊ ಹಾಗೆಯೆ ತೀರ ಶ್ರೀಮಂತರು ಇಲ್ಲವೆ ತೀರ ಬಡವರು ಆಗುವ ಮಹಾತ್ವಾಕಾಂಕ್ಷೆಯೂ ಧೈರ್ಯ ಸಾಹಸಗಳೂ ಬಹು ಜನರಲ್ಲಿ ಇರುವುದಿಲ್ಲ.

೪ ಆದರೆ ಪ್ರತಿಯೊಂದು ಜನಾಂಗದಲ್ಲಿ ತುಸು ಜನರಿಗೆ ಮಾತ್ರ ಅಸಾಧಾರಣವಾದ ಮಹತ್ವಾಕಾಂಕ್ಷೆಯೂ ಸಾಹಸ ಕಾರ್ಯಗಳನ್ನು ಮಾಡುವ ಅಸಾಧಾರಣವಾದ ಶಕ್ತಿಯೂ ಇರುವುದು. ಕೆಲವರ ಗುರಿ ಬಡತನವಾದರೆ ಕೆಲವರು ಸಿರಿವಂತಿಕೆಯ ಗುರಿಯನ್ನು ಇಟ್ಟುಕೊಳ್ಳುವರು.

೫ ಜನತೆಯ ಸುಖಾನುಕೂಲತೆಗಳಿಗೂ ಧನೇಚ್ಛೆಗೂ ಹಾನಿಯಾಗದಂತೆ, ಸಾಹಸ ಶೌರ್ಯದ ಕಾರ್ಯಗಳನ್ನು ಮಾಡಿತೋರಿಸಬೇಕೆನ್ನುವವರಿಗೆ ಒಳ್ಳೆ ಸುಸಂಧಿಗಳು ದೊರೆಯುವಂತೆ ಸಮಾಜದ ರಚನೆಯನ್ನು ಮಾಡಬೇಕು; ಸಮಾಜದ ವ್ಯವಸ್ಥೆಯನ್ನೂ ಇಡಬೇಕು; ಇಷ್ಟೇ ಅಲ್ಲ, ಇದರಿಂದ ಹಲವರ ಮಹತ್ವಾಕಾಂಕ್ಷೆಗೆ ಉತ್ತೇಜನವು ದೊರೆತರೂ ಕೊನೆಯಲ್ಲಿ ಸಮಾಜಕ್ಕೆ ಲಾಭವೆ ಆಗುವಂತೆ ಇರಬೇಕು.

೬ ಸಮಾಜದ ರಚನೆಯಲ್ಲಿ ಪೌರುಷಪ್ರದರ್ಶನಕ್ಕೆ ಒಳ್ಳೆಯ ಸಂಧಿ ಸಂದರ್ಭಗಳು ದೊರೆಯದಿದ್ದರೆ ಜನರ ಮಹತ್ವಾಕಾಂಕ್ಷೆಯು ಅವರನ್ನು ಅಡ್ಡದಾರಿಗೆ ಸೆಳೆದೊಯ್ಯುವದು ಮತ್ತು ಅದರಿಂದ ಸಮಾಜಕ್ಕೆ ಹಾನಿಯಾಗುವದು.

೭ ಉದ್ಯೋಗ ವ್ಯವಸಾಯಗಳಲ್ಲಿಯೂ ಸಮಾಜ ಸೇವೆಯ ಎಷ್ಟೋ ಕಾರ್ಯಗಳಲ್ಲಿಯೂ ನಾನಾ ತರದ ಸಾಹಸವನ್ನು ತೋರಿಸಬೇಕಾಗುವುದು, ನಾನಾ ಬಗೆಯ ಕಷ್ಟನಷ್ಟಗಳನ್ನು ಸಹಿಸಬೇಕಾಗುವುದು. ಇವುಗಳಲ್ಲಿ ಯಶಸ್ಸು ಸಿಕ್ಕೇ ಸಿಗುವುದೆಂದು ಹೇಳಲಾಗುವುದಿಲ್ಲ. ಸಾರ್ವಜನಿಕ ಸಂಸ್ಥೆಗಳಿಗಿಂತಲೂ ವ್ಯಕ್ತಿಗಳಲ್ಲಿ ಮತ್ತು ಸಾರ್ವಜನಿಕವಲ್ಲದ ಸಂಸ್ಥೆಗಳಲ್ಲಿ ಪ್ರಯೋಗಗಳನ್ನು ಮಾಡಿದರೆ ಹೆಚ್ಚು ಅನುಕೂಲವಾಗುವುದಲ್ಲದೆ ಯಶಸ್ಸೂ ದೊರಕಬಹುದು. ಸಮಾಜದ ರಚನೆಯು ಇದೆಲ್ಲಕ್ಕೂ ಅನುಕೂಲವಾಗಿರಬೇಕು.

## ೫ ವ್ಯಾಪಾರ

೧ ಅವಶ್ಯವಾದ ದೊಡ್ಡ ಉದ್ಯೋಗಗಳನ್ನು ಬೆಳೆಯಿಸುವುದು ಮತ್ತು ಆವಶ್ಯವಿದ್ದ ವಸ್ತುಗಳನ್ನು ಜನತೆಗೆ ತಲ್ಪಿಸುವುದು ವ್ಯಾಪಾರದ ಯೋಗ್ಯ ಕಾರ್ಯಕ್ಷೇತ್ರವಾಗಿದೆ. ಇದರಲ್ಲಿ ಅನಾಯಾಸವಾಗಿ ಏನು ಉಳಿತಾಯವಾಗುವುದೊ ಅದೇ ಲಾಭವೆನಿಸುವುದು.

೨ ಉದ್ಯೋಗವ್ಯವಸಾಯಕ್ಕೆ ತಗಲುವ ವೆಚ್ಚವನ್ನು ಪದಾರ್ಥದ ಮೇಲೆ ಹಂಚಿ ಹಾಕಿದ ಮೇಲೆ, ಹಾನಿಯಾಗುವುದನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಹಾಕಿದ ಹೆಚ್ಚಿನ ಬೆಲೆಯೆ ಅನಾಯಾಸವಾಗಿ ಉಳಿತಾಯವಾದದ್ದು ಎನಿಸುವದು. ಈ ಉಳಿತಾಯವು ಪ್ರತ್ಯೇಕದಲ್ಲಿ ಅತ್ಯಲ್ಪವಾಗಿ ತೋರಿದರೂ ಉದ್ಯೋಗದ ಪ್ರಮಾಣದಿಂದ ಒಟ್ಟು ಕೂಡಿಸಿ ನೋಡಿದರೆ ದೊಡ್ಡ ಮೊತ್ತವಾಗುವುದು.

೩ ಹೀಗೆ ಹೆಚ್ಚಾಗಿ ಉಳಿದ ಧನವನ್ನು ಆ ಆ ಉದ್ಯೋಗಗಳಲ್ಲಿ ಕೆಲಸ ಮಾಡುವ ಕೂಲಿಕಾರರ ಕಲ್ಯಾಣಕ್ಕಾಗಿಯೂ ಇಲ್ಲವೆ ಇತರ ಅನೇಕ ಉಪಯುಕ್ತ ಉದ್ಯೋಗಗಳನ್ನು ಹೆಚ್ಚಿಸುವುದಕ್ಕಾಗಿಯೂ ಇಲ್ಲವೆ ಸಾರ್ವಜನಿಕ ಹಿತವನ್ನು ಮಾಡುವಂಥ ಕಾರ್ಯಗಳಿಗಾಗಿಯೂ ವಿನಿಯೋಗಿಸುವುದು ಕಲ್ಯಾಣಕರವಾದುದು.

೪ ಇಂಥ ಧನದ ಒಡೆಯನು ತಾನು ಈ ಧನದ ಸಂರಕ್ಷಕನೆಂದು ತಿಳಿದುಕೊಂಡು ಅದನ್ನು ಸಾರ್ವಜನಿಕ ಕಾರ್ಯಗಳಿಗಾಗಿ ವಿನಿಯೋಗಿಸುವುದು ತನ್ನ ಧರ್ಮವೆಂದು ತಿಳಿದುಕೊಂಡರೆ ಅವನು ಬಂಡವಲುಗಾರನಿದ್ದರೂ ಪ್ರಜರ ಕಲ್ಯಾಣವನ್ನು ಮಾಡುವನು ಮತ್ತು ಪ್ರಜರ ಹೊಟ್ಟೆಕಿಚ್ಚಿಗೆ ಬಲಿಯಾಗುವುದಿಲ್ಲ.

೫ ಆದರೆ ಅವನು ಈ ಧನದಿಂದ ತನ್ನ ಸ್ವಾರ್ಥಸಾಧನೆಯ ಮಾರ್ಗವನ್ನೆ ಅವಲಂಬಿಸಿದರೆ ಮತ್ತು ಈ ಧನವನ್ನು ಇಮ್ಮಡಿಸುವ ದೃಷ್ಟಿಯನ್ನೆ ಇಟ್ಟು ಕೊಂಡರೆ ಜನತೆಯ ತಿರಸ್ಕಾರದ ಕೂರಂಬುಗಳಿಗೆ ಪಾತ್ರನಾಗುವನು ಅಲ್ಲದೆ ಶ್ರೀಮಂತ ಬಡವರಲ್ಲಿ ಭೇದಭಾವನೆಯನ್ನು ಹುಟ್ಟಿಸಿ ಕಲಹಗಳನ್ನು ಹುಟ್ಟಿಸಲು ಕಾರಣನಾಗುವನು.

೬ ಶ್ರೀಮಂತರು ತಮ್ಮನ್ನು ಆಶ್ರಯಿಸಿದವರಿಗೆ ಅವರ ಕೌಟುಂಬಿಕ ಶುಭಾಶುಭ ಕಾರ್ಯಗಳಲ್ಲಿ ತಮ್ಮ ಬಂಗಲೆ, ಕುದುರೆ, ಗಾಡಿ, ಪಾತ್ರೆ, ಜಮ ಖಾನೆ, ಗುಡಾರ, ಆಭರಣ ಮುಂತಾದವುಗಳನ್ನು ಕೊಟ್ಟು ಅವರ ಕಾರ್ಯ ಗಳು ಸುಸೂತ್ರವಾಗಿ ಸಾಗುವಂತೆ ಮಾಡಿ ಅವರ ಮನಸ್ಸು ಪ್ರಫುಲ್ಲಿತವಾಗಿ ರುವಂತೆ ಮಾಡುವುದು ತಮ್ಮ ಕುಲಧರ್ಮವೆಂದು ತಿಳಿಯಬೇಕಲ್ಲದೆ ತಮ್ಮ ಆಚರಣೆಯನ್ನೂ ಅದರಂತೆಯೇ ಇಡಬೇಕು; ಮತ್ತು ಸಿರಿವಂತರೊಡನೆ ಬಡವರ ಜೀವನವು ಉಪವಾಸ-ವನವಾಸ, ಬೇನೆ-ಬೇಸರಿಕೆಗಳಿಲ್ಲದೆ ಸುಖ ದಿಂದ ಸಾಗಬೇಕು; ಎಂದರೆ ಮಾತ್ರ ಸಿರಿವಂತರು ಬಂಗಾರದ ತಟ್ಟೆಯಲ್ಲಿ ಉಂಡರೂ ಬಡವರು ಅತ್ತಕಡೆ ಕಣ್ಣು ಹೊರಳಿಸಿಯೂ ನೋಡುವುದಿಲ್ಲ. ಇಷ್ಟೇ ಅಲ್ಲ, ಜನತೆಯ ಬಹುಭಾಗವು ಶ್ರೀಮಂತರನ್ನು ಸರಿಪಡಿಸ ಬೇಕೆಂಬ ಗೋಜಿಗೆ ಹೋಗಲು ಇಚ್ಛಿಸುವುದಿಲ್ಲ.

೭ ಸಿರಿವಂತರು ಈ ಧನದ ಸಂರಕ್ಷಕರು ತಾವೆಂದು ತಿಳಿಕೊಂಡು ಈ ಧನದ ಸದ್ವಿನಿಯೋಗ ಮಾಡುತ್ತಿರುವರೆಂಬುದಕ್ಕೆ ಇಂತಹ ನಡತೆ ಮಾತ್ರವೇ ಸಾಕ್ಷಿಯಾಗಬಲ್ಲದು. ಹೀಗಿದ್ದರೂ ಅವರಲ್ಲಿ ಧನದಾಶೆಯು ಸರ್ವಥಾ ಇರುವದಿಲ್ಲವೆನ್ನಲಾಗುವುದಿಲ್ಲ. ಆದರೂ ಈ ಧನವು ಪ್ರಜರಿಗೆ ಕೇಡು ಬಗೆಯದೆ ಅವಶ್ಯಕತೆಯುಂಟಾದಾದ ಪ್ರಯೋಜನಕ್ಕೆ ಬರಬೇ ಕೆಂದು ಕೂಡಿಟ್ಟ ಧನಸಂಗ್ರಹವೆನಿಸುವುದು.

೮ ಇಂಥ ಪರಿಸ್ಥಿತಿ ಇದ್ದಕಡೆಯಲ್ಲಿ ಜನರು ಸಾಮ್ಯವಾದಿಗಳ ಪ್ರಚಾ ರಕ್ಕೆ ಮನಸೋತು ಶ್ರೀಮಂತರನ್ನು ನಾಶಮಾಡಲು ತೊಡಗುವುದಿಲ್ಲ.

೯ ಸಿರಿವಂತರು ಹೀಗೆ ಇದ್ದುಕೊಂಡು ಸರಳವಾದ, ಆಡಂಬರರಹಿತ ವಾದ ಮತ್ತು ಸಂಯಮದ ಜೀವನವನ್ನು ಕಳೆಯಲಾರಂಭಿಸಿದರೆ ಅವರು ಉಳ್ಳವರಿದ್ದರೂ ಪ್ರಜರಿಗೆ ಪೂಜ್ಯರಾಗುವರು.

## ೬ ಸಾವುಕಾರಿಕೆ

೧ ಕಡಿಮೆ ಬಡ್ಡಿಯಿಂದ ಹಣ ತೆಗೆದುಕೊಂಡು ಆ ಹಣವನ್ನು ಹೆಚ್ಚು ಬಡ್ಡಿ ಬರುವಂತೆ ಯಾವುದಾದರೂ ಉದ್ಯೋಗದಲ್ಲಿ ತೊಡಗಿಸುವುದೇ ಸಾವುಕಾರಿಕೆ. ಸಮಾಜದ ಹಿತಕ್ಕಾಗಿ ಅತ್ಯಂತ ಅವಶ್ಯವಿದ್ದ ಸಾವುಕಾರಿಕೆಯು ಇದಲ್ಲ.

೨ ಪರದೇಶದ ವ್ಯಾಪಾರಿಗಳ ದಲಾಲತನ, ಅಥವಾ ಒಕ್ಕಲಿಗರ ಮತ್ತು ಇತರ ಉದ್ಯೋಗಗಳನ್ನು ಮಾಡುವವರ ಭೂಮಿ, ಸ್ಥಾವರಜಂಗಮ ಆಸ್ತಿ, ಇನ್ನೂ ಸ್ವಲ್ಪ ಹೆಚ್ಚೆಂದರೆ ಪರರಾಜ್ಯಗಳನ್ನು ಮೆಲ್ಲಮೆಲ್ಲನೆ ಅಪಹರಿಸುವ ಹಂಚಿಕೆ, ಇದೇ ಇಂದು ಪ್ರಪಂಚದಲ್ಲಿ ನಡೆದಿರುವ ಸಾವುಕಾರಿಕೆ. ಈ ಸಾವುಕಾರಿಕೆಯು ಯುರೋಪು, ಅಮೇರಿಕೆಯಂಥ ದೇಶಗಳಲ್ಲಿ ಹೆಚ್ಚು ಬಡ್ಡಿ ಸಿಗುವದೆಂಬ ಆಶೆಯಿಂದ ತನ್ನ ದೇಶದ ಬಡವರನ್ನು ದುರ್ಲಕ್ಷಿಸಿ ಪರದೇಶಗಳಲ್ಲಿ ಹಣವನ್ನು ಬಡ್ಡಿಗಾಗಿ ಇಡುವ ಬುದ್ಧಿಯನ್ನು ಹುಟ್ಟಿಸಿದೆ. ಇದರಿಂದ ಸಿರಿವಂತ ದೇಶಗಳಲ್ಲಿಯೂ ಕ್ಲೇಶಗಳು ಕೊನೆತನಕ ಮನೆ ಮಾಡುವಂತೆ ಆಗಿದೆ.

೩ ವ್ಯವಹಾರ ಮಾಡುವಾಗ ಸುಳ್ಳು ಹೇಳಿದರೆ ದೋಷವಿಲ್ಲವೆಂದು ಭಾವಿಸುವುದು ಭಯಂಕರವಾದ ಅಧರ್ಮ.

೪ ಅಶಿಕ್ಷಿತ ಸರಳ ಮತ್ತು ನಂಬಿಗೆಯ ಜನರನ್ನು ಅಥವಾ ವಿಲಾಸಿಗಳಾದ ಸಿರಿವಂತರನ್ನು ಇಲ್ಲವೆ ರಾಜರನ್ನು ದುಂದುಗಾರರನ್ನಾಗಿ ಮಾಡಿ ಅವರಿಗೆ ಚಟಗಳನ್ನು ಅಂಟಿಸಿ ತಮ್ಮ ಋಣಿಗಳನ್ನಾಗಿ ಮಾಡುವುದು, ವ್ಯಾಪಾರದಲ್ಲಿ ಮೋಸಮಾಡುವುದು, ಸುಳ್ಳು ಲೆಕ್ಕ ಮಾಡುವುದು ಮತ್ತು ಸುಳ್ಳುಕಾಗದ-ಪತ್ರಗಳನ್ನು ಹುಟ್ಟಿಸುವುದು ಸಾವುಕಾರಿಕೆಯಲ್ಲ, ಧಗಧಗಿಸುವಂಥ ಪಾಪ ಮತ್ತು ಹಿಂಸೆ.

೫ ಇಂಥ ಅಧರ್ಮದಿಂದ ಕೂಡಿದ ಸಾವುಕಾರಿಕೆಯಿಂದ ಧನವಂತೂ ದ್ವಿಗುಣಿತವಾಗಿಲ್ಲ, ಅನರ್ಥವು ಮಾತ್ರ ಹೆಚ್ಚಾಗಿದೆ.

೬ ಜನರು ತಮ್ಮ ಧನವನ್ನು ಉದ್ಯೋಗಗಳಿಗೆ ನೆರವಾಗುವ ರೀತಿಯಲ್ಲಿಯೆ ಇಡಬೇಕು. ಧನವನ್ನು ಸ್ವದೇಶದ ಉದ್ಯೋಗಗಳಲ್ಲಿಯೇ ತೊಡಗಿಸಬೇಕು. ಇದರಿಂದ ಲಾಭವು ಹೆಚ್ಚಾಗಿ ಹಣವು ದ್ವಿಗುಣಿತವಾದರೆ ಅದರ ಉಪಯೋಗವು ಸ್ವದೇಶದ ಸಾರ್ವಜನಿಕ ಕಾರ್ಯಗಳಿಗಾಗಿ ಆಗಬೇಕು. ಹಣವನ್ನು ಬಡ್ಡಿಗೆ ಹಚ್ಚಿ ಬಡ್ಡಿಯಿಂದಲೆ ಸಾರ್ವಜನಿಕ ಕಾರ್ಯಗಳು ಜರಗಬೇಕು ಎಂಬ ವಿಚಾರವು ಎಂದಿಗೂ ಸರಿಯಾದುದಲ್ಲ. ಏಕೆಂದರೆ ಈ ಹಣದ ಉಪಯೋಗವು ಹೆಚ್ಚೆಚ್ಚಾಗಿ ಸಾರ್ವಜನಿಕ ಕಾರ್ಯಗಳಿಗಾಗುವ ಬದಲು ಹೆಚ್ಚು ಹೆಚ್ಚು ಬಡ್ಡಿಯನ್ನು ದೊರಕಿಸುವ ವ್ಯಕ್ತಿಯ ಬೆಳೆವಣಿಗೆಗೆ ಕಾರಣವಾಗುತ್ತದೆ.

೭ ಸಾಲ ಮಾಡಿ ಕೌಟುಂಬಿಕ ಕಾರ್ಯಗಳನ್ನು ಸಾಗಿಸಕೂಡದೆಂದು ಕಟ್ಟಪ್ಪಣೆ ಇರಬೇಕು. ಆ ಕಾರ್ಯಗಳು ಅತ್ಯಂತ ಕಡಿಮೆ ವೆಚ್ಚದಲ್ಲಿ ಸಾಂಗವಾಗುವಂತೆ ಸಮಾಜದ ರೂಢಿಗಳಲ್ಲಿ ಬದಲಾವಣೆಯಾಗಬೇಕು. ಹೀಗಾದರೂ ಬೇನೆಬೇಸರಿಕೆ, ಅನುವು ಆಪತ್ತು ಅಥವಾ ಮದುವೆ ಮುಂಜಿಗಳಿಗಾಗಿ ಅಕಸ್ಮಾತ್ ಕೊಂಚ ಹಣವು ಬೇಕಾದರೆ ಬಡ್ಡಿಯಿಲ್ಲದೆ ಗೆಳೆತನ ಮತ್ತು ನಂಬಿಗೆಯ ಆಧಾರದಿಂದ ಸಮಾಜದಿಂದಲೆ ಅದು ಸಿಕ್ಕಬೇಕು. ಅಂಗಡಿಕಾರನು ಮನೆಯ ವೆಚ್ಚಕ್ಕೆ ಬೇಕಾಗುವ ಪದಾರ್ಥಗಳನ್ನು ಕೊಟ್ಟರೆ ಮತ್ತು ಮೇಲ್ಕಾಣಿಸಿದ ಕೌಟುಂಬಿಕ ಕಾರ್ಯಗಳ ಸಂದರ್ಭಗಳಲ್ಲಿ ಜೀನಸುಗಳನ್ನು ಕೊಟ್ಟು ನೆರವಾದರೆ ಅವುಗಳ ಮೇಲೆಯೂ ಬಡ್ಡಿಯನ್ನು ಹೇರಿ ವಸೂಲು ಮಾಡುವುದು ಯೋಗ್ಯವಲ್ಲ.

೮ ಸದ್ಯದ ಪರಿಸ್ಥಿತಿಯಲ್ಲಂತೂ ಇಂಥ ಸಂದರ್ಭಗಳಲ್ಲಿ ಕೊಟ್ಟ ಸಾಲಕ್ಕೆ ಹೆಚ್ಚು ಬಡ್ಡಿಯು ಸಿಕ್ಕಬಲ್ಲದು. ಆದ್ದರಿಂದ ಜನರನ್ನು ವ್ಯಸನಗಳಲ್ಲಿ ನೂಕಿ, ಸಲ್ಲದ ವೆಚ್ಚಗಳಲ್ಲಿ ಮುಳುಗಿಸಿ ಅವರಿಂದ ಹೆಚ್ಚು ಬಡ್ಡಿಯ ಆಸೆಪಡಲು ಸಾವುಕಾರರಿಗೆ ಆಸ್ಪದವಾಗಿದೆ.

೯ ಇನ್ನೊಂದು ಕಡೆಯಿಂದ, ಮುದ್ದತಿನ ಮತ್ತು ದಿವಾಳಿಯ ಕಾಯಿದೆಗಳು ಜನರ ನೈತಿಕ ಭಾವನೆಯನ್ನು ಹಾಳುಮಾಡಲು ನೆರವಾಗಿವೆ. ಈ ಕಾಯಿದೆಗಳು ದಿವಾಳಿ ತೆಗೆಯುವ ಬುದ್ಧಿಯನ್ನೂ ಸಟ್ಟಾ ವ್ಯಾಪಾರ ಪದ್ಧತಿಯನ್ನೂ ಗಂಟನ್ನು ಮುಳುಗಿಸುವ ಬುದ್ಧಿಯಿಂದ ಸಾಲಮಾಡುವ ವೃತ್ತಿಯನ್ನೂ ಬೆಳೆಸುತ್ತವೆ.

೧೦ ಈ ಪ್ರಕಾರ ಒಕ್ಕಲಿಗರ ಮತ್ತು ಸಾವುಕಾರರ ಸಂಬಂಧವು ಇಲಿ ಬೆಕ್ಕುಗಳಂತೆ ಆಗಿದೆ; ಅಥವಾ ಒಬ್ಬರು ಮತ್ತೊಬ್ಬರನ್ನು ಮೋಸಗೊಳಿಸಲು ಹೆಣಗುತ್ತಿರುವ ಶತ್ರುಗಳಂತೆ ಆಗಿದೆ. ಆದರೆ ಒಬ್ಬರು ಇನ್ನೊಬ್ಬರ ಹಿತವನ್ನು ಸಾಧಿಸುವುದೇ, ಸಾವುಕಾರನು ಒಕ್ಕಲಿಗರ ಉದ್ಯೋಗಗಳು ಊರ್ಜಿತಗೊಳ್ಳುವುದಕ್ಕಾಗಿ ಸಹಾಯ ಮಾಡುವುದೇ ಮತ್ತು ತಾವು ಪಡೆದುಕೊಂಡ ಸಾಲವನ್ನು ಸರಿಯಾಗಿ ಮುಟ್ಟಿಸುವುದು ತಮ್ಮ ಕುಲಧರ್ಮವೆಂದು ಜನರು ತಿಳಿಯುವುದೇ ದೇಶದ ಏಳಿಗೆಗೆ ಬೇಕಾದ ಮುಖ್ಯವಾದ ಮಾತು. ಈ ತರದ ಸಂಬಂಧವು ಪೀಳಿಗೆಯಿಂದ ಪೀಳಿಗೆಗೆ ನಡೆದುಬರಬೇಕು. ಆದರೆ ಈಗ ಮಾತ್ರ ಇಂಥ ಸಂಬಂಧವು ಉಳಿದಿಲ್ಲ.

೧೧ ಈಗಿನ ಸಾವುಕಾರ ಮತ್ತು ಸಾಲಗಾರನ ಸಂಬಂಧದಂತೆಯೇ ಯಜಮಾನ ಮತ್ತು ಆಳುಮಗನ ಸಂಬಂಧವೂ ಇದೆ.

## ೭ ಜೀವನವೇತನ

೧ ಮನುಷ್ಯನು ಯಾವುದೆ ಪ್ರಕಾರದ ದುಡಿತವನ್ನು ಮಾಡುತಿರಲಿ ಅವನು ಇಡೀ ದಿವಸ ತನ್ನ ಸಾಧನಗಳ ಮತ್ತು ಶಿಕ್ಷಣದ ಯೋಗ್ಯವೂ ಪ್ರಾಮಾಣಿಕವೂ ಆದ ಉಪಯೋಗ ಮಾಡುತ್ತಿದ್ದರೆ ಅವನಿಗೆ ತಕ್ಕಷ್ಟು ಕೂಲಿ ಅಥವಾ ಜೀವನವೇತನವು ದೊರೆಯಲೇಬೇಕು. ಅವನ ಮತ್ತು ಅವನನ್ನು ಅವಲಂಬಿಸಿದ ದುರ್ಬಲ ಆಶ್ರಿತರ ಸಮಾಧಾನಕಾರಕ ಪಾಲನೆ ಪೋಷಣೆಗೆ ದೊರೆಯುವ ಧನವೇ ಜೀವನವೇತನ.

೨ ಇಡೀ ದಿವಸವೆಂದರೆ ಎಂಟುಗಂಟೆ ಎಂದು ತಿಳಿಯತಕ್ಕದ್ದು. ಹಳ್ಳಿಗಳಲ್ಲಿಯ ಈಗಿನ (೧೯೪೦) ಸಾಧನಗಳು, ಇರುವ ಪದ್ಧತಿ, ಜೀವನ ಮರ್ಯಾದೆ, ಜೀವನದ ಮಟ್ಟವನ್ನು ಮೇಲಕ್ಕೆತ್ತರಿಸುವ ಅವಶ್ಯಕತೆ, ಹಾಗೆಯೇ ಪದಾರ್ಥಗಳ ಬೆಲೆ ಮುಂತಾದವುಗಳನ್ನು ಯೋಚಿಸಲಾಗಿ ಎಂಟುಗಂಟೆಯು ಒಂದುದಿನ ಮತ್ತು ಗಂಟೆಗೆ ಒಂದಾಣೆ ಕೂಲಿ ಹೀಗೆ ನಿರ್ಧರಿಸುವುದು ಯೋಗ್ಯವೆನಿಸುವುದು.

೩ ಆ ಮಟ್ಟವನ್ನು ಒಮ್ಮೆಲೆ ಮುಟ್ಟುವ ಸಾಮರ್ಥ್ಯವು ನಮ್ಮಲ್ಲಿಲ್ಲದಿದ್ದರೂ ಆ ದಿಕ್ಕಿಗೆ ಸಾಗತಕ್ಕದ್ದಿದೆ ಎಂಬುದನ್ನು ಲಕ್ಷಿಸಿ ನಾವು ಮುಂದೆ ಹೆಜ್ಜೆ ಇಕ್ಕುತ್ತ ಹೋಗಬೇಕು.

ಖಾತೆಯ ನೀತಿಯು ದನಗಳ ಸಾಕುವಿಕೆಗೆ ಅನುಕೂಲವಾಗಿರತಕ್ಕದ್ದು, ಮತ್ತು ದನಗಳ ಆಹಾರಕ್ಕಾಗಿಯೆ ಕೆಲವು ಹೊಲಗಳನ್ನು ಬೆಳೆಯತಕ್ಕದ್ದು.

೭ ಒಕ್ಕಲುತನ ಹಾಗೂ ಇತರ ಉದ್ಯೋಗಗಳ ವಿಷಯದಲ್ಲಿ ಸದ್ಯಕ್ಕೆ ರೂಢಿಯಲ್ಲಿರುವ ಧನೋತ್ಪಾದಕ ದೃಷ್ಟಿಯು ತರವಲ್ಲ. ಜನರಿಗೆ ಸುಂಕ, ಕಂದಾಯ, ಸಾಲ ಮುಂತಾದವುಗಳ ಚಿಂತೆಯು ಇಲ್ಲದೆ ಇದ್ದರೆ ಅವರು ಕೈಗಾರಿಕೆಗಳಿಂದ ತಯಾರಿಸಲ್ಪಟ್ಟ ಪದಾರ್ಥಗಳನ್ನು ಆದಷ್ಟು ಹೆಚ್ಚಿಗೆ ಮಾರಿ ಹೆಚ್ಚು ಬೆಲೆಯನ್ನು ಪಡೆಯುವ ಗೋಜಿಗೆ ಹೋಗುವುದಿಲ್ಲ. ತಮ್ಮ ತಮ್ಮ ಕುಟುಂಬ, ಸಮಾಜ ಇಲ್ಲವೆ ಹಳ್ಳಿಗೆ ಯಾವ ಪದಾರ್ಥಗಳು ಎಷ್ಟೆಷ್ಟು ಬೇಕಾಗುವವೆಂಬ ದೃಷ್ಟಿಯಿಂದಲೆ ಉದ್ಯೋಗ ಮಾಡುವರು.

೮ ಹೀಗೆ ಒಕ್ಕಲಿಗನು ಮೊದಲು ಹುಲ್ಲು-ಹೊಟ್ಟು, ಧಾನ್ಯ ಮುಂತಾದ್ದನ್ನು ಸಂಗ್ರಹಿಸಿ ಇಟ್ಟುಕೊಳ್ಳುವ ವಿಚಾರವನ್ನೆ ಮಾಡುವನು. ಹೆಚ್ಚು ಲಾಭ ಧಾರಣೆ ಮುಂತಾದ ಕಡೆಗೆ ಗಮನವಿತ್ತು ಹತ್ತಿ, ಎಣ್ಣೆಕಾಳು, ಹೊಗೆಸೊಪ್ಪು ಮುಂತಾದ ವಸ್ತುಗಳನ್ನು ಬೆಳೆಸಲು ಅವನು ಬಯಸುವುದಿಲ್ಲ; ಅದರ ಗೋಜಿಗೂ ಹೋಗುವುದಿಲ್ಲ.

೯ ಹೆಚ್ಚು ಹಣವನ್ನು ಸಂಪಾದಿಸಬೇಕೆಂಬ ವ್ಯಾಪಾರದ ದೃಷ್ಟಿಯಿಂದ ಒಕ್ಕಲುತನ ಮಾಡಿದರೆ ಕೊನೆಯಲ್ಲಿ ಲಾಭವು ಸಿಗುವುದೆ ಇಲ್ಲ. ಒಂದು ಕಡೆಯಿಂದ ಬಂದ ಹಣವು ಇನ್ನೊಂದು ಕಡೆಗೆ ಹೊರಟುಹೋಗುವುದು. ಇದರಿಂದ ನೈತಿಕ ಬಲಕ್ಕೆ ಹಾನಿಯೂ ತಟ್ಟುವುದು. ಸ್ವತಃ ತಾವು ಮಾಡುತ್ತಿರುವ ಒಕ್ಕಲುತನದಿಂದ ತಮ್ಮ ಮತ್ತು ಅನ್ಯರ ಶಾರೀರಿಕ ಮಾನಸಿಕ ಮತ್ತು ನೈತಿಕ ಹಾನಿಯು ಎಷ್ಟಾಗುತ್ತಿರುವುದೆಂಬ ಯೋಚನೆ ಮಾಡುವ ಕರ್ತವ್ಯಬುದ್ಧಿಯೆ ಅವರಲ್ಲಿ ಉಂಟಾಗುವುದಿಲ್ಲ. ಆ ಬುದ್ಧಿಯು ನಾಶವಾಗಿಯೇ ಹೋಗುತ್ತದೆ. ಅವರು ಹೊಗೆಸೊಪ್ಪು, ಅಫೀಮು ಮುಂತಾದ್ದನ್ನು ಬೆಳೆಯಿಸುವದೆ ಇದಕ್ಕೆ ಸಾಕ್ಷಿ.

## ೨ ಪೋಷಕ ಇಲ್ಲವೆ ಪೂರಕ ಉದ್ಯೋಗಗಳು

೧ ಹಿಂದುಸ್ತಾನದಲ್ಲಿ ಒಕ್ಕಲುತನಕ್ಕೆ ಎಷ್ಟೋ ನೈಸರ್ಗಿಕ ಸಂಕಟಗಳು ಇರುವವು. ಈ ಉಪಟಳಗಳನ್ನು ದೂರಮಾಡಲು ಎಷ್ಟೇ ಉಪಾಯಗಳನ್ನು ಮಾಡಿದರೂ ಅವು ಸ್ವಲ್ಪ ಹೆಚ್ಚುಕಡಿಮೆ ಪ್ರಮಾಣದಲ್ಲಿ ಇರತಕ್ಕವೇ. ಒಕ್ಕಲುತನವು ಹನ್ನೆರಡು ತಿಂಗಳೂ ಮಾಡುವಂಥ ಉದ್ಯೋಗ

೫ ನಿಜವಾಗಿಯೂ ನೋಡಿದರೆ ಕೂಲಿಕಾರರ ಇಲ್ಲವೆ ಕೋಟ್ಯಾನು ಕೋಟಿ ಜನರ ಸುಖದ ಬಗೆಗೆ ಈ ಕೆಳಗಿನಂತೆ ಯೋಚನೆ ಮಾಡಬೇಕು.

(ಅ) ಮನುಷ್ಯನಲ್ಲಿ ದುಡಿಯುವ ಶಕ್ತಿಯು ಸ್ವಾಭಾವಿಕವಾಗಿಯೇ ಇದೆ. ಆದರೆ ಈ ಶಕ್ತಿಯು ಕುಗ್ಗಿ ಹೋಗುವಷ್ಟು ಎಂದರೆ ತಾನು ಸ್ವತಃ ದುಡಿದು ತನ್ನ ನಿರ್ವಾಹಮಾಡಿಕೊಂಡು ಹೋಗಲು ಅಯೋಗ್ಯನಾಗುವಷ್ಟು, ಮನುಷ್ಯನು ಯಂತ್ರಾದಿ ಬಾಹ್ಯ ಸಾಧನಗಳಿಗೆ ಅಧೀನನಾಗುವಂತೆ ಮಾಡಕೂಡದು.

(ಆ) ಶಾರೀರಿಕ ಶ್ರಮಪಡುವ ಶಕ್ತಿಯು ಬೆಳೆಯಬೇಕು. ಕೂಲಿಕಾರನ ಶಕ್ತಿಯನ್ನು ಹೆಚ್ಚಿಸುವ ದೃಷ್ಟಿಯನ್ನು ಇಟ್ಟುಕೊಂಡೆ ಅವನು ಮಾಡುವ ಕೆಲಸದ ಸಮಯ, ಅವನ ಮನೆಮಾರು, ಮುಂತಾದ ಅನುಕೂಲತೆಗಳ ಬಗೆಗೆ ಯೋಚಿಸಬೇಕು.

(ಇ) ಅತ್ಯಂತ ಸೂಕ್ಷ್ಮ ಶ್ರಮವಿಭಾಗವನ್ನುಮಾಡಿ ಕೂಲಿಕಾರನನ್ನು ಜಡಯಂತ್ರದಂತೆ ಮಾಡಿ ಅವನಿಂದ ೩-೪ ಗಂಟೆ ನೀಸರವಾದ ಯಾಂತ್ರಿಕ ಕಾರ್ಯವನ್ನು ಮಾಡಿಸಿಕೊಂಡು, ಬಳಿಕ ಅವನಿಗೆ ಆನಂದ ಉತ್ಸಾಹಗಳ ಕಡೆಗೆ ಮನಸ್ಸು ಹಾಕಲು ಬಿಡುವನ್ನು ಕೊಟ್ಟುಬಿಡುವುದರಿಂದ ಮಾನವ ಜಾತಿಯ ಕಲ್ಯಾಣವಾಗುವದಿಲ್ಲ. ಕೂಲಿಕಾರನು ದುಡಿಯುವಾಗಲೇ ಅವನಿಗೆ ಆನಂದವು ದೊರೆಯುವಂತೆ, ಅಲ್ಲಿಯೆ ವಿನೋದ ಪವೃತ್ತಿಗೆ ಇಂಬು ದೊರೆಯುವಂತೆ, ಅಲ್ಲಿಯೆ ಆಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲು ಬರುವಂತೆ ಉದ್ಯೋಗ ವ್ಯವಸಾಯಗಳನ್ನು ರಚಿಸುವ ದಾರಿಯನ್ನು ಹುಡುಕಬೇಕು.

(ಈ) ಮನುಷ್ಯನಿಗೆ ಉದ್ಯೋಗದ ಪ್ರವೃತ್ತಿ ಇದ್ದಮೇಲೆ ಅವನಿಗೆ ಬೇರೆ ಪ್ರವೃತ್ತಿಗಳು ಇರುವ ಅವಶ್ಯಕತೆಯೇ ಇಲ್ಲವೆಂದು ಅಥವಾ ಬಿಡುವೇ ಬೇಡವೆಂದು ಇದರ ಅರ್ಥವಾಗುವುದಿಲ್ಲ. ಪ್ರತಿಯೊಬ್ಬನಿಗೂ ಯಾವದೊಂದು ನಿರ್ದಿಷ್ಟವಾದ ಮನರಂಜನೆಯ ಪ್ರವೃತ್ತಿಯು ಇರಬೇಕು; ಆ ಪ್ರವೃತ್ತಿಗಾಗಿ ಅವನಿಗೆ ಬಿಡುವೂ ದೊರೆಯಬೇಕು. ಆದರೆ ಅದೆಲ್ಲವೂ ಗೌಣವಾಗಿಯೆ ಇರಬೇಕು, ಪ್ರಧಾನವಾಗಿರಕೂಡದು. ಬಹಳ ಜನರು ತಮ್ಮ ಬಿಡುವಿನ ವೇಳೆಯನ್ನು ಯೋಗ್ಯವಾಗಿ ಉಪಯೋಗಿಸುವಂತೆ ಜನತೆಗೆ ಸಾಕಷ್ಟು ಸಂಸ್ಕಾರವು ಇನ್ನೂ ಸಿಕ್ಕಿಲ್ಲ. ಹೆಚ್ಚು ಜನರು ತಮ್ಮ

ಬಿಡುವಿನ ಸಮಯವನ್ನು ನಿದ್ರೆ, ವ್ಯಸನ ಮತ್ತು ದೋಷಪೂರಿತವಾದ ಭೋಗಗಳಲ್ಲಿ ಕಳೆಯುವ ಭಯವಿರುವುದೆಂದು ಹೇಳಬಹುದು.

(ಉ) ಮನುಷ್ಯನು ತನ್ನ ಉಪಜೀವನಕ್ಕಾಗಿ ಚನ್ನಾಗಿ ಪರಿಶ್ರಮ ಪಡಬೇಕಾಗುವದು. ಇದು ಸೃಷ್ಟಿಯು ಮನುಷ್ಯನ ಮೇಲೆ ಮಾಡುವ ಕೋಪವಲ್ಲ, ಅನುಗ್ರಹ. ನಮ್ಮ ಶ್ರಮಪಡುವ ಶಕ್ತಿಯು ಹೆಚ್ಚಾಗಬೇಕೆಂಬ ಧ್ಯೇಯವೆ ನಮ್ಮಲ್ಲಿರಬೇಕು, ಶ್ರಮಪಡಬಾರದೆಂಬ ಧ್ಯೇಯವಿರ ಕೂಡದು.

(ಊ) ಯಜಮಾನನು ಕೂಲಿಕಾರರ ವ್ಯವಸ್ಥಾಪಕನಾಗಿ ಅವರವರ ಯೋಗ್ಯತೆಯ ಪ್ರಕಾರ ಕೆಲಸವನ್ನು ಕೊಡಬೇಕು ಮತ್ತು ಅದಕ್ಕೆ ತಕ್ಕಷ್ಟು ಕೂಲಿಯನ್ನೂ ಕೊಡಬೇಕು, ಅನುಕೂಲತೆಗಳನ್ನು ಒದಗಿಸಿ ಕೊಡಬೇಕು; ಕೂಲಿಕಾರನು ಯಜಮಾನನ ಕೆಲಸವು ತನ್ನ ಕೆಲಸವೆಂದೆ ತಿಳಿದು ಅದನ್ನು ಮನವಿಟ್ಟು ಮಾಡಬೇಕು; ಎಂದರೆ ಇಬ್ಬರ ಹಿತವೂ ಆಗುವುದು.

(ಎ) ಇದಕ್ಕಾಗಿ ಸ್ವಂತ ಬಂಡವಲು ಇರಬೇಕೋ ಇರಬಾರದೊ ಎಂಬ ಪ್ರಶ್ನೆ ಬಹಳ ಮಹತ್ವದ್ದಲ್ಲ. ಆದರೆ ಉದ್ಯೋಗ ಮತ್ತು ವಾಣಿಜ್ಯದ ಧ್ಯೇಯದಲ್ಲಿ ಪರಿವರ್ತನೆ ಆಗಬೇಕಾದುದು ಬಹಳ ಮಹತ್ವದ್ದು.

(ಏ) ವ್ಯಾಪಾರವನ್ನು ಬೆಳೆಯಿಸುವುದಕ್ಕಾಗಿ ಹೊಸ ಹೊಸ ಅವಶ್ಯಕತೆಗಳನ್ನು ಹೆಚ್ಚಿಸುವುದು ಉದ್ಯೋಗದ ಧ್ಯೇಯವಲ್ಲ. ರೂಢವಾದ ಮತ್ತು ಹೊಸದಾಗಿ ಹುಟ್ಟುವ ಅವಶ್ಯಕತೆಗಳ ಪೂರೈಕೆಯನ್ನು ಆದಷ್ಟು ಚನ್ನಾಗಿ ಮಾಡುವುದೆ ಉದ್ಯೋಗದ ಧ್ಯೇಯ. ವ್ಯಾಪಾರದ ಪ್ರಯೋಜನವಿರುವುದೂ ಇಷ್ಟಕ್ಕಾಗಿಯೆ. ಇದರಂತೆ ನಡೆಯುವಾಗ ಎಷ್ಟೋ ಹೊಸ ವಸ್ತುಗಳು ಬೇಕಾಗುವದೇನೊ ನಿಜ. ಆದರೆ ಈ ಧ್ಯೇಯವನ್ನು ನೆನಪಿನಲ್ಲಿಟ್ಟುಕೊಂಡರೆ ಹಿಂದುಳಿದವರೆಂದು ಎನಿಸಿಕೊಳ್ಳುವ ಜನರ ಅವಶ್ಯಕತೆಗಳನ್ನು ಹೆಚ್ಚಿಸುವ ಗೋಜಿಗೆ ವಾಣಿಜ್ಯವು ಹೋಗಲಾರದು ಮತ್ತು ಅವರ ರಕ್ತವನ್ನು ಹೀರಬೇಕೆನ್ನುವ ನೀತಿಗೆ ಆಸ್ಪದವನ್ನು ಕೊಡಲಾರದು. ಹೀಗಾದರೆ ಕೂಲಿಕಾರರೂ ಯಜಮಾನರೂ ಅನ್ಯೋನ್ಯಾಶ್ರಯದಿಂದ ಇರುವರು.

(ಐ) ಇಂಥ ಧ್ಯೇಯವಿಲ್ಲದಿದ್ದರೆ ಸಿರಿವಂತ ವ್ಯಕ್ತಿಯ ಬದಲು ಜಡ ಯಂತ್ರವು ಅಥವಾ ತಂತ್ರವು ಎಲ್ಲರ ಯಜಮಾನನಾಗುವುದು, ಇಲ್ಲವೆ

ಒಬ್ಬನು ಯಜಮಾನನು ಇನ್ನೊಬ್ಬನು ಕೂಲಿಕಾರನು ಆಗುವನು. ಇದರಿಂದ ಮನುಷ್ಯನ ಸುಖವು ಹೆಚ್ಚುವುದಿಲ್ಲ.

## ೯ ಸ್ವಾವಲಂಬನ ಮತ್ತು ಶ್ರಮವಿಭಾಗ

೧ ಸ್ವಾವಲಂಬನವು ಶ್ರಮವಿಭಾಗಕ್ಕೆ ವಿರೋಧಿಯಲ್ಲ. ಪರದೇಶಗಳ ಸಂಗಡ ಔದ್ಯೋಗಿಕ ಸಂಬಂಧವನ್ನು ಇಟ್ಟುಕೊಳ್ಳಲು ಸ್ವಾವಲಂಬನವು ಅಡ್ಡಿ ತರುವದಿಲ್ಲ. ಸಮಾಜದ ಘಟಕನಾದ ಮನುಷ್ಯನು ಸಂಪೂರ್ಣ ಸ್ವಾವಲಂಬಿಯಾಗುವುದು, ಎಂದರೆ ತನ್ನ ಎಲ್ಲ ಅವಶ್ಯಕತೆಗಳನ್ನು ತಾನೇ ಪೂರೈಸಿಕೊಳ್ಳುವುದು ಸಾಧ್ಯವಿಲ್ಲ. ಒಂದು ವೇಳೆ ಸಂಪೂರ್ಣ ಸ್ವಾವಲಂಬಿಯಾಗಲು ಯತ್ನಿಸಿದರೆ ಅದು ವ್ಯರ್ಥ ಹೋರಾಟ ಮಾತ್ರವಾಗುವುದು, ಅಹಂಕಾರವಾಗುವುದು. ಇಡೀ ಜಗತ್ತಿನೊಡನೆ ಪ್ರೇಮದಿಂದ ಬಾಳಬೇಕೆನ್ನುವವನು ಅಹಿಂಸೆಯಿಂದ ಒಂದುಗೂಡಬೇಕೆನ್ನುವವನು ಸ್ವಯಂಪರ್ಯಾಪ್ತ(Self-sufficient)ನಾಗುವ ಮೋಹಕ್ಕೆಬೀಳಬಾರದು.

೨ ತಾನೇ ಪೂರೈಸಿಕೊಳ್ಳಲು ಬರುವಂಥ ಎಷ್ಟೋ ಅವಶ್ಯಕತೆಗಳು ಉಂಟು; ಮತ್ತು ಅವಕ್ಕಾಗಿ ಸೃಷ್ಟಿಯ ಅನುಕೂಲತೆಗಳೂ ಒದಗಿ, ಇಂಥ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮನುಷ್ಯನು ಸ್ವಾವಲಂಬಿಯಾದರೆ ಅದು ದೋಷವೆನಿಸುವ ಬದಲು ಯೋಗ್ಯವೆನಿಸುವುದು. ಇಂಥ ಅವಶ್ಯಕತೆಗಳನ್ನು ಒದಗಿಸಿಕೊಳ್ಳಲು ಅನ್ಯರ ಪರಿಶ್ರಮವನ್ನು ಇಚ್ಛಿಸಿ ಅದನ್ನು ಉಪಯೋಗಿಸಿಕೊಳ್ಳಬೇಕೆಂದೂ ಅವುಗಳ ಸಲುವಾಗಿ ಅನ್ಯರೊಡನೆ ಆರ್ಥಿಕ ಸಂಬಂಧವನ್ನು ಇಡಬೇಕೆಂದೂ ನಿಯಮವಿಲ್ಲ. ಉದಾ: ತನ್ನ ಬಟ್ಟೆಗಳನ್ನು ಅಗಸರಿಂದಲೆ ಒಗೆಸಿಕೊಳ್ಳಬೇಕೆಂಬ, ಕಕ್ಕಸುಗಳನ್ನು ಭಂಗಿಯವನಿಂದಲೇ ಚೊಕ್ಕಟ ಮಾಡಿಸಿಕೊಳ್ಳಬೇಕೆಂಬ, ಕ್ಷೌರವನ್ನು ಕ್ಷೌರಿಕನಿಂದಲೇಮಾಡಿಸಿಕೊಳ್ಳಬೇಕೆಂಬ, ಮತ್ತು ಆಹಾರವನ್ನು ಹೋಟಿಲಿನಲ್ಲಿಯೇ ತೆಗೆದುಕೊಳ್ಳಬೇಕೆಂಬ ನಿರ್ಬಂಧವಿಲ್ಲ. ಈ ವಿಷಯಗಳಲ್ಲಿ ನಾವು ಸ್ವಾವಲಂಬಿಗಳಾಗಬಹುದು.

೩ ಇದೇ ನಿಯಮವು ದೇಶದ ಮತ್ತು ಜನರ ವ್ಯವಹಾರಕ್ಕೂ ಅನ್ವಯಿಸುವದು. ಹಿಂದುಸ್ತಾನದಲ್ಲಿ ತಕ್ಕಷ್ಟು ಧಾನ್ಯಗಳೂ ಹತ್ತಿಯೂ ಬೆಳೆಯುತ್ತದೆ. ಆದ್ದರಿಂದ ಅನ್ನ ವಸ್ತ್ರಗಳ ವಿಷಯದಲ್ಲಿ ಸ್ವಾವಲಂಬಿಯಾಗಿ ಸ್ವಯಂಪರ್ಯಾಪ್ತವಾಗುವದರಲ್ಲಿ ಅದಕ್ಕೆ ಅಭಿಮಾನವಿರಬೇಕು. ಆದರೆ

ಹೀಗೆ ಮಾಡಿದಾಕ್ಷಣಕ್ಕೆ ಅದು ಅನ್ಯ ದೇಶಗಳೊಡನೆ ಔದ್ಯೋಗಿಕ ಸಂಬಂಧವನ್ನು ಇಡಲು ಇಚ್ಛಿಸುವದಿಲ್ಲವೆಂದು ಅರ್ಥವಲ್ಲ.

೪ ಇದೇ ತೆರನಾಗಿ ನೈಸರ್ಗಿಕ ಅನುಕೂಲತೆಗಳುಳ್ಳ ಎಲ್ಲ ಉದ್ಯೋಗಗಳ ಬೆಳವಣಿಗೆಗಾಗಿ ಉಪಾಯಗಳನ್ನು ಕೈಕೊಂಡರೆ ಅದರಲ್ಲಿ ದೋಷವೇನೂ ಇಲ್ಲ. ಇಂತಹ ಆರ್ಥಿಕ ಯೋಜನೆಗಳನ್ನು ಮಾಡದೆ ಪ್ರಜರ ಸುಖವನ್ನು ಬಯಸುವುದು ನಿರರ್ಥಕ.

೫ ಹಿಂದುಸ್ತಾನದ ಧಾನ್ಯವನ್ನು ಪರದೇಶಕ್ಕೆ ಕಳಿಸಿ ಅಲ್ಲಿಂದ ಅನ್ನ ರೊಟ್ಟಿಗಳನ್ನು ತರಿಸಿಕೊಳ್ಳುವುದು, ಎಳ್ಳು ಮತ್ತು ನೆಲಗಡಲೆಗಳನ್ನು ಪರದೇಶಗಳಿಗೆ ಕಳಿಸಿ ಅಲ್ಲಿಂದ ಎಣ್ಣೆ ತರಿಸಿಕೊಳ್ಳುವದು, ಮತ್ತು ಹತ್ತಿಯನ್ನು ಕಳಿಸಿ ಬಟ್ಟೆಯನ್ನು ತರಿಸಿಕೊಳ್ಳುವುದು ಅಯೋಗ್ಯವು. ಇದಕ್ಕೆ ದೇಶದೇಶಾಂತರದ ಶ್ರಮವಿಭಾಗವೆಂಬ, ದೇಶದೇಶಾಂತರದ ಸಹಕಾರ ಪದ್ಧತಿಯೆಂಬ ಹೆಸರು ಸಲ್ಲದು. ಬಟ್ಟೆಯನ್ನು ತಯಾರಿಸಲು ಲ್ಯಾಂಕೇಶಾಯರಿನಂಥ ಕಲ್ಲಿದ್ದಲಿಯ ಆಗರವಾದ, ಆರ್ದ್ರ ಹವೆಯುಳ್ಳ ಪ್ರದೇಶಗಳಲ್ಲಿ ಮಾತ್ರ ನೈಸರ್ಗಿಕ ಅನುಕೂಲತೆಗಳು ಇವೆ ಎಂಬ ಕುಂಟುಕಾರಣಗಳನ್ನು ತೋರಿಸಿ ಅಲ್ಲಿಂದಲೆ ಬಟ್ಟೆಗಳನ್ನು ತಯಾರು ಮಾಡಿಸಿ ತರಿಸಿಕೊಂಡರೆ ಅದು ಶ್ರಮವಿಭಾಗತತ್ವದ ಮತ್ತು ಸಹಕಾರತತ್ವದ ದುರುಪಯೋಗವೇ ಸರಿ.

## ೧೦ ಸ್ವದೇಶಿ

೧ ಕಚ್ಚಾ ಸಾಮಾನು ಹುಟ್ಟುವ ಕಡೆಯಲ್ಲಿಯೇ ಅದಕ್ಕೆ ಸಂಬಂಧಪಟ್ಟ ಉದ್ಯೋಗಗಳನ್ನು ನಡೆಯಿಸಬೇಕೆನ್ನುವದು ಪ್ರತಿಯೊಂದು ದೇಶದ ಆರ್ಥಿಕನೀತಿಯಾಗಿರಬೇಕು. ಇದಕ್ಕೆ ಆರ್ಥಿಕ ದೃಷ್ಟಿಯಿಂದಲೂ ರಾಜಕೀಯ ದೃಷ್ಟಿಯಿಂದಲೂ 'ಸ್ವದೇಶಿ ಚಳವಳಿ' ಎನ್ನುವರು.

೨ ಕಚ್ಚಾ ಸಾಮಾನು ಪರದೇಶಕ್ಕೆ ಹೋಗಿ ಅಲ್ಲಿಂದ ಅದು ಸಿದ್ಧಪದಾರ್ಥಗಳ ರೂಪದಲ್ಲಿ ಸ್ವದೇಶಕ್ಕೆ ಮರಳಿ ಬರುವ ಪದ್ಧತಿಯು ಆರ್ಥಿಕ ದೃಷ್ಟಿಯಿಂದ ಎಷ್ಟೇ ಲಾಭಕರವೆನಿಸಿದರೂ, ಇದರಲ್ಲಿ ಲೆಕ್ಕದಲ್ಲಿ ತಪ್ಪಾಗಿರುವ ಸಂದರ್ಭವಾವರೂ ಇದೆ; ಎಲ್ಲಿಯಾದರೂ ಅನ್ಯಾಯ, ಅಧರ್ಮ, ಅತ್ಯಾಚಾರಗಳು ಜರಗುವ ಸಂದರ್ಭವೂ ಇದೆ. ಇದರ ಹೊರತು ಆರ್ಥಿಕ ಲಾಭವು ಅಸಂಭವವೇ ಸರಿ.

೩ ‘ ಫ್ರೀ ಟ್ರೇಡ್ ’ ಅರ್ಥಾತ್ ಸುಂಕರಹಿತ ಮುಕ್ತ ವ್ಯಾಪಾರವೆಂದು ಯಾವುದಕ್ಕೆ ಇಂಗ್ಲಂಡು ಹೆಸರಿಟ್ಟಿದೆಯೋ ಅದು ನಿಜವಾಗಿಯೂ ಹಾಗಿರುವುದಿಲ್ಲ. ಏಕೆಂದರೆ ಅದು ತನ್ನ ದೇಶದ ಉದ್ಯೋಗಗಳು ಚಿರಂಜೀವಿಯಾಗಿರುವುದಕ್ಕಾಗಿ ಮತ್ತು ಪರದೇಶಗಳ ಉದ್ಯೋಗಗಳು ನಷ್ಟವಾಗುವುದಕ್ಕಾಗಿ ಸುಂಕದ ಉಪಯೋಗವನ್ನು ಮಾಡುವುದಿಲ್ಲವಲ್ಲದೆ ಸೈನ್ಯದ ಬಲವನ್ನೂ ರಾಜಕೀಯ ಅಧಿಕಾರವನ್ನೂ ಕುಟಿಲ ನೀತಿಯನ್ನೂ ಉಪಯೋಗಿಸುವುದು. ಇದು ಸ್ವದೇಶೀ ನೀತಿಯ ಅನ್ಯಾಯದ ಮತ್ತು ಅಧಮ ಸ್ವರೂಪವು.

೪ ಆರ್ಥಿಕ ದೃಷ್ಟಿಯಿಂದ ಸ್ವದೇಶಿ ಮತ್ತು ಬಹಿಷ್ಕಾರ ಇವೆರಡರಲ್ಲಿ ಭೇದವೇನೂ ಇಲ್ಲ. ಕೋಟ್ಯಾನುಕೋಟಿ ಜನರ ನಿರ್ವಾಹವು ಯಾವ ವಸ್ತುಗಳಿಂದ ಆಗುತ್ತಿರುವುದೊ ಅಂಥ ವಸ್ತುಗಳನ್ನು ಪರದೇಶಗಳಿಂದ ತರಿಸದಿರುವುದು ಬಹಿಷ್ಕಾರವೆನಿಸುವುದು. ಈ ಬಹಿಷ್ಕಾರವು ಒಂದು ವಿಶಿಷ್ಟ ದೇಶದೊಡನೆ ಇರದೆ ಸರ್ವದೇಶಗಳೊಡನೆ ನಡೆದರೆ ಅದು ಸ್ವದೇಶಿಯೆ ಎನಿಸುವುದು.

೫ ಒಂದು ದೇಶದ ವಿರುದ್ಧವಾಗಿ ಸಾರಲ್ಪಟ್ಟ ಬಹಿಷ್ಕಾರವು ರಾಜಕೀಯ ಬಹಿಷ್ಕಾರವೆನಿಸುವುದು. ಆದ್ದರಿಂದ ಈ ಪ್ರಕರಣವಲ್ಲಿ ಅದನ್ನು ಕುರಿತು ಯೋಚಿಸುವುದು ಅವಶ್ಯವಿರುವುದಿಲ್ಲ.

## ೧೧ ಯಾಂತ್ರಿಕ ಸಾಧನಗಳು

೧ ಭಾರತೀಯ ಅರ್ಥಶಾಸ್ತ್ರದ ದೃಷ್ಟಿಯಿಂದ ಯಾಂತ್ರಿಕ ಸಾಧನಗಳು ಮತ್ತು ಅವುಗಳಲ್ಲಿ ಮಾಡತಕ್ಕ ಸುಧಾರಣೆಗಳು ಎಂಬ ಎರಡು ಭಾಗಗಳನ್ನು ಮಾಡಬಹುದು: (೧) ಪರಿಶ್ರಮ ಮಾಡುವ ಮನುಷ್ಯನ ಮತ್ತು ಪಶುವಿನ ಸ್ನಾಯುಗಳಿಗೆ ಶ್ರಮವು ಕಡಿಮೆಯಾಗುವುದಲ್ಲದೆ ವೇಳೆಯ ಉಳಿತಾಯವೂ ಆಗಬೇಕು ಎಂಬ ದೃಷ್ಟಿಯನ್ನೆ ಮುಖ್ಯವಾಗಿ ಇಟ್ಟುಕೊಂಡು ಯೋಜಿಸಲ್ಪಟ್ಟ ಯಂತ್ರಗಳು ಮತ್ತು ಅವುಗಳ ಸುಧಾರಣೆಗಳು. ಉದಾಹರಣೆಗೆ: ರಾಟಿ, ಬಾವಿಯರಾಟಿ, ಬೈಸಿಕಲ್ಲು, ಹೊಲಿಗೆ ಯಂತ್ರ, ಬೀಸುಕಲ್ಲು, ಚಕ್ಕಡಿ-ಬಂಡಿ ಮುಂತಾದವು; ಇವುಗಳ ಸವೆತವನ್ನು ಕಡಿಮೆ ಮಾಡಲು ಆದ ಸುಧಾರಣೆಗಳು; ಉದಾಹರಣೆಗೆ; ಸವೆಗುಂಡು (Ball bearing), ರಾಜಮಾರ್ಗ, ರೈಲುಮಾರ್ಗ, ಮುಂತಾದ್ದು. (೨) ಶ್ರಮಜೀವಿಗಳ

ಮತ್ತು ಶ್ರಮ ಪಡುವ ಪಶುಗಳ ಸ್ಥಾನಗಳನ್ನು ಆಕ್ರಮಿಸುವುದಕ್ಕಾಗಿ ಇಲ್ಲವೆ ಕೂಲಿಕಾರರ ಮತ್ತು ಪಶುಗಳ ಸಂಖ್ಯೆಯನ್ನು ಕಡಿಮೆ ಮಾಡುವುದ ಕ್ಕಾಗಿ, ಕೂಲಿಕಾರನ ಬುದ್ಧಿಚಾತುರ್ಯ ಮತ್ತು ಶಕ್ತಿಯ ಉಪಯೋಗ ಮಾಡಿಕೊಳ್ಳುವುದನ್ನು ಬಿಟ್ಟು ಅವನನ್ನು ಯಂತ್ರದಂತೆ ದುಡಿಸಿಕೊಳ್ಳು ವುದಕ್ಕಾಗಿ ಮಾಡಿದ ಯಂತ್ರಗಳು; ಉದಾಹರಣೆಗೆ: ಬತ್ತದ ಮತ್ತು ಹಿಟ್ಟಿನ ಗಿರಣಿ, ಗಾಣದ ಮತ್ತು ಸಕ್ಕರೆಯ ಕಾರಖಾನೆಗಳು; ನೂಲಿನ ಮತ್ತು ಬಟ್ಟೆಯ ಗಿರಣಿಗಳು; ಮೋಟಾರು, ರೈಲುಗಾಡಿ ಮೊದಲಾದ ವಸ್ತು ವಾಹನಗಳು, ಟ್ರಾಕ್ಟರು, ವಿದ್ಯುತ್ತಿನಿಂದ ನಡೆಯುವ ನೀರಿನ ನಲ್ಲಿಗಳು, ಸೂಕ್ಷ್ಮಶ್ರಮವಿಭಾಗದಿಂದ ಹುಟ್ಟಿದ ಯಂತ್ರ ಮುಂತಾದವು.

೨ ಮೊದಲಿನ ತರದ ಯಾಂತ್ರಿಕ ಸಾಧನಗಳು ಮತ್ತು ಸುಧಾರಣೆಗಳು ಅವಶ್ಯ ಬೇಕಾಗುವವು. ಇವುಗಳಿಂದ ಕೂಲಿಕಾರರ ಹಾಗೂ ಪಶುಗಳ ಸಂಖ್ಯೆಯು ಕಡಿಮೆಯಾಗಬಹುದು. ಆದರೆ ಅದು ಅತ್ಯಲ್ಪ.

೩ ಎರಡನೆ ತರದ ಯಂತ್ರಗಳನ್ನು ಮತ್ತು ಅವುಗಳ ಸುಧಾರಣೆಗಳ ಉಪಯೋಗವನ್ನು ಹೆಚ್ಚು ವಿವೇಕದಿಂದಲೂ ಎಚ್ಚರದಿಂದಲೂ ಮಾಡ ಬೇಕಾಗುವುದು. ಶಸ್ತ್ರಾಸ್ತ್ರ ಮತ್ತು ಮದ್ದು-ಗುಂಡುಗಳನ್ನು ಮಾಡಲು ಮತ್ತು ಉಪಯೋಗಿಸಲು ಹೇಗೆ ಸರಕಾರದ ಅಪ್ಪಣೆ ಪಡೆದುಕೊಳ್ಳಬೇಕಾ ಗುವದೊ ಮತ್ತು ಸರಕಾರದ ಅಂಕುಶವು ಇವುಗಳ ಮೇಲಿರುವದೊ ಹಾಗೆಯೆ ಎರಡನೆ ತರದ ಯಂತ್ರಗಳನ್ನು ಯಾರು ಎಷ್ಟರಮಟ್ಟಿಗೆ ಉಪ ಯೋಗಿಸಿಕೊಳ್ಳಬೇಕೆನ್ನುವ ಬಗೆಗೆ ಪ್ರಜಾಸತ್ತಾತ್ಮಕ ಸರಕಾರದ ಕಟ್ಟಳೆ ಇರಬೇಕು.

೪ ಈ ಕೆಳಗಿನ ಪರಿಸ್ಥಿತಿಯಲ್ಲಿ ಎರಡನೆ ತರದ ಯಂತ್ರಗಳನ್ನು ಉಪಯೋಗಿಸುವದು ದೋಷವೆನಿಸುವುದಿಲ್ಲ.

(ಅ) ಕೆಲಸವು ಹೆಚ್ಚು ಇದ್ದು ದುಡಿಯುವವರು ಕಡಿಮೆ ಇರುವಲ್ಲಿ ಅಥವಾ ಸಿಕ್ಕದಿರುವಲ್ಲಿ ಇಲ್ಲವೆ ಸಿಕ್ಕರೂ ಅವರನ್ನು ಕೆಲಸಕ್ಕೆ ತೊಡಗಿಸಲು ಬರದಂಥ ಕಡೆಯಲ್ಲಿ—ಉದಾ: ಉಗೆಹಡಗುಗಳ ಮೇಲೆ.

(ಆ) ಅಕಸ್ಮಾತ್ ಸಂಕಟಗಳು ಉದ್ಭವಿಸಿದಲ್ಲಿ, ಕೆಲಸವು ಅತ್ಯಂತ ತ್ವರೆಯಿಂದ ಮಾಡುವದು ಅವಶ್ಯವಿದ್ದಲ್ಲಿ ಮತ್ತು ಯಾಂತ್ರಿಕ ಸಾಧನೆಗಳ ಬದಲು ಅಸಂಖ್ಯ ಮನುಷ್ಯರನ್ನು ನಿಯಮಿಸುವದರಿಂದ ಅವ್ಯವಸ್ಥೆಯೂ, ಸಡಿಲೂ ತೊಂದರೆಗಳೂ ಹೆಚ್ಚಾಗುವಂತಹ ಪರಿಸ್ಥಿತಿಯಲ್ಲಿ: ಉದಾಹರ-

ಣಿಗೆ: ಬೆಂಕಿ ನೊಂದಿಸುವಾಗ, ಬರಗಾಲ ಮುಂತಾದ ದೈವೀಕೋಪಗಳಿಂದ ಜನರನ್ನು ರಕ್ಷಿಸುವಾಗ, ಪೀಡಿತರಿಗೆ ಧಾನ್ಯಾದಿಗಳನ್ನು ತಲ್ಪಿಸುವಾಗ.

(ಇ) ಸಹಯೋಗಿ ( ಜೊತೆ ) ಕಸಬುಗಳಿಗೆ ಎಡೆಗೊಡುವಂಥ ಅಥವಾ ಸಹಯೋಗಿ ಉದ್ಯೋಗಗಳನ್ನು ಊರ್ಜಿತಸ್ಥಿತಿಗೆ ಒಯ್ಯುವಂಥ ಮತ್ತು ಸಹಯೋಗಿ ಉದ್ಯೋಗಗಳನ್ನು ನಾಶಮಾಡದಂಥ ಯಂತ್ರಗಳು ಇರಬೇಕು; ಉದಾ: ಹೆಚ್ಚು ಕೆಲಸ ಕೊಡುವಂಥ ರಾಟೆಗಳು, ಹಗ್ಗ ಹೊಸೆಯುವ ಚಕ್ರ ಗಳು, ಮುಂತಾದವು.

(ಈ) ಮೊದಲಿನ ತರದ ಯಂತ್ರಗಳನ್ನು ಸಿದ್ಧಮಾಡುವ ಯಂತ್ರ ಗಳನ್ನು ಮತ್ತು ಅವುಗಳ ಉಪಕರಣಗಳನ್ನು, ವಿಶೇಷವಾಗಿ ಒಂದೇ ಅಳತೆ ಮತ್ತು ತೂಕಗಳನ್ನು, ಪದ್ಧತಿಯ ಯಂತ್ರಗಳನ್ನು ಮತ್ತು ಭಾಗಗಳನ್ನು ಮಾಡುವ ಅವಶ್ಯಕತೆ ಇರುವಾಗ.

(ಉ) ತೀರ ಸರಿಯಾಗಿ ಕೆಲಸ ಕೊಡುವಂಥ ಸೂಕ್ಷ್ಮ ಪದಾರ್ಥ ಗಳನ್ನು ಮಾಡುವುದು ಅವಶ್ಯವಿರುವಾಗ; ಉದಾ: ಗಡಿಯಾರ, ಟೈಪು ರೈಟರು, ಪ್ರಯೋಗಶಾಲೆಯ ಸಾಧನಗಳು ಇತ್ಯಾದಿ.

(ಊ) ಯಾವಾಗಲೂ ಬಹಳ ಜನರನ್ನು ಕೆಲಸಕ್ಕೆ ತೊಡಗಿಸಲು ಬರ ದಂಥ ಉದ್ಯೋಗಗಳಿದ್ದಲ್ಲಿ, ಇಂಥ ಉದ್ಯೋಗಗಳಿಂದ ಸಿದ್ಧವಾದ ವಸ್ತು ಗಳು ವಿಶೇಷವಾಗಿ ಸಾರ್ವಜನಿಕರಿಗೆ ಅವಶ್ಯವಿದ್ದಲ್ಲಿ; ಉದಾ: ನಲ್ಲಿಗಳು, ನಲ್ಲಿಗಳ ಬಾಯಿಗಳು.

(ಎ) ಸ್ವಂತ ಸಾಹಸದಿಂದ ಮಾಡಲು ಬರದಂಥ ಆದರೆ ಸರಕಾರ ದಿಂದ ಅಥವಾ ಸರಕಾರದ ಅಂಕುಶಕ್ಕೆ ಒಳಗಾಗಿ ನಡೆಯುವಂಥ ಉದ್ಯೋ ಗಗಳು ಇದ್ದಲ್ಲಿ; ಉದಾ: ರೈಲು ಬಂಡಿ, ಉಗೆಹಡಗು, ಮಹತ್ವದ ಕಣಿ ಗಳು, ಸೀಮೆ ಎಣ್ಣೆಯ ಬಾವಿಗಳು ಮುಂತಾದವು. ಇಂಥ ಕಡೆಗಳಲ್ಲಿ ಎರಡನೆ ತರದ ಯಂತ್ರಗಳನ್ನು ಉಪಯೋಗಿಸಬಹುದು.

೫ ಎರಡನೆ ತರದ ಯಂತ್ರಗಳ ಸಹಾಯದಿಂದ ನಡೆಯುವ ಉದ್ಯೋ ಗಗಳು ಎಷ್ಟು ಆವಶ್ಯವೋ ಅವುಗಳಿಗೆ ಬೇಕಾಗುವ ಕಾರಖಾನೆಗಳೂ ಅಷ್ಟೇ ಅವಶ್ಯ. ಉದಾ: ಕಬ್ಬಿಣ, ಉಪಕರಣಗಳು, ಯಂತ್ರಗಳು, ಕಾಜು, ವಿದ್ಯುತ್ ಮೊದಲಾದವುಗಳ ಕಾರಖಾನೆಗಳು ಮತ್ತು ಇವುಗಳ ಸಾಧನಗಳನ್ನು ತಯಾರಿಸುವ ಕಾರಖಾನೆಗಳು.

## ೧೨ ಅಂತರರಾಷ್ಟ್ರೀಯ ವ್ಯಾಪಾರ

೧ ಯಾವ ವಸ್ತುಗಳು ತಮ್ಮ ದೇಶದಲ್ಲಿ ಹುಟ್ಟುವುದಿಲ್ಲವೊ, ಹುಟ್ಟಿಸಲು ನೈಸರ್ಗಿಕ ಅನುಕೂಲತೆಗಳಿಲ್ಲವೊ ಅಥವಾ ಅತ್ಯಂತ ಕಷ್ಟದಿಂದ ಇಲ್ಲವೆ ಪರರನ್ನು ಪೀಡಿಸಿಯೆ ಹುಟ್ಟಿಸುವುದು ಸಾಧ್ಯವೊ, ಪರದೇಶಗಳು ಎದನ್ನು ತಯಾರಿಸುವ ಕಲೆಯನ್ನು ತಮ್ಮ ಜೀವ ಸವೆಸಿ ಹಸ್ತಗತ ಮಾಡಿಕೊಂಡಿರುವವೊ ಮತ್ತು ಎದರಿಂದ ಅವರ ಉಪಜೀವನವು ನಡೆಯುತ್ತಿರುವುದೊ, ಜೀವನದಲ್ಲಿ ಎದು ಅಷ್ಟು ಮಹತ್ವದ ಕಾರ್ಯಗಳಿಗೆ ಉಪಯೋಗವಿಲ್ಲವೋ ಅಥವಾ ಎದರ ಹೊರತಾಗಿ ಕೋಟ್ಯಂತರ ಜನರ ಜೀವನವು ಸಾಗಬಲ್ಲದೋ ಅಥವಾ ಎದರ ಉಪಯೋಗವು ನಿತ್ಯಜೀವನದಲ್ಲಿ ಆಗುವುದಿಲ್ಲವೊ, ಅಥವಾ ಎದರ ಹೊರತು ಸಾಮಾನ್ಯ ಜನರ ಜೀವನವು ಸುಸೂತ್ರವಾಗಿ ಸಾಗುವುದೊ ಅಂಥ ವಸ್ತುಗಳ ಅಂತರ್ರಾಷ್ಟ್ರೀಯ ವ್ಯಾಪಾರವನ್ನು ಮಾಡಬಹುದು.

೨ ಈ ವ್ಯಾಪಾರವನ್ನು ಮಾಡುವಾಗ ಯಾವ ತರದ ಬಲಾತ್ಕಾರವನ್ನೂ ಹಿಂಸೆಯನ್ನೂ ಮಾಡಬಾರದು, ಅಲ್ಲದೆ ರಾಜಾಧಿಕಾರವನ್ನು ಎಂದೂ ಉಪಯೋಗಿಸಕೂಡದು.

೩ ಮೇಲೆ ಹೇಳಿದ ವಸ್ತುಗಳನ್ನು ಯಾವುದೆ ರೀತಿಯಿಂದ ತಮ್ಮ ದೇಶದಲ್ಲಿಯೇ ಸಿದ್ಧಪಡಿಸಲು ಆಗ್ರಹತೊಟ್ಟರೆ ಅದು ಅಧರ್ಮ ಕೂಡ ಎನಿಸುವದು.

೪ ಪ್ರಯೋಗಶಾಲೆಗಳಲ್ಲಿ ಬಳಸುವಂತಹ ಎಕ್ಸ್‌ರೇ ಯಂತ್ರ, ವಿಶಿಷ್ಟ ಮಾದರಿಯ ಗಡಿಯಾರ, ಕಾಶ್ಮೀರಿನ ಉಣ್ಣೆಯ ಬಟ್ಟೆ, ಕೇಸರಿ ಏಲಕ್ಕಿ ದಾಲಚಿನ್ನಿ ಮುಂತಾದ ವಿಶಿಷ್ಟ ಪ್ರಕಾರದ ವನಸ್ಪತಿ ಮುಂತಾದ ವಸ್ತುಗಳು ಅಂತರ್ರಾಷ್ಟ್ರೀಯ ವ್ಯಾಪಾರಕ್ಕೆ ಯೋಗ್ಯವಾದವುಗಳೆನ್ನ ಬಹುದು.

## ಸಪ್ತಮ ಖಂಡ

# ಉದ್ಯೋಗ

## ೧ ಒಕ್ಕಲುತನ

೧ ಹಿಂದುಸ್ತಾನಕ್ಕೆ ಒಕ್ಕಲುತನವು ತನ್ನ ಪ್ರಾಣದಷ್ಟೆ ಪ್ರಿಯವಾದ ಉದ್ಯೋಗ. ಹಿಂದುಸ್ತಾನದ ಶೋಷಣವು ಮಿತಿಮೀರಿ ನಡೆದಿದ್ದರೂ ಈ ದೇಶವು ಈ ವರೆಗೂ ಜೀವಿಸಿದೆ. ಆಹಾರದ ವಿಷಯದಲ್ಲಿ ಪರಾವಲಂಬಿಯಾಗದಿದ್ದುದೆ ಇದಕ್ಕೆ ಕಾರಣ. ಹಿಂದುಸ್ತಾನದ ಈ ಸ್ವಾವಲಂಬನ ವೃತ್ತಿಗೂ ಈಗ ಕುತ್ತು ಉಂಟಾಗುವ ಸಂದರ್ಭವಿದೆ.

೨ ಹಿಂದುಸ್ತಾನದ ಆರ್ಥಿಕ ಹಾಗೂ ರಾಜಕೀಯ ನೀತಿಯು ಒಕ್ಕಲುತನವನ್ನು ನಾಶಮಾಡುತ್ತಲಿದೆ. ಆದ್ದರಿಂದ ಇಂದು ಒಕ್ಕಲುತನವು ಒಂದು ಗಳಿಕೆಯ ಉದ್ಯೋಗವಲ್ಲ.

೩ ಬ್ರಿಟಿಷ್ ರಾಜ್ಯತಂತ್ರದಲ್ಲಿ ಭೂಮಿಯ ಮೇಲಿನ ಕರದ ಭಾರವು ಮೊಟ್ಟ ಮೊದಲನೆಯ ಭಾರವೆಂದು ಕಾಯಿದೆಯಿಂದ ಪ್ರಸ್ಥಾಪಿಸಿದ್ದಾರೆ. ಆದರೆ ಸ್ವರಾಜ್ಯದಲ್ಲಿ ಮಾತ್ರ ಈ ಸಂಗತಿಯು ತದ್ವಿರುದ್ಧವಿರತಕ್ಕದ್ದು. ಒಕ್ಕಲಿಗರ ಹೊರೆಯೆ ರಾಜ್ಯದ ಮೇಲಿರಬೇಕು ಮತ್ತು ತೆರಿಗೆ ಮುಂತಾದ ಕರಗಳನ್ನು ಒಕ್ಕಲುತನಕ್ಕೆ ಪೆಟ್ಟುಬೀಳದಂತೆ ಹೇರಬೇಕು ಮತ್ತು ವಸೂಲು ಮಾಡಬೇಕು.

೪ ದೇಶಕ್ಕೆ ಬೇಕಾಗುವಷ್ಟು ಧಾನ್ಯವನ್ನು ಸಂಗ್ರಹಿಸಲು ಬರುವಂತೆ ಸ್ವರಾಜ್ಯದ ಆರ್ಥಿಕ ನೀತಿಯನ್ನು ರಚಿಸಬೇಕು.

೫ ಹಿಂದುಸ್ತಾನದಲ್ಲಿ ಈ ವರೆಗೂ ಹಣ್ಣುಹಂಪಲಿನ ಗಿಡಗಳ ಬೆಳೆವಣಿಗೆಯ ಕಡೆಗೆ ತಕ್ಕಷ್ಟು ಲಕ್ಷ್ಯಗೊಟ್ಟಿಲ್ಲ. ಆದ್ದರಿಂದ ಇತ್ತಕಡೆ ವಿಶೇಷ ಗಮನಕೊಡತಕ್ಕದ್ದು.

೬ ಒಕ್ಕಲಿಗರು ಹೆಚ್ಚಾಗಿರುವ ಕಡೆಯಲ್ಲಿ ದನಗಳನ್ನು ಮೇಯಿಸುವುದಕ್ಕೆ ಭೂಮಿಯ ಅವಶ್ಯಕತೆಯುಂಟು. ಒಕ್ಕಲು ಹಾಗೂ ಕಾಡಿನ

ಖಾತೆಯ ನೀತಿಯು ದನಗಳ ಸಾಕುವಿಕೆಗೆ ಅನುಕೂಲವಾಗಿರತಕ್ಕದ್ದು, ಮತ್ತು ದನಗಳ ಆಹಾರಕ್ಕಾಗಿಯೆ ಕೆಲವು ಹೊಲಗಳನ್ನು ಬೆಳೆಯತಕ್ಕದ್ದು.

೭ ಒಕ್ಕಲುತನ ಹಾಗೂ ಇತರ ಉದ್ಯೋಗಗಳ ವಿಷಯದಲ್ಲಿ ಸದ್ಯಕ್ಕೆ ರೂಢಿಯಲ್ಲಿರುವ ಧನೋತ್ಪಾದಕ ದೃಷ್ಟಿಯು ತರವಲ್ಲ. ಜನರಿಗೆ ಸುಂಕ, ಕಂದಾಯ, ಸಾಲ ಮುಂತಾದವುಗಳ ಚಿಂತೆಯು ಇಲ್ಲದೆ ಇದ್ದರೆ ಅವರು ಕೈಗಾರಿಕೆಗಳಿಂದ ತಯಾರಿಸಲ್ಪಟ್ಟ ಪದಾರ್ಥಗಳನ್ನು ಆದಷ್ಟು ಹೆಚ್ಚಿಗೆ ಮಾರಿ ಹೆಚ್ಚು ಬೆಲೆಯನ್ನು ಪಡೆಯುವ ಗೋಜಿಗೆ ಹೋಗುವುದಿಲ್ಲ. ತಮ್ಮ ತಮ್ಮ ಕುಟುಂಬ, ಸಮಾಜ ಇಲ್ಲವೆ ಹಳ್ಳಿಗೆ ಯಾವ ಪದಾರ್ಥಗಳು ಎಷ್ಟೆಷ್ಟು ಬೇಕಾಗುವವೆಂಬ ದೃಷ್ಟಿಯಿಂದಲೆ ಉದ್ಯೋಗ ಮಾಡುವರು.

೮ ಹೀಗೆ ಒಕ್ಕಲಿಗನು ಮೊದಲು ಹುಲ್ಲು-ಹೊಟ್ಟು, ಧಾನ್ಯ ಮುಂತಾದ್ದನ್ನು ಸಂಗ್ರಹಿಸಿ ಇಟ್ಟುಕೊಳ್ಳುವ ವಿಚಾರವನ್ನೆ ಮಾಡುವನು. ಹೆಚ್ಚು ಲಾಭ ಧಾರಣೆ ಮುಂತಾದ ಕಡೆಗೆ ಗಮನವಿತ್ತು ಹತ್ತಿ, ಎಣ್ಣೆಕಾಳು, ಹೊಗೆಸೊಪ್ಪು ಮುಂತಾದ ವಸ್ತುಗಳನ್ನು ಬೆಳೆಸಲು ಅವನು ಬಯಸುವುದಿಲ್ಲ; ಅದರ ಗೋಜಿಗೂ ಹೋಗುವುದಿಲ್ಲ.

೯ ಹೆಚ್ಚು ಹಣವನ್ನು ಸಂಪಾದಿಸಬೇಕೆಂಬ ವ್ಯಾಪಾರದ ದೃಷ್ಟಿಯಿಂದ ಒಕ್ಕಲುತನ ಮಾಡಿದರೆ ಕೊನೆಯಲ್ಲಿ ಲಾಭವು ಸಿಗುವುದೆ ಇಲ್ಲ. ಒಂದು ಕಡೆಯಿಂದ ಬಂದ ಹಣವು ಇನ್ನೊಂದು ಕಡೆಗೆ ಹೊರಟುಹೋಗುವುದು. ಇದರಿಂದ ನೈತಿಕ ಬಲಕ್ಕೆ ಹಾನಿಯೂ ತಟ್ಟುವುದು. ಸ್ವತಃ ತಾವು ಮಾಡುತ್ತಿರುವ ಒಕ್ಕಲುತನದಿಂದ ತಮ್ಮ ಮತ್ತು ಅನ್ಯರ ಶಾರೀರಿಕ ಮಾನಸಿಕ ಮತ್ತು ನೈತಿಕ ಹಾನಿಯು ಎಷ್ಟಾಗುತ್ತಿರುವುದೆಂಬ ಯೋಚನೆ ಮಾಡುವ ಕರ್ತವ್ಯಬುದ್ಧಿಯೆ ಅವರಲ್ಲಿ ಉಂಟಾಗುವುದಿಲ್ಲ. ಆ ಬುದ್ಧಿಯು ನಾಶವಾಗಿಯೇ ಹೋಗುತ್ತದೆ. ಅವರು ಹೊಗೆಸೊಪ್ಪು, ಅಫೀಮು ಮುಂತಾದ್ದನ್ನು ಬೆಳೆಯಿಸುವದೆ ಇದಕ್ಕೆ ಸಾಕ್ಷಿ.

## ೨ ಪೋಷಕ ಇಲ್ಲವೆ ಪೂರಕ ಉದ್ಯೋಗಗಳು

೧ ಹಿಂದುಸ್ತಾನದಲ್ಲಿ ಒಕ್ಕಲುತನಕ್ಕೆ ಎಷ್ಟೋ ನೈಸರ್ಗಿಕ ಸಂಕಟಗಳು ಇರುವವು. ಈ ಉಪಟಳಗಳನ್ನು ದೂರಮಾಡಲು ಎಷ್ಟೇ ಉಪಾಯಗಳನ್ನು ಮಾಡಿದರೂ ಅವು ಸ್ವಲ್ಪ ಹೆಚ್ಚುಕಡಿಮೆ ಪ್ರಮಾಣದಲ್ಲಿ ಇರತಕ್ಕವೇ. ಒಕ್ಕಲುತನವು ಹನ್ನೆರಡು ತಿಂಗಳೂ ಮಾಡುವಂಥ ಉದ್ಯೋಗ

ವಾಗಲಾರದು. ಒಕ್ಕುವ ದಿನಗಳಲ್ಲಿಯೂ ಒಕ್ಕಲಿಗರು ಸತತವಾಗಿ ಶ್ರಮಪಡ ಬೇಕಾಗುವುದಿಲ್ಲ, ಹಾಗೂ ಒಂದೊಂದು ಸಲ ಬಿಡಿದಿನಗಳಲ್ಲಿಯೂ ಹೆಚ್ಚು ಕೆಲಸಗಾರರು ಬೇಕಾಗುವರು. ಆ ಮಧ್ಯಂತರದ ಈ ಬಿಡುವಿನ ಕಾಲದಲ್ಲಿ ಭೂಮಿಯ ಒಡೆಯರೂ ಅವರ ಮನೆಯವರೂ ಕೆಲಸಗೇಡಿಗಳಾಗುವರು. ಅದಕ್ಕೋಸುಗ ಒಕ್ಕಲುತನದ ಜೊತೆಗೆ ಯಾವುದಾದರೊಂದು ಪೋಷಕ ಉದ್ಯೋಗವು ಬೇಕೇಬೇಕು. ಆದ್ದರಿಂದ ಒಕ್ಕಲುತನ ಮತ್ತು ಉದ್ಯೋಗ ಈ ಎರಡರಲ್ಲಿ ಒಂದನ್ನು ಇನ್ನೊಂದರಿಂದ ಬೇರ್ಪಡಿಸಲಾಗುವುದಿಲ್ಲ.

೨ ಪೋಷಕ ಉದ್ಯೋಗಗಳಿಗೆ ಕೆಳಗಿನ ಅನುಕೂಲತೆಗಳಿರಬೇಕು.

(ಅ) ಅವು ಮುಖ್ಯವಾದ ಉದ್ಯೋಗ ( ಒಕ್ಕಲುತನ ) ಕ್ಕೆ ಅನುಕೂಲ ವಾಗಿರತಕ್ಕದ್ದು. ಅವಕ್ಕಾಗಿ ಒಕ್ಕಲುತನವನ್ನು ಹಾಳುಮಾಡಿಕೊಳ್ಳುವಂಥ ಸಂದರ್ಭವು ಬರಕೂಡದು.

(ಆ) ಮುಖ್ಯ ಉದ್ಯೋಗಕ್ಕೋಸ್ಕರ ಶ್ರಮಿಸಬೇಕಾದ ಸಂದರ್ಭದಲ್ಲಿ ಕೂಡ ಹಾನಿಯಾಗದಂತೆ ಅವುಗಳನ್ನು ಊರ್ಜಿತ ಸ್ಥಿತಿಯಲ್ಲಿ ಇಟ್ಟು ಕೊಳ್ಳಲು ಬರುವಂಥವು ಇರಬೇಕು ಅಥವಾ ಹೆಚ್ಚು ಗಮನವನ್ನು ಅಪೇಕ್ಷಿ ಸದೆ ಸರಿಯಾಗಿ ನಡೆದುಕೊಂಡು ಹೋಗುವಂಥವು ಇರಬೇಕು.

(ಇ) ಇದಲ್ಲದೆ ಇವು ನಿತ್ಯ ಕೂಲಿಯ ಕೈಗಾರಿಕೆಗಳಾಗುವುದರ ಬದಲು ಸ್ವತಂತ್ರ ಕೂಲಿಯ ಉದ್ಯೋಗಗಳಾಗಿರಬೇಕು.

(ಈ) ಮೇಲೆ ವಿವರಿಸಿದ ಕಾರಣಗಳಿಗನುಸಾರವಾಗಿರುವ ಉದ್ಯೋಗ ಗಳಿಗೆ ಬೇಕಾಗುವ ಯಂತ್ರ ಇಲ್ಲವೆ ಸಾಮಗ್ರಿಗಳಿಗೋಸ್ಕರ ಬರಿಗೈಯ ಪ್ರಜರು ಶಕ್ತಿಮೀರಿ ಬಂಡವಲು ಹಾಕುವಂಥ ಪ್ರಸಂಗವು ಬರಕೂಡದು.

(ಉ) ಈ ಉದ್ಯೋಗಗಳು ಹೊಲಗಳ ಬಳಿಯಲ್ಲಿ ಅಥವಾ ಮನೆಯಲ್ಲಿ ಇಲ್ಲವೆ ಹಳ್ಳಿಯಲ್ಲಿಯೆ ಕುಳಿತು ಮಾಡಲು ಬರುವಂಥವಿರಬೇಕು.

(ಊ) ಈ ಉದ್ಯೋಗಗಳನ್ನು ಬಹಳ ಜನರು ಮಾಡಿದರೂ ಅವು ಗಳಿಂದ ಹುಟ್ಟುವ ವಸ್ತುಗಳು ಹೆಚ್ಚು ವೆಚ್ಚವಾಗುವಂಥವು ಇರಬೇಕು. ಎಂದರೆ ಅವು ಸರ್ವಪ್ರಿಯ ಮತ್ತು ಸರ್ವರಿಗೂ ಬೇಕಾಗುವಂಥವು ಇರಬೇಕು.

(ಎ) ಬಹಳ ಜನರಿಗಾಗಿ ಆ ಉದ್ಯೋಗಗಳ ವ್ಯವಸ್ಥೆಯನ್ನು ಮಾಡಿ ಕೊಡಬೇಕಾದ ಪ್ರಸಂಗವು ಬಂದರೆ ಅಷ್ಟು ಪ್ರಮಾಣದಲ್ಲಿ ಭರದಿಂದಲೂ ಸರಳವಾಗಿಯೂ ಕಡಿಮೆ ವೆಚ್ಚದಿಂದಲೂ ಯಂತ್ರಾದಿಗಳನ್ನು ಉಪಯೋ- ಗಿಸಿ, ಮಾಡಿಕೊಡಲು ಬರುವಂತೆ ಅವು ಇರಬೇಕು.

(ಏ) ಇದಲ್ಲದೆ ಅಗತ್ಯವಿದ್ದರೆ, ಆ ಉದ್ಯೋಗಗಳು ಅಶಿಕ್ಷಿತ, ಮಂದ ಬುದ್ಧಿಯ, ನಿರ್ಬಲ, ಚಿಕ್ಕ–ದೊಡ್ಡ ಸರ್ವಪ್ರಕಾರದ ಸಾವಿರಾರು ಜನರಿಗೂ ಮಾಡಲು ಬರುವಂತೆ ಇರಬೇಕು.

(ಐ) ಮೇಲಾಗಿ ಕೆಲಸ ಮಾಡುವಾಗ ಅವು ಮನುಷ್ಯನನ್ನು ಜಡ ಯಂತ್ರಗಳಂತೆ ಆನಂದರಹಿತ ಮತ್ತು ರಸಹೀನನನ್ನಾಗಿ ಮಾಡುವಂಥವು ಇರಕೂಡದು; ಮತ್ತು ಕೆಲಸವು ಮುಗಿದ ಬಳಿಕ ಬೇಸರ ಹುಟ್ಟಿಸುವಂಥವೂ ದಣಿಸುವಂಥವೂ ಇರಕೂಡದು.

೩ ಈ ಪೋಷಕ ಉದ್ಯೋಗಗಳಲ್ಲಿ ನೂಲುವ ರಾಟಿ ಮತ್ತು ಗೋಪಾ-ಲನೆ ಇವೆರಡಕ್ಕೆ ಪ್ರಮುಖ ಸ್ಥಾನವನ್ನು ಕೊಡತಕ್ಕದ್ದು. ಪ್ರಾಚೀನ ಕಾಲದಿಂದಲೂ ಇವೆರಡೂ ಉದ್ಯೋಗಗಳು ಒಕ್ಕಲುತನದೊಡನೆ ಹೆಣೆದು ಕೊಂಡು ಬಂದಿರುವವು, ಅಲ್ಲದೆ ದೀರ್ಘಕಾಲದ ಒರೆಗಲ್ಲಿಗೆ ತಾಗಿ ಪಾರಾಗಿ ಬಂದಿರುವವು.

೪ ತಂತಿ, ಅಂಚೆ, ಉಗೆಬಂಡಿ ಮೊದಲಾದವು ಅಖಿಲ ಭಾರತೀಯ ಖಾತೆಗಳೆನಿಸುವವು. ಹಾಗೆಯೇ ರಾಟಿ ಮತ್ತು ಗೋಪಾಲನೆಯು ಅಖಿಲ ಭಾರತದ ದೃಷ್ಟಿಯಿಂದ ಅತ್ಯಂತ ಮಹತ್ವವುಳ್ಳವು. ಇವು ದೊಡ್ಡ ಪ್ರಮಾಣ ದಲ್ಲಿ ಮತ್ತು ಶಕ್ಯವಿದ್ದಷ್ಟು ಬಹಳ ಜನರು ಸರಳವಾಗಿ ಮತ್ತು ಅನುಕೂಲತೆ ಗಳಿಗೆ ತಕ್ಕಂತೆ ಮಾಡಲು ಬರುವಂಥ ಉದ್ಯೋಗಗಳು.

೫ ಮುಂದಿನ ಪ್ರಕರಣಗಳಲ್ಲಿ ಈ ಎರಡೂ ಉದ್ಯೋಗಗಳನ್ನು ಕುರಿತು ಹೆಚ್ಚು ವಿಸ್ತಾರವಾದ ವಿವರಗಳು ಬರುವವು. ಗೋಪಾಲನೆಗೆ ಭೂಮಿಯ ಬಂಡವಲೂ ಸ್ವಲ್ಪ ಹೆಚ್ಚು ಬೇಕು. ಆದ್ದರಿಂದ ಇದು ಸ್ವಂತ ಭೂಮಿ ಯಿದ್ದ ಒಕ್ಕಲಿಗರ ಪೋಷಕ ಉದ್ಯೋಗವಾಗಬಹುದು, ಆದರೆ ಕೂಲಿ ಯಿಂದ ಉಪಜೀವಿಸುವಂಥ ಸಹಸ್ರಾರು ಜನಗಳ ಉದ್ಯೋಗವಾಗಲಾರದು. ಮೇಲಾಗಿ ಇದು ಸ್ವತಂತ್ರ ಉದ್ಯೋಗ ಕೂಡ ಆಗಬಹುದು. ಆದರೆ ನೂಲುವ ಕೈಗಾರಿಕೆಯು, ಗೋಪಾಲನೆ ಮತ್ತು ಒಕ್ಕಲುತನ ಇವೆರಡರ ಜೊತೆಗೂ ನಯಡೆಬಲ್ಲದು. ಈ ದೃಷ್ಟಿಯಿಂದ ಗೋಪಾಲನೆಗಿಂತ ರಾಟಿಗೆ ಹೆಚ್ಚು ಮಹತ್ವವಿದೆ. ಆದರೂ ಗೋಪಾಲನೆ ಮತ್ತು ನೂಲುವದು ಇವೆರಡೂ ಒಕ್ಕಲಿಗರಿಗೆ ಪೂರಕ ಉದ್ಯೋಗಗಳಾಗಬಲ್ಲವು.

೬ ರಾಟಿಗೆ ಹೆಚ್ಚು ಮಹತ್ವವು ಇದೆ ಅಥವಾ ಇರತಕ್ಕದ್ದು ಎಂಬ ಮಾತಿನಲ್ಲಿ ರಾಟಿಯ ಹೊರತು ಇನ್ನಾವ ಉದ್ಯೋಗಗಳೂ ಇರಲಾರವೆಂಬ

ಭಾವವಿಲ್ಲ. ಸ್ಥಾನಿಕ ಪರಿಸ್ಥಿತಿಯು ಅನುಕೂಲವಿದ್ದು ನೂಲುವ ಉದ್ಯೋಗಕ್ಕಿಂತಲೂ ಹೆಚ್ಚು ಲಾಭಕಾರಿಯಾದ ಪೂರಕ ಉದ್ಯೋಗಗಳನ್ನು ಮಾಡಲು ಬರುವಂತಿದ್ದರೆ ಅದರ ಬದಲಾಗಿ ಅಥವಾ ಅದರ ಸಂಗಡ ಅವನ್ನೂ ಮಾಡಬಹುದು. ಸ್ಥಾನಿಕ ರಾಜ್ಯತಂತ್ರವೂ ಪ್ರಜಾತಂತ್ರವೂ ಈ ಉದ್ಯೋಗಗಳ ಕಡೆಗೆ ಹೆಚ್ಚು ಗಮನ ಕೊಟ್ಟು ಅವನ್ನು ಬೆಳೆಸಲು ಯತ್ನಿಸ ಬೇಕು. ಹೀಗೆ ಮಾಡುವುದು ಅವುಗಳ ಕರ್ತವ್ಯಕರ್ಮವಾಗಿದೆ.

೭ ಯಾವ ಹಳ್ಳಿಯಲ್ಲಿ ಯಾವ ಕಚ್ಚಾ ಸಾಮಾನು ಹುಟ್ಟುವುದೊ ಅದನ್ನು ಸಂಗ್ರಹಿಸಲಿಕ್ಕೂ ಮಾರಲಿಕ್ಕೂ ಮತ್ತು ಮನುಷ್ಯನ ಉಪಯೋಗಕ್ಕೆ ಯೋಗ್ಯವನ್ನಾಗಿ ಮಾಡುವುದಕ್ಕೂ ಯಾವ ಕ್ರಿಯೆಗಳು ಬೇಕಾಗುವವೊ ಅವೆಲ್ಲವೂ ಅದೇ ಹಳ್ಳಿಯಲ್ಲಿ ಆಗಬೇಕು-ಎಂದರೆ ಕಚ್ಚಾ ಸಾಮಾನು ತಯಾರಿಸುವವನು ಅಲ್ಲಿಯೇ ಇರತಕ್ಕದ್ದು. ಉದಾ: ಪರದೇಶಗಳಿಗೆ ಮತ್ತು ಪಟ್ಟಣಗಳಿಗೆ ಬತ್ತವು ಹೋಗುವುದಿಲ್ಲ, ಅಕ್ಕಿಯು ಹೋಗುತ್ತದೆ, ಮತ್ತು ತಿನ್ನಲು ಅಕ್ಕಿಯೇ ಯೋಗ್ಯವಾದದ್ದು. ಪರದೇಶಗಳಿಗೂ ಪಟ್ಟಣ ಗಳಿಗೂ ಗೋದಿಯ ಬದಲು ಹಿಟ್ಟು ದೊಡ್ಡ ಪ್ರಮಾಣದಲ್ಲಿ ಹೋಗುತ್ತದೆ ಮತ್ತು ಆ ಹಿಟ್ಟಿನಿಂದ ತಯಾರಿಸಿದ ರೊಟ್ಟಿ ಬಿಸ್ಕೀಟು ಮುಂತಾದವುಗಳ ಮಾರಾಟವೂ ಚನ್ನಾಗಿ ಆಗುತ್ತದಲ್ಲದೆ, ಜನರೂ ಈ ಪದಾರ್ಥಗಳನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಕಬ್ಬಿನಿಂದ ಬೆಲ್ಲವನ್ನೂ ಸಕ್ಕರೆಯನ್ನೂ ಮಾಡಿದ ಮೇಲೆಯೇ ತಿನ್ನಲಿಕ್ಕೆ ಬರುವದು. ಎಣ್ಣೆಕಾಳುಗಳ ಉಪಯೋ ಗವು ಎಣ್ಣೆ ಮಾಡಿದ ಮೇಲೆಯೆ ಹೆಚ್ಚಾಗಿ ಆಗುವುದು. ಹತ್ತಿಯ ಉಪ ಯೋಗವು ಬಟ್ಟೆಯಿಂದಾಗುವದು. ಚರ್ಮದಿಂದ ತಯಾರಿಸಿದ ವಸ್ತುಗಳ ಮುಖಾಂತರವೆ ಚರ್ಮದ ಉಪಯೋಗವಾಗುವುದು. ಆದುದರಿಂದ ಬತ್ತ ಕುಟ್ಟುವ, ಹಿಟ್ಟು ಬೀಸುವ, ಬಿಸ್ಕೀಟು ರೊಟ್ಟಿ ಮಾಡುವ, ಎಣ್ಣೆ ತೆಗೆಯುವ, ನೇಯುವ, ಚರ್ಮ ಹೊಲಿಯುವ ಕೆಲಸಗಳು ಕೂಡ ಗ್ರಾಮದಲ್ಲಿಯೆ ನಡೆಯು ತಕ್ಕದ್ದು. ಈ ಉದ್ಯೋಗಗಳು ಒಕ್ಕಲಿಗರ, ಹಳ್ಳಿಗರ ಪೂರಕ ಕೈಕೆಲಸ ಗಳಾಗಬಹುದು.

೮ ಇಂಥ ಕೈಗಾರಿಕೆಗಳು ಪೂರಕ ಉದ್ಯೋಗಗಳಾಗಿ ನಡೆದರೆ ಹಳ್ಳಿಗ ರಿಗೆ ಎಷ್ಟೋ ಲಾಭವಾಗುವುದು. ಉದಾಹರಣೆಗೆ ಬತ್ತದ ಗೊಳಲಿ, ತೌಡು, ಗೋದಿಯ ಹೊಟ್ಟು, ಕಬ್ಬಿನ ಸೊಪ್ಪೆ, ಎಣ್ಣೆಕಾಳಿನ ಹಿಂಡಿ, ಹತ್ತಿಯ ಕಾಳು, ಸೂಲಿನ ಗುಂಜು ಮುಂತಾದ ವಸ್ತುಗಳು ದನಗಳಿಗಾಗಿ

ಉಪಯೋಗವಾಗುವವು, ಅಥವಾ ಗೊಬ್ಬರವಾಗುವವು. ಇವುಗಳಿಂದ ಬೇರೆ ಉದ್ಯೋಗಗಳೂ ಹುಟ್ಟಬಹುದು.

## ೩ ಸಂಪೂರ್ಣ ಸ್ವದೇಶಿ

೧ ಸ್ವದೇಶೀ ವಸ್ತುಗಳಿಗೆ ಉತ್ತೇಜನವನ್ನು ಕೊಡತಕ್ಕದ್ದು. ಸ್ವದೇಶೀ ಧರ್ಮದ ಪಾಲನೆಯಲ್ಲಿಯೆ ಈ ವಿಷಯದ ಸಮಾವೇಶವಾಗಿಬಿಡುತ್ತದೆ. ಸ್ವದೇಶೀ ವಸ್ತಗಳ ಪ್ರೋತ್ಸಾಹನೆಗಾಗಿ ಹೂಡುವ ಚಳವಳಿಯಲ್ಲಿ ವಿವೇಕದ ಅವಶ್ಯಕತೆ ಇದೆ.

೨ ವಿವೇಕದಿಂದ ಯೋಚಿಸದಿದ್ದರೆ ಸ್ವದೇಶಿಯ ಹೆಸರಿನಿಂದ ತಿಳಿದಾಗಲಿ ತಿಳಿಯದೆ ಆಗಲಿ ಆಡಂಬರವು ಹೆಚ್ಚಾಗುವುದು, ಅನೇಕ ಕಾರ್ಯಕರ್ತರ ಶಕ್ತಿಯು ವ್ಯರ್ಥವಾಗುವುದು ಮತ್ತು ಆತ್ಮಹಾನಿಯಾಗುವುದು.

೩ ಯಾವ ವಸ್ತುಗಳ ಪ್ರಚಾರಕ್ಕೋಸ್ಕರ ಹೆಚ್ಚು ಸಹಾಯವು ಅವಶ್ಯವಿರುವುದಿಲ್ಲವೊ ಅಥವಾ ಜಾಹೀರಾತಿನ ಅವಶ್ಯಕತೆ ಇರುವುದಿಲ್ಲವೊ ಅಂಥ ವಸ್ತುಗಳ ಪ್ರದರ್ಶನವನ್ನು ಜರುಗಿಸುವ ಅಗತ್ಯವಿರುವದಿಲ್ಲ. ಏಕೆಂದರೆ ಅದರಿಂದ ಅವುಗಳ ಬೆಲೆಯು ಹೆಚ್ಚಾಗಿ, ಒಬ್ಬರು ಇನ್ನೊಬ್ಬರೊಡನೆ ಮೇಲಾಟಹೂಡಿ ವೈರವನ್ನು ಕಟ್ಟಿಕೊಳ್ಳುವ, ಅನಿಷ್ಟವಾದ ಜಗಳವು ಬೆಳೆಯುವ ಸಂಭವವುಂಟು.

೪ ಉದಾಹರಣೆಗಾಗಿ ಬಟ್ಟೆಯ ಗಿರಣಿ, ಸಕ್ಕರೆಯ ಗಿರಣಿ, ಅಕ್ಕಿಯ ಗಿರಣಿಗಳಿಗೆ ಸಹಾಯ ಮಾಡುವುದು ಅವಶ್ಯವೆನಿಸುವುದಿಲ್ಲ. ಇದೇ ರೀತಿ ಕಾಗದದ ದೇಶೀ ಗಿರಣಿ, ಎಣ್ಣೆಯ ಗಿರಣಿ, ಪರದೇಶೀ ಔಷಧಗಳನ್ನು ತಯಾರಿಸುವ ದೇಶೀ ಕಾರಖಾನೆ, ಸಾಬೋನು, ದಂತಮಂಜನ, ಬ್ರಶ್ ಮುಂತಾದ ಪದಾರ್ಥಗಳ ಕಾರಖಾನೆ, ಚರ್ಮದ ದೊಡ್ಡ ಕಾರಖಾನೆ ಮುಂತಾದವುಗಳೂ ಸಹಾಯಕ್ಕೆ ಪಾತ್ರವೆಂದು ಹೇಳಲಾಗದು.

೫ ಪರದೇಶದ ಕಾಗದ, ಸಕ್ಕರೆ, ಅಕ್ಕಿ, ಬಟ್ಟೆ, ಎಣ್ಣೆ, ಔಷಧ, ಸಾಬೋನು, ದಂತಮಂಜನ, ಬ್ರಶ್ ಮುಂತಾದ ಪದಾರ್ಥಗಳನ್ನು ಬಳಸಕೂಡದೆಂಬ ಕಟ್ಟಪ್ಪಣೆ ಇಲ್ಲವೆಂದು ಇದರ ಅರ್ಥವಲ್ಲ. ಯಾವುದಕ್ಕೆ ಪರದೇಶದ ದಾಳಿಯನ್ನು ತಡೆಯುವಷ್ಟು ಶಕ್ತಿಯು ಇಲ್ಲವೊ ಅದಕ್ಕೆ ಪೂರ್ಣ ಸಹಾಯವನ್ನೀಯಬೇಕು ಮತ್ತು ಯಾರು ಈ ವಸ್ತುಗಳನ್ನು ಉಪಯೋಗಿಸಲೇಬೇಕಾಗಿದೆಯೊ ಅವರೇ ಅವುಗಳಿಗೆ ಮನ್ನಣೆಯನ್ನೀಯಬೇಕು.

೬ ಇಂದು ನಡೆಯಬೇಕಾದ ಸ್ವದೇಶೀ ಚಳವಳಿಯು ಈ ವಸ್ತುಗಳಿಗೋಸ್ಕರವಲ್ಲ. ಇಂದು ಗ್ರಾಮೋದ್ಯೋಗಗಳನ್ನು ಸಂರಕ್ಷಿಸಬೇಕಾಗಿದೆ. ಎಂದರೆ ಖಾದಿ, ಬೆಲ್ಲ, ಹಳ್ಳಿಯಲ್ಲಿ ಹುಟ್ಟಿದ ಸಕ್ಕರೆ, ಕೈಯಿಂದ ಕುಟ್ಟಿದ ಅಕ್ಕಿ, ಹಳ್ಳಿಯ ಕಾಗದ, ಗಾಣದ ಎಣ್ಣೆ, ಹಳ್ಳಿಯಲ್ಲಿ ಮಾಡಿದ ಪಾತ್ರೆಗಳು, ಅಂಟುವಳಕಾಯಿ, ಹಲ್ಲು ಉಜ್ಜುವ ಕಡ್ಡಿ, ಪೊರಕೆ, ಹುಲ್ಲಿನ ಚಾಪೆ, ಬುಟ್ಟಿ, ಹಗ್ಗ, ಗುಡಾರ, ಚರ್ಮದ ವಸ್ತುಗಳು ಮುಂತಾದ ಹಳ್ಳಿಯ ನೂರಾರು ಉದ್ಯೋಗಗಳು ಪ್ರೋತ್ಸಾಹನವಿಲ್ಲದೆ ಸತ್ತುಹೋಗಿವೆ. ಇಂಥ ಉದ್ಯೋಗಗಳಿಗೆ ಜೀವದಾನವನ್ನು ಕೊಡುವುದು ಹೆಚ್ಚು ಅಗತ್ಯವಿದೆ.

೭ ಈ ವಿಷಯದಲ್ಲಿ ಈಗಿನ ಪಟ್ಟಣಿಗರೂ ಶಿಕ್ಷಿತರೂ ಹಳ್ಳಿಗಳ ಬಗೆಗೆ ತೋರಿಸುವ ಅಲಕ್ಷ್ಯವು ಅಕ್ಷಮ್ಯವಾದುದು.

೮ ಸ್ವಲ್ಪ ವರ್ಷಗಳ ಮೊದಲು ಹಳ್ಳಿಗರು ತಮಗೆ ಬೇಕಾಗುವ ಎಷ್ಟೋ ಪದಾರ್ಥಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಇಷ್ಟೇ ಅಲ್ಲ, ಎಷ್ಟೋ ಜನರು ದೈನಿಕ ಉಪಯೋಗಕ್ಕೆ ಬೇಕಾಗುವ ವಸ್ತುಗಳಿಗಾಗಿ ಹಳ್ಳಿಗರನ್ನು ಅವಲಂಬಿಸಬೇಕಾಗುತ್ತಿತ್ತು. ಆದರೆ ಈಗ ಅವರ ಬದಲಾಗಿ ಅವರು ಪಟ್ಟಣ ಇಲ್ಲವೆ ಪರದೇಶಗಳಿಂದ ಆ ವಸ್ತುಗಳನ್ನು ತರಿಸಿಕೊಳ್ಳುತ್ತಾರೆ. ಮತ್ತು ಪರಂಪರೆಯಿಂದ ನಡೆದು ಬಂದ ಹಳ್ಳಿಗರ ಈ ಉದ್ಯೋಗಗಳು ಈಗ ಹಾಳಾಗಿ ಹೋಗಿವೆ. ಈ ಬಗೆಗೆ ಪಟ್ಟಣಿಗರೂ ಶಿಕ್ಷಿತರೂ ಎಳ್ಳಷ್ಟೂ ಯೋಚನೆ ಮಾಡಿಲ್ಲ.

೯ ಈ ಮೂಲಕ ಇಂದು ಹಳ್ಳಿಗರು ಕಂಗಾಲರಾಗಿದ್ದಾರೆ, ಪರಾವಲಂಬಿಗಳಾಗಿದ್ದಾರೆ. ಐವತ್ತು ವರ್ಷಗಳ ಹಿಂದಿನ ಹಳ್ಳಿಗರಲ್ಲಿದ್ದಷ್ಟು ವಿದ್ಯಾಬುದ್ಧಿಯು ಇಂದಿನ ಹಳ್ಳಿಗರಲ್ಲಿ ಇರುವುದಿಲ್ಲ. ಹಳ್ಳಿಯ ಕಲಾವಿದರಲ್ಲಿಯೂ ಉಳಿದ ಹಳ್ಳಿಗರಂತೆಯೇ ಅವಿದ್ಯೆಯೂ, ಅಬುದ್ಧಿಯೂ ಮನೆ ಮಾಡಿದೆ.

೧೦ ಸೃಷ್ಟಿಯೆ ಒದಗಿಸಿಕೊಟ್ಟ ಬಿಡುವಿನ ಸಮಯವನ್ನೆಲ್ಲ ಹಳ್ಳಿಗರೆಲ್ಲರೂ ಯಾವುದಾದರೊಂದು ಉಪಯುಕ್ತ ಕಾರ್ಯದಲ್ಲಿ ಕಳೆಯಬೇಕೆಂಬ ನಿಶ್ಚಯವನ್ನೂ, ಪಟ್ಟಣಿಗರು ಹಳ್ಳಿಗಳಲ್ಲಿ ಉತ್ಪನ್ನವಾದ ವಸ್ತುಗಳನ್ನೆ ಕೊಳ್ಳುವೆವೆಂಬ ಪ್ರತಿಜ್ಞೆಯನ್ನೂ ಮಾಡಿದಾಗಲೆ ಹಳ್ಳಿಗರ ಮತ್ತು ಪಟ್ಟಣಿಗರ ಮುರಿದುಹೋದ ಸಂಬಂಧವು ಪುನಃ ಬೆಸುಗೆಯಾಗುವದು.

೧೧ ಈ ಕಾರ್ಯಕ್ಕಾಗಿ ದೇಶಭಕ್ತರ ಒಂದು ದೊಡ್ಡ ದಂಡೇ ಸಿದ್ಧವಾದರೂ ಸಾಕಾಗಲಿಕ್ಕಿಲ್ಲ. ಇಂದು ಸ್ವದೇಶಿ ಸಂಘಗಳು ಎಲ್ಲಿ ಕೆಲಸ ಮಾಡುತ್ತಿರುವವೊ ಆ ಕಾರ್ಯಕ್ಷೇತ್ರಗಳಂತೂ ಇದ್ದೇ ಇವೆ. ಆದರೆ ಇದಕ್ಕೂ ಹೆಚ್ಚಿಗೆ ಕಾರ್ಯಕರ್ತ್ಯೋಸ್ಕರ ಬೇಕಾದಷ್ಟು ವಿಶಾಲವಾದ ಕ್ಷೇತ್ರವು ಹಾಗೆಯೆ ಉಳಿದುಕೊಂಡಿದೆ. ಎಷ್ಟೋ ಉದ್ಯೋಗಗಳನ್ನು ಹುಡುಕಿ ತೆಗೆಯಬೇಕಾಗಿದೆ. ನಾನಾತರದ ಕಲಾವಿದರ ಹಿತವನ್ನು ಸಾಧಿಸಬೇಕಾಗಿದೆ. ಇಂದು ನಿರುದ್ಯೋಗದಿಂದ ಹೊಟ್ಟೆಗಿಲ್ಲದೆ ಸಾಯುವವರು ಇಂಥ ಕೆಲಸಗಳನ್ನು ಪ್ರಾಮಾಣಿಕತನದಿಂದಲೂ ಮರ್ಯಾದೆಯಿಂದಲೂ ಮಾಡಿ ಹೊಟ್ಟೆತುಂಬಿಕೊಳ್ಳಬಹುದು.

೧೨ ಇದೇ ನಿಜವಾದ ಸಫಲವಾಗುವ ಸಂಪೂರ್ಣ ಸ್ವದೇಶಿಯು.

## ೪ ವಿಶೇಷ ಉದ್ಯೋಗಗಳು

೧ ಸಮಾಜದ ನಿರ್ವಾಹವು ಸಾಗಬೇಕಾದರೆ ಮತ್ತು ಅದರ ಸಮೃದ್ಧಿ ಮತ್ತು ಅದರ ಉನ್ನತಿ ಆಗಬೇಕಾದರೆ ಒಕ್ಕಲುತನ ಮತ್ತು ನೂಲುವುದು ಇವೆರಡೆ ಉದ್ಯೋಗಗಳು ಸಾಲವು. ಇವುಗಳ ಹೊರತಾಗಿ ಇನ್ನೂ ಎಷ್ಟೋ ಉದ್ಯೋಗಗಳ ಅವಶ್ಯಕತೆಯುಂಟು. ಉದಾಹರಣೆಗೆ: ಧಾತು ಕಲ್ಲಿದ್ದಲು ಸೀಮೆ (ಚಿಮಣಿ) ಎಣ್ಣೆ ಮುಂತಾದವುಗಳ ಕಣಿಗಳಿಗೆ ಮತ್ತು ಖನಿಜ ಪದಾರ್ಥಗಳಿಗೆ ಸಂಬಂಧಪಟ್ಟ ಉದ್ಯೋಗಗಳು, ಉಪ್ಪು ಮೀನು ಮುಂತಾದ ಸಮುದ್ರದ ಪದಾರ್ಥಗಳಿಗೆ ಸಂಬಂಧಪಟ್ಟ ಉದ್ಯೋಗಗಳು; ಕಟ್ಟಿಗೆ, ಅರಗು, ರಬ್ಬರು, ವನಸ್ಪತಿ ಔಷಧ ಮುಂತಾದ ಅರಣ್ಯಕ್ಕೆ ಸಂಬಂಧಪಟ್ಟ ಉದ್ಯೋಗಗಳು.

೨ ಜೀವನ ನಿರ್ವಾಹಕ್ಕೆ ಒಕ್ಕಲುತನ ಮತ್ತು ನೇಕಾರಿಕೆ ಉದ್ಯೋಗಗಳ ಅವಶ್ಯಕತೆ ಎಷ್ಟು ಇದೆಯೋ ಅಷ್ಟು ಈ ಉದ್ಯೋಗಗಳ ಅವಶ್ಯಕತೆ ಇರಲಾರದು. ಆದರೂ ಇಂದಿನ ಸಾಮಾಜಿಕ ಜೀವನಕ್ಕೆ ಇವು ಬೇಕಾಗುವವು. ಇವನ್ನು ಕಡೆಗಣಿಸಲು ಬರುವಂತಿಲ್ಲ.

೩ ಈ ಉದ್ಯೋಗಗಳನ್ನು ಮಾಡಲು ಬಹಳ ಜನರು ಬೇಕಾಗುವುದಿಲ್ಲ. ಆದರೂ ಇವುಗಳಿಂದ ಹುಟ್ಟುವ ಪದಾರ್ಥಗಳು ಸರ್ವರಿಗೂ ಬೇಕಾದವುಗಳು. ಈ ಪದಾರ್ಥಗಳು ಉಪಭೋಗಿಸಲು ಯೋಗ್ಯವಿರುವುದರಿಂದ ಈ ಉದ್ಯೋಗಗಳಲ್ಲಿ ಜನತೆಯ ಸ್ವಾರ್ಥವು ಅಡಕವಾಗಿದೆ.

೪ ಈ ಉದ್ಯೋಗಗಳು ಅಲ್ಲಲ್ಲಿ ಮಾತ್ರ ನಡೆಯುವವು, ದೇಶದ ಎಲ್ಲಾ ಭಾಗದಲ್ಲಿ ನಡೆಯುವುದಿಲ್ಲ.

೫ ಇವುಗಳಲ್ಲಿನ ಮೀನು ಹಿಡಿಯುವ ಮತ್ತು ಉಪ್ಪು ಮಾಡುವ ಉದ್ಯೋಗಗಳು ಒಕ್ಕಲುತನ ಮತ್ತು ನೂಲುವ ಉದ್ಯೋಗಗಳ ವರ್ಗಕ್ಕೆ ಸೇರುವವು. ಒಕ್ಕಲುತನ ಮತ್ತು ನೂಲುವ ಉದ್ಯೋಗದ ಬಗೆಗೆ ಯಾವ ರೀತಿಯ ಆರ್ಥಿಕ ನೀತಿಯು ಇರುವುದೊ ಅದೇ ರೀತಿಯ ಆರ್ಥಿಕ ನೀತಿ ಇವುಗಳ ಬಗೆಗೂ ಇರತಕ್ಕದ್ದು. ನೂಲಲು ಹೇಗೆ ಪ್ರತಿಯೊಬ್ಬ ಒಕ್ಕಲಿಗನಿಗೆ ಹಕ್ಕು ಇದೆಯೋ ಹಾಗೆಯೇ ಮೀನು ಹಿಡಿಯುವುದಕ್ಕೂ ಸಮುದ್ರದ ದಂಡೆಯ ಮೇಲೆ ಇರುವ ಪ್ರತಿಯೊಬ್ಬನಿಗೂ ಹಕ್ಕು ಇರತಕ್ಕದ್ದು.

೬ ಇನ್ನು ಮೇಲೆ ಹೇಳಿದ ವಿಶೇಷ ಉದ್ಯೋಗಗಳಿಗಾಗಿ ಬಹಳ ಬಂಡವಲು, ಒಲವು, ಕೌಶಲ್ಯ ಮುಂತಾದವು ಬೇಕು. ಈ ಉದ್ಯೋಗಗಳು ಸ್ವಂತ ಸಾಹಸದಿಂದಲೂ ಅಥವಾ ಸರಕಾರದ ನಿಯಂತ್ರಣದಿಂದಲೂ ನಡೆಯಬಹುದು. ಈ ಉದ್ಯೋಗಗಳ ಮೇಲೆ ಕೆಳಗೆ ಕಾಣಿಸಿದಂತೆ ಸರಕಾರದ ನಿರ್ಬಂಧಗಳು ಇರತಕ್ಕದ್ದು.

(ಅ) ಇವುಗಳಿಂದ ಹುಟ್ಟುವ ಪದಾರ್ಥಗಳ ಉಪಭೋಗವು ಪ್ರಜರಿಗೆ ತೀರ ಕಡಿಮೆ ಬೆಲೆಯಲ್ಲಿ ದೊರೆಯತಕ್ಕದ್ದು.

(ಆ) ಈ ಪದಾರ್ಥಗಳು ಚನ್ನಾಗಿ ಮಾಡಲ್ಪಟ್ಟವೂ ಒಳ್ಳೇ ಬಾಳಿಕೆಯವೂ ಇರತಕ್ಕದ್ದು.

(ಇ) ಈ ಉದ್ಯೋಗಗಳು ಸ್ವಂತ ಸಾಹಸದಿಂದ ನಡೆಯುತ್ತಿದ್ದರೆ ಅವುಗಳಿಂದ ಬರುವ ಲಾಭದ ಮೇಲೂ ಅವುಗಳ ಬೆಲೆಯ ಮೇಲೂ ಸರಕಾರದ ನಿಯಂತ್ರಣವಿರತಕ್ಕದ್ದು.

(ಈ) ಇವುಗಳಲ್ಲಿ ದುಡಿಯುವ ಕೆಲಸಗಾರರ ಸುಖಸಂತೋಷದ ಕಡೆಗೆ ಸರಕಾರವು ಹೆಚ್ಚು ಗಮನಕೊಡತಕ್ಕದ್ದು.

(ಉ) ಇವುಗಳಲ್ಲಿ ನಾನಾ ರೀತಿಯಾಗಿ ಚಿಕ್ಕ ಬಂಡವಲಿನಿಂದ ಮತ್ತು ಗೃಹೋದ್ಯೋಗಗಳಂತೆ ನಡೆಯಬಲ್ಲ ಉದ್ಯೋಗಗಳಿಗೆ ವಿಶಾಲ ಸ್ವರೂಪವನ್ನು ಕೊಡಬೇಕಾದ ಸಂದರ್ಭದಲ್ಲಿ ಸರಕಾರವು ಈ ವಿಷಯಗಳ ಕಡೆ ಹೆಚ್ಚು ಗಮನಕೊಡಬೇಕಾಗುವುದು. ಹೀಗೆ ವಿಶಾಲಸ್ವರೂಪವನ್ನು ಹೊಂದುವುದಕ್ಕಾಗಿ ಬೇಕಾಗುವ ಕಾರ್ಖಾನೆಗಳು ಇವುಗಳ ಗೃಹೋದ್ಯೋಗಗಳನ್ನು ನಾಶಮಾಡುವಂಥವು ಇರಕೂಡದು. ಗೃಹೋದ್ಯೋಗಗಳಿಂದ

ಹುಟ್ಟುವಂಥ ಪದಾರ್ಥಗಳನ್ನು ಮಾಡಬಹುದಾದ ವಿಶಾಲ ಕಾರಖಾನೆಗಳಿಗೆ ಪ್ರತಿಬಂಧವು ಇರತಕ್ಕದ್ದು.

೭ ಬಟ್ಟೆಯ ಕಾರಖಾನೆಗಳು ಕೂಡ ಮೇಲಿನ ಕಟ್ಟುಗಳಿಗೆ ಒಳಪಟ್ಟಿರಬೇಕು.

## ೫ ಹಾನಿಕರ ಉದ್ಯೋಗಗಳು

೧ ಜನತೆಯ ನೀತಿಯನ್ನೂ ಆರೋಗ್ಯವನ್ನೂ ಕೆಡಿಸುವಂಥ ಹೆಂಡ, ಅಫು, ಭಂಗಿ, ಗಾಂಜೀ, ಹೊಗೆಸೊಪ್ಪು, ಶಸ್ತ್ರ, ಮದ್ದು ಮುಂತಾದವುಗಳ ಉದ್ಯೋಗಗಳನ್ನು ಸ್ವತಂತ್ರವಾಗಿ ಮಾಡಲು ಸರಕಾರವು ಅಪ್ಪಣೆ ಕೊಡಕೂಡದು, ಕೊಟ್ಟರೂ ತಾನು ಗೊತ್ತುಪಡಿಸಿದ ನಿರ್ಬಂಧಗಳ ಮೇರೆಗೆ ಮಾಡಗೊಡತಕ್ಕದ್ದು.

೨ ಈ ಉದ್ಯೋಗಗಳನ್ನು ನಡೆಸುವಾಗ ಸರಕಾರದ ಗಮನವು ಇವುಗಳಿಂದ ಬರುವ ಲಾಭದ ಕಡೆ ಇರತಕ್ಕದ್ದಲ್ಲ. ಜನತೆಯ ಆರೋಗ್ಯ ಮುಂತಾದವುಗಳ ದೃಷ್ಟಿಯಿಂದ ಇಂಥ ಪದಾರ್ಥಗಳು ಎಷ್ಟು ಅವಶ್ಯವಿರುವವೊ ಅಷ್ಟನ್ನೇ ಉತ್ಪನ್ನಮಾಡಿಸುವ ಮತ್ತು ಜನತೆಗೆ ಮುಟ್ಟಿಸುವ ಧೋರಣೆಯನ್ನು ಇಟ್ಟುಕೊಂಡಿರತಕ್ಕದ್ದು.

೩ ಇಂಥ ಪದಾರ್ಥಗಳ ಅಂತರರಾಷ್ಟ್ರೀಯ ವ್ಯಾಪಾರವನ್ನು ಪರದೇಶದ ರಾಜ್ಯಗಳ ಇಚ್ಛೆಯಂತೆಯೆ ಮಾಡಗೊಡತಕ್ಕದ್ದು.

## ೬ ಉಪಯುಕ್ತ ಉದ್ಯೋಗಗಳು

೧ ಸಾಮಾಜಿಕ ಜೀವನಕ್ಕೆ ಈ ಉದ್ಯೋಗಗಳನ್ನಲ್ಲದೆ ಇನ್ನೂ ಎಷ್ಟೋ ಉಪಯುಕ್ತ ಕೈಗಾರಿಕೆಗಳನ್ನು ಮಾಡುವವರೂ ಬೇಕಾಗುವರು. ಉದಾಹರಣೆಗೆ: ಶಿಕ್ಷಕರು, ಸೈನಿಕರು, ವಕೀಲರು, ನ್ಯಾಯಾಧೀಶರು, ಅಧಿಕಾರಿಗಳು, ವೈದ್ಯರು, ಅಂಗಡಿಕಾರರು, ಸ್ವಚ್ಛತೆ ಇಡುವವರು (ಭಂಗೀ ಮೊದಲಾದವರು), ಕಾರಕೂನರು ಇತ್ಯಾದಿ.

೨ ಈ ಉದ್ಯೋಗಸ್ಥರು ಯಾವ ಉಪಭೋಗ್ಯ ವಸ್ತುಗಳನ್ನೂ ಪ್ರತ್ಯಕ್ಷವಾಗಿ ಉತ್ಪನ್ನಮಾಡುವವರಲ್ಲದಿದ್ದರೂ ಅಪ್ರತ್ಯಕ್ಷವಾಗಿ ಪದಾರ್ಥಗಳನ್ನು

ತಯಾರಿಸುವುದಕ್ಕೂ ಭೋಗ್ಯ ಹಾಗೂ ಅನರ್ಥಕಾರಕ ಪದಾರ್ಥಗಳ ಯೋಗ್ಯ ವ್ಯವಸ್ಥೆ ಮಾಡುವುದಕ್ಕೂ ಬೇಕಾಗುವರು.

೩ ಈ ಉದ್ಯೋಗಸ್ಥರನ್ನು ಸಾಕುವುದಕ್ಕೆ ಸಮಾಜವು ಏನು ವೆಚ್ಚ ಮಾಡುವದೊ ಅದು ವ್ಯವಸ್ಥಾವೆಚ್ಚವೆನಿಸುವುದು. ಆದ್ದರಿಂದ ಈ ಉದ್ಯೋಗಿಗಳ ಸಂಖ್ಯೆಯು ಮತ್ತು ಅವರಿಗೋಸ್ಕರ ಮಾಡುವ ವ್ಯವಸ್ಥಾ ವೆಚ್ಚವು ಜನಸಂಖ್ಯೆಗೆ ಮತ್ತು ಜನರ ಸಮೃದ್ಧಿಗೆ ಅನುಗುಣವಾಗಿರಬೇಕು, ಮಿತಿಯನ್ನು ಮೀರಕೂಡದು.

೪ ಈ ಉದ್ಯೋಗಗಳನ್ನು ಜನಸೇವಾವೃತ್ತಿಯಿಂದ ನಡೆಸಬೇಕಲ್ಲದೆ ಗಳಿಕೆಯ, ಸಿರಿವಂತಿಕೆಯ ಆಸೆಯಿಂದ ಮಾಡಬಾರದು. ಈ ಉದ್ಯೋಗ ಗಳನ್ನು ಮಾಡುವವರಿಗೆ, ಸಮಾಜದ ಸ್ಥಿತಿ ಮತ್ತು ಸಮೃದ್ಧಿಯ ಚೌಕಟ್ಟಿ ನಲ್ಲಿಯೇ ಇದ್ದುಕೊಂಡು ಜೀವನನಿರ್ವಾಹವನ್ನು ಸಾಗಿಸಲು ಬರುವಷ್ಟು ಸ್ಥಿರವಾದ ಸಂಬಳವನ್ನು ಕೊಟ್ಟು, ಅವರನ್ನು ನಿಶ್ಚಿಂತರನ್ನಾಗಿ ಮಾಡಬೇಕು. ಈ ಉದ್ಯೋಗಿಗಳು ಇಷ್ಟರಿಂದಲೆ ಸಂತುಷ್ಟರಾಗಿರತಕ್ಕದ್ದು; ಮತ್ತು ತಮ್ಮ ಪರಿಶ್ರಮದ ಫಲವನ್ನು ಪಡೆದ ಮೇಲೆ ಗಳಿಕೆಯ ಇನ್ನಾವ ಉದ್ಯೋಗ ವನ್ನೂ ಮಾಡಬಾರದು; ಮಾತ್ರವಲ್ಲ, ತಮ್ಮಲ್ಲಿದ್ದ ಜ್ಞಾನದ ಲಾಭವನ್ನು ಆದಷ್ಟು ಹೆಚ್ಚಾಗಿ ಜನರಿಗೆ ಮಾಡಿಕೊಡತಕ್ಕದ್ದು.

೫ ಹೀಗೆ ಒಂದು ಮೇರೆಯಲ್ಲಿದ್ದುಕೊಂಡು ಈ ಉದ್ಯೋಗಗಳನ್ನು ನಡೆಸಿದರೆ ಅವುಗಳಿಂದ ಸಮಾಜದ ಸರ್ವೋದಯಕ್ಕೆ ಸಹಾಯವು ಸಿಕ್ಕು ವದು, ಭೋಗ್ಯವಲ್ಲದ ಧನಲಾಲಸೆಯೂ ಧನಾರ್ಜನೆಗಾಗಿ ಮಾಡಲ್ಪಡುವ ಕುಟಿಲ ಯುಕ್ತಿಗಳೂ ಇಲ್ಲದಂತಾಗುವವು.

೬ ಧನ ಸಂಗ್ರಹದ ಇಚ್ಛೆ ಇರುವವರಿಗೆ, ಭೂಮಿ ಮನೆ ಆಭರಣಗಳು ಬೇಕೆನ್ನುವವರಿಗೆ, ಸಂತತಿ ಹೆಚ್ಚಿಸಬೇಕೆನ್ನುವವರಿಗೆ, ಉದ್ಯೋಗಗಳೆ ಆಕರ್ಷಕ ಸಾಮಗ್ರಿಯಾಗಬೇಕು; ಅವರಿಗೆ ಉದ್ಯೋಗಗಳಲ್ಲಿ ಆದಷ್ಟು ಹೆಚ್ಚು ಅನುಕೂಲತೆಗಳು ಇರತಕ್ಕದ್ದು. ಆದರೆ ಈ ಪ್ರಕರಣದಲ್ಲಿ ವರ್ಣಿಸ ಲ್ಪಟ್ಟ ಉದ್ಯೋಗಗಳಲ್ಲಿ ತೊಡಗಿದವರಿಗೆ ಇಷ್ಟೇ ಸಂಪಾದನೆಯಾಗ ಬೇಕೆಂಬ ನಿರ್ಬಂಧವಿರಬೇಕು.

೭ ಯಾರು ಮಿತಿಯನ್ನು ಮೀರದೆ ಸ್ಥಿರವಾದ ಮತ್ತು ನಿಶ್ಚಿಂತ ನಿರ್ವಾಹ ವನ್ನು ದೊರಕಿಸಬೇಕೆನ್ನುವರೊ ಮತ್ತು ಜನಸೇವೆ ಮಾಡಬೇಕೆನ್ನುವರೊ ಅವರಿಗಾಗಿಯೆ ಈ ಉದ್ಯೋಗಗಳ ಮಾರ್ಗವು ತೆರೆದಿರಬೇಕು. ಹೀಗೆ

ಮಾಡುವುದರಿಂದ ಈ ಉದ್ಯೋಗಗಳ ಪ್ರವೇಶಕ್ಕೆ ಬೇಕಾಗುವ ಜ್ಞಾನವೂ ಚರಿತ್ರಬಲದ ಉಚ್ಚ ಧೋರಣೆಯೂ ಉಂಟಾಗಬಲ್ಲದು.

## ೭ ಲಲಿತಕಲೆಗಳು

೧ ಸಂಗೀತ, ಕಥೆ, ವಾರ್ತೆ, ಚಿತ್ರಕಲೆ, ನೃತ್ಯ, ನಾಟಕ, ಸಿನೇಮಾ ಮುಂತಾದ ಲಲಿತಕಲೆಗಳು ಮೇರೆಯನ್ನು ಮೀರದಿದ್ದರೆ ಅವು ಜನರ ನಿರ್ದೋಷ ಮನೋರಂಜನೆಗೂ ಜ್ಞಾನಪ್ರಾಪ್ತಿಗೂ ಭಾವನೆಯ ಬೆಳೆವಣಿಗೆಗೂ ಸಾಧನಗಳಾಗುವವು. ಮಿತಿಮೀರಿದರೆ ಸರಾಯಿ, ಹೆಂಡ, ಅಫೀಮು ಮುಂತಾದವುಗಳಂತೆ ಇವಾದರೂ ಹಾನಿಕರ ವ್ಯಸನಗಳಾಗುವವು.

೨ ಸಾಮಾನ್ಯವಾಗಿ ಇಂಥ ಕಲೆಗಳನ್ನು ಉಪಜೀವನದ ಉದ್ಯೋಗಗಳನ್ನಾಗಿ ಯಾರೂ ಮಾಡಿಕೊಳ್ಳತಕ್ಕದ್ದಲ್ಲ. ಪ್ರತಿಯೊಬ್ಬ ಮನುಷ್ಯನು ತನ್ನ ಉಪಜೀವನದ ಉದ್ಯೋಗವನ್ನು ಮಾಡಿದ ಬಳಿಕ ಅವನಿಗೆ ಯಾವುದೊಂದು ಕಲೆಯಲ್ಲಿ ರುಚಿಯನ್ನು ಹುಟ್ಟಿಸುವುದೇ ಶಿಕ್ಷಣದ ಧೋರಣವಿರಬೇಕು.

೩ ಜನರು ತಮ್ಮ ಮನೋರಂಜನೆಗೋಸ್ಕರ ತಾವೇ ಉತ್ಸಾಹದಿಂದ ಮಂಡಲಗಳನ್ನು ರಚಿಸಿ ಅವುಗಳ ಮೂಲಕ ಇಂಥ ಕಲೆಗಳ ಪ್ರದರ್ಶನವನ್ನು ಜರುಗಿಸಿಕೊಳ್ಳತಕ್ಕದ್ದು.

೪ ಇಂಥ ಕಲೆಗಳ ರುಚಿಯು ಮೇರೆಮೀರಿ ಹೋಗದಂತೆ, ಜನರು ಅನೀತಿಯ ಕಡೆಗೆ ಒಲೆಯದಂತೆ, ಈ ಕಲೆಗಳು ಹಾನಿಕರವಾಗದಂತೆ, ಪ್ರದರ್ಶನ ಕಚೇರಿ ಮುಂತಾದವುಗಳ ಮೇಲೆ ಕಡುತರವಾದ ದೃಷ್ಟಿಯೂ ಮೇಲ್ವಿಚಾರಣೆಯೂ ಇರತಕ್ಕದ್ದು.

೫ ಈ ಕಲೆಗಳನ್ನು ಕುರಿತು ಸಾಮಾನ್ಯ ರೀತಿನೀತಿಯನ್ನು ಮೇಲೆ ತೋರಿಸಿದ್ದಾಯಿತು. ಇಂತಹ ಕಲೆಗಳಿಂದ ನಿರ್ವಾಹ ಸಾಗಿಸಿಕೊಳ್ಳಲು ಕಟ್ಟುಮಾಡಿದರೆ ಅದರಿಂದ ಹಿತವಾಗದಿರುವ ಸಂದರ್ಭವುಂಟು. ಅಲ್ಲದೆ ಆ ಕಟ್ಟು ವ್ಯವಹಾರದಲ್ಲಿ ಉಳಿಯುವುದೂ ಕಠಿಣ. ಆದ್ದರಿಂದ ಇಂಥ ಕಲೆಗಳ ದೋಷರಹಿತವಾದ ಜ್ಞಾನಪ್ರದವಾದ ಮತ್ತು ಸದ್ಭಾವಪೋಷಕ ಉಪಭೋಗವು ಜನರಿಗೆ ದೊರೆಯುವಂತೆ ವ್ಯವಸ್ಥೆಮಾಡುವುದು ಮತ್ತು ಹಿಂದಿನ ಪ್ರಕರಣದಲ್ಲಿ ಉಪಯುಕ್ತ ಉದ್ಯೋಗಗಳ ವಿಷಯದಲ್ಲಿ ಸೂಚಿಸಿದ ಪ್ರಕಾರ ಸಮೃದ್ಧಿಯ ಮೇರೆಯನ್ನಿಟ್ಟುಕೊಂಡು ಈ ಕಲೆಗಳ ಉಪಾಸನೆ

ಮಾಡುವವರಿಗೆ ನಿಶ್ಚಿತ ಸಂಬಳ ಕೊಡುವುದು ಮತ್ತು ಈ ಕಲೆಗಳನ್ನು ಅಭ್ಯಾಸ ಮಾಡುವುದಕ್ಕಾಗಿ ಸಚ್ಚರಿತ್ರ ಮನುಷ್ಯರನ್ನು ದೊರಕಿಸುವುದು ಗ್ರಾಮ ಪಂಚಾಯತಿಗಳ ಒಂದು ಕರ್ತವ್ಯವಾಗತಕ್ಕದ್ದು.

೬ ಈ ಉದ್ಯೋಗಗಳನ್ನು ಸ್ವತಂತ್ರವಾಗಿ ಮಾಡಬೇಕೆನ್ನುವವರ ಮೇಲೆ ನೀತಿಯ ನಿರ್ಬಂಧನೆ ಇರಬೇಕು; ಅಲ್ಲದೆ ಅನುಮತಿ, ವಿಶಿಷ್ಟ ಕರ ಮುಂತಾದ ಬಂಧನಗಳೂ ಇರತಕ್ಕದ್ದು.

೭ ಇಂಥ ಕಲೆಗಳ ಯೋಗ್ಯ ಪೋಷಣೆಗಾಗಿ ಮತ್ತು ವೃದ್ಧಿಗಾಗಿ ಸರಕಾರವು ಅನುಕೂಲತೆಗಳನ್ನೂ ಯೋಗ್ಯ ಕಲಾವಿದರಿಗೆ ಉತ್ತೇಜನವನ್ನೂ ಒದಗಿಸಿಕೊಡಬಹುದು. ಇದರಲ್ಲಿ ತಾರತಮ್ಯದ ಭಂಗವಾಗದಿದ್ದರೆ ಈ ರೀತಿ ಮಾಡುವುದು ಯೋಗ್ಯವೆನಿಸುವುದು.

೮ ತನ್ನ ಉದ್ಯೋಗದಲ್ಲಿ ಕಲಾಪ್ರವೃತ್ತಿಯನ್ನು ತೋರಿಸುವ ಪ್ರತಿಯೊಬ್ಬ ಶಿಲ್ಪಿಯೂ ಉತ್ತೇಜನಕ್ಕೆ ಪಾತ್ರನು. ಈ ದೃಷ್ಟಿಯನ್ನಿಟ್ಟುಕೊಂಡು ಕಲೆಯ ಪೋಷಣೆಯ ಕಡೆಗೆ ಸರಕಾರವು ಮೊದಲು ಗಮನ ಕೊಡುವುದು ಉಚಿತವಾದದ್ದು.

## ಅಷ್ಟಮ ಖಂಡ

# ಗೋಪಾಲನೆ

## ಧಾರ್ಮಿಕ ದೃಷ್ಟಿ

೧ ಹಿಂದೂ ಧರ್ಮದಲ್ಲಿ ಗೋಪಾಲನೆಗೆ ಧಾರ್ಮಿಕ ಮಹತ್ವವು ಬಂದಿದೆ ಮತ್ತು ಗೋವಧೆಯು ಮಹಾಪಾತಕವೆನಿಸಿದೆ ಹಾಗೂ ಗೋಪಾಲನೆಯ ಭಾರವು ಅರಸರ ಮತ್ತು ವೈಶ್ಯರ ಮೇಲೆಯೇ ಹೊರಿಸಲ್ಪಟ್ಟಿದೆ. ಆದ್ದರಿಂದ ಈ ಕಾರ್ಯಕ್ಕಾಗಿ ಜನರಿಂದ ಲಕ್ಷಾಂತರ ರೂಪಾಯಿಗಳು ದಾನವೆಂದು ದೊರೆಯುತ್ತವೆ. ಆದರೂ ಕಾರ್ಯವಾಹಕರಲ್ಲಿ ಯೋಗ್ಯದೃಷ್ಟಿ ಇಲ್ಲದ್ದರಿಂದ ಗೋಭಕ್ಷಕ ದೇಶಗಳಿಗಿಂತಲೂ ಹಿಂದೂ ದೇಶದಲ್ಲಿ ದನಗಳ ಸ್ಥಿತಿಯು ಕರುಣಾಜನಕವಾಗಿದೆ.

೨ ಗೋಪಾಲನೆಯ ಬಗೆಗೆ ನಮ್ಮ ಧಾರ್ಮಿಕ ದೃಷ್ಟಿಯಲ್ಲಿ ಕೆಳಗಿನಂತೆ ಮಾರ್ಪಾಡು ಹಾಗೂ ವಿಕಾಸವು ಆಗುವದು ಅವಶ್ಯವಿದೆ.

(ಅ) ಅಂಗಹೀನ ಮತ್ತು ನಿರ್ಬಲ ದನಗಳನ್ನು ಪಾಲಿಸುವುದಷ್ಟೆ ಗೋಪಾಲನೆಯ ಕಾರ್ಯಕ್ಷೇತ್ರವಲ್ಲ. ಹಸುವಿನ ಮತ್ತು ಎತ್ತಿನ ಜಾತಿಯಲ್ಲಿ ಸುಧಾರಣೆಯನ್ನು ಮಾಡಬೇಕು ಮತ್ತು ಆಕಳುಗಳು ಹೆಚ್ಚು ಸತ್ವವುಳ್ಳವೂ ಹೆಚ್ಚು ಹಾಲು ಕರೆಯುವಂಥವೂ ಆಗುವಂತೆ ಮಾಡಬೇಕು. ಎತ್ತಿನ ಜಾತಿಯಲ್ಲಂತೂ ಚೆನ್ನಾಗಿ ಸುಧಾರಣೆ ಆಗಬೇಕು. ಇವು ಕೂಡ ಗೋಪಾಲನ ಧರ್ಮದ ಮುಖ್ಯ ಅಂಗವಾಗಿರುವವು.

(ಆ) ಆದ್ದರಿಂದ ಗೋವಿನ ದೊಡ್ಡಿಗಳು ಜನರಿಗೆ ವಸ್ತುಪಾಠವನ್ನು ಕಲಿಸುವಂತಹ ಆದರ್ಶ ಗೋಶಾಲೆಗಳಾಗಿರತಕ್ಕದ್ದು. ದನಗಳ ಗೋದಲೆ, ಹುಲ್ಲು ಹಾಕುವ ಮತ್ತು ದಾಣಿ ಕಟ್ಟುವ ಪದ್ಧತಿ, ಇವುಗಳಿಂದಾಗುವ ಪರಿಣಾಮವನ್ನು ತೋರಿಸುವ ಪತ್ರಿಕೆ, ಇವೆಲ್ಲವುಗಳಲ್ಲಿ ಅಚ್ಚುಕಟ್ಟೂ ಅಭ್ಯಾಸ ದೃಷ್ಟಿಯೂ ಕಾಣಬೇಕು.

(ಇ) ಎತ್ತಿನ ಸಂತತಿಯನ್ನು ಸುಧಾರಿಸುವುದಕ್ಕಾಗಿ ಗ್ರಾಮದ ಜನಗಳಿಗೆ ಲಾಭಕಾರಿಯಾಗುವಂತಹ ರೀತಿಯನ್ನೆ ಗೋವಿನ ದೊಡ್ಡಿಯವರು ಉಪಯೋಗಿಸಿ ಹೋರಿಗಳನ್ನು ಪಾಲಿಸತಕ್ಕದ್ದು.

(ಈ) ಈ ದೊಡ್ಡಿಗಳಲ್ಲಿ ಚರ್ಮಾಲಯ ವಿಭಾಗವು ಕೂಡ ಇರತಕ್ಕದ್ದು; ಸತ್ತ ದನಗಳ ಚರ್ಮದ ಉದ್ಯೋಗವನ್ನು ತಿರಸ್ಕಾರದ ದೃಷ್ಟಿಯಿಂದ ನೋಡದೆ ಕರ್ತವ್ಯದ ದೃಷ್ಟಿಯಿಂದ ಮಾಡತಕ್ಕದ್ದು. ತನ್ನ ಸತ್ತ ದನಗಳ ಚರ್ಮವನ್ನು, ಎಲುಬು ಮಾಂಸಗಳನ್ನು ಉಪಯೋಗಿಸಲು ಕೊಡದ ಒಡೆಯನು ದನಗಳ ಕೊಲೆಗೆ ಉತ್ತೇಜನ ಕೊಟ್ಟಂತೆ ಎಂದು ತಿಳಿಯತಕ್ಕದ್ದು; ಮತ್ತು ಪ್ರಾಣಿದಯಾಸಂಘಗಳು ಸತ್ತ ದನಗಳ ಎಲುಬು ಮಾಂಸ ಚರ್ಮವನ್ನೆ ಉಪಯೋಗಿಸುವ ದೃಢ ನಿರ್ಧಾರ ಮಾಡತಕ್ಕದ್ದು. *

(ಉ) ಒದುಕಿದ ದನಗಳಿಗಿಂತಲೂ ಸತ್ತ ದನಗಳ ಬೆಲೆ ಹೆಚ್ಚೆಂದು

---

* ಎಲುಬು ಮಾಂಸಗಳ ಉಪಯೋಗ ಮಾಡಬೇಕು ಎಂದಮಾತ್ರಕ್ಕೆ ತಿನ್ನುವುದಕ್ಕೆಂದು ಅರ್ಥವಲ್ಲ. ಅವುಗಳಿಂದ ಗೊಬ್ಬರ ಮತ್ತು ಇತರ ಉಪಯುಕ್ತ ವಸ್ತುಗಳನ್ನು ಮಾಡಿಕೊಳ್ಳತಕ್ಕದ್ದು ಎಂದು ತಿಳಿಯತಕ್ಕದ್ದು.

ತಿಳಿಯುವುದು ಧಾರ್ಮಿಕ ದೃಷ್ಟಿಯಿಂದ ಭಯಾನಕವಾಗಿರುವುದು. ಆದ್ದರಿಂದ ಜೀವಂತ ದನಗಳ ಬೆಲೆಯ ಮಹತ್ವವನ್ನು ಹೆಚ್ಚಿಸಲು ಯತ್ನಿಸುವುದು ಧಾರ್ಮಿಕ ಕರ್ತವ್ಯವೆಂದು ತಿಳಿಯತಕ್ಕದ್ದು.

(ಊ) ಹೋರಿಗಳ ಕಸಿಮಾಡುವುದು ಅಗತ್ಯವೆಂದು ತಿಳಿದು, ನೋವಾಗದ ಶಾಸ್ತ್ರೀಯ ಪದ್ಧತಿಯನ್ನು ಚನ್ನಾಗಿ ಅರಿತುಕೊಂಡು ಆ ಮೇಲೆ ಗೋದೊಡ್ಡಿಗಳು ಕಸಿ ಮಾಡುವ ಯೋಜನೆಯನ್ನು ಕೈಕೊಳ್ಳತಕ್ಕದ್ದು.

(ಎ) ಪ್ರಾಣಿಯು ಅತ್ಯಂತ ನೋವಿನಿಂದ ಒದ್ದಾಡುತ್ತಿರುವಾಗ ಅದು ಅಂಗಹೀನವಾಗಿ ಕೂಡ ಬದುಕುವ ಆಶೆ ಇಲ್ಲದಿದ್ದಲ್ಲಿ, ಮತ್ತು ಅದಕ್ಕೆ ವೇದನೆಯೆ ಹೆಚ್ಚಾಗುತ್ತ ಹೋಗುವಾಗ, ಅದರ ಇಹಲೋಕದ ಯಾತ್ರೆಯನ್ನು ಮುಗಿಸಲು ನೋವಾಗದ ಉಪಾಯವನ್ನು ಕೈಕೊಳ್ಳುವುದು ದಯಾಧರ್ಮವೆಂದು ಒಪ್ಪತಕ್ಕದ್ದು.

## ೨ ಅನ್ಯಪ್ರಾಣಿಗಳ ಪಾಲನೆ

೧ ಗೋ ಶಬ್ದದಲ್ಲಿ ಪ್ರಾಣಿಮಾತ್ರವೆಲ್ಲವೂ ಅಡಕವಾಗಿರುವುದು ನಿಜ. ಅಹಿಂಸೆಯ ದೃಷ್ಟಿಯಿಂದ ವ್ಯವಹಾರದಲ್ಲಿ ಅದನ್ನು ಸ್ವಲ್ಪ ವಿವೇಕದಿಂದ ಉಪಯೋಗಿಸುವುದು ಅವಶ್ಯವಾದದ್ದು. ಪ್ರಾಣಿಗಳ ವಿವೇಕವಿಲ್ಲದ ಪಾಲನೆಪೋಷಣೆಯ ಪರಿಣಾಮವು ಹಿಂಸೆಗೆ ಉತ್ತೇಜನವನ್ನೀಯುತ್ತದೆ.

೨ ಹೀಗೆ ವಿವೇಕವಿಲ್ಲದ್ದರಿಂದ ಎಮ್ಮೆಯ ಹಾಲಿನ ಮತ್ತು ತುಪ್ಪದ ಉಪಯೋಗವು ಆಕಳು ಮತ್ತು ಎಮ್ಮೆಗೆ ಹಿಂಸೆಯನ್ನು ಹೆಚ್ಚಿಸಿಬಿಟ್ಟದೆ. ಇದಕ್ಕೆ ಕಾರಣಗಳು ಇಂತಿವೆ:

(ಅ) ಎಮ್ಮೆಯು ಜವುಳು ಮತ್ತು ತಂಪು ಪ್ರದೇಶದಲ್ಲಿರತಕ್ಕ ಪ್ರಾಣಿ. ಆದ್ದರಿಂದ ಅದನ್ನು ಉಷ್ಣವಾದ ಮತ್ತು ಒಣ ಪ್ರದೇಶದಲ್ಲಿ ಒಯ್ದಿಟ್ಟುಕೊಂಡರೆ ಅದರ ಮೇಲೆ ಕ್ರೂರತನ ಮಾಡಿದಂತಾಗುತ್ತದೆ.

(ಆ) ಕೋಣದ ಉಪಯೋಗವು ಆಗುತ್ತಿಲ್ಲವಾದ್ದರಿಂದ ಅದರ ಕೊಲೆಯಾಗುತ್ತಿದೆ.

(ಇ) ಹೋರಿಗಳ ಸಲುವಾಗಿ ಆಕಳ ಪಾಲನೆಯೂ ಹಾಲಿನ ಸಲುವಾಗಿ ಎಮ್ಮೆಯ ಪಾಲನೆಯೂ ಆಗುತ್ತಿದೆ. ಇದರಿಂದ ಎಮ್ಮೆಯ ಪಾಲನೆಯಿಂದ ಆಗುವಷ್ಟು ಲಾಭವು ಆಕಳ ಪಾಲನೆಯಿಂದ ಆಗುವುದಿಲ್ಲ. ಆದ್ದರಿಂದ

ಜನರು, ಆಕಳು ಹೆಚ್ಚಿಗೆ ಹಾಲು ಕೊಡುವಂತೆ ಮಾಡಲು ಪ್ರಯತ್ನಿಸುವುದಿಲ್ಲ. ಇದರಿಂದ ಅದರ ಕೊಲೆಗೆ ಉತ್ತೇಜನವು ದೊರೆಯುತ್ತದೆ.

೩ ಆದ್ದರಿಂದ ಎಮ್ಮೆಯ ಹಾಲು-ಬೆಣ್ಣೆಯನ್ನು ಬಿಟ್ಟು ಎಮ್ಮೆಯ ಪಾಲನೆಯನ್ನು ನಿಲ್ಲಿಸುವುದು ಯೋಗ್ಯವಾದದ್ದು. ಇದರ ಅರ್ಥವು ಎಮ್ಮೆಯನ್ನು ಕೊಲ್ಲಿಸಬೇಕೆಂದಲ್ಲ. ಆದರೆ ಅದರ ಬೆಳವಣಿಗೆಗೆ ಉತ್ತೇಜನ ಕೊಡಲಾಗದು.

೪ ಹೀಗೆಯೇ ಯೋಚಿಸಲಾಗಿ ಬೀದಿಯಲ್ಲಿ ಅಲೆದಾಡುವ ನಾಯಿಗಳಿಗೆ ಆಹಾರ ಹಾಕುವುದು ಧರ್ಮವೆನಿಸುವುದಿಲ್ಲ. ನಾಯಿಯನ್ನು ಪ್ರೀತಿಸುವವರು ಅದನ್ನು ಸರಿಯಾಗಿ ಸಾಕಬೇಕು ಮತ್ತು ಅದರ ಸರ್ವವಿಧದ ಆರೈಕೆಯನ್ನೂ ಮಾಡಬೇಕು. ಆದರೆ ಇವುಗಳಿಗೆ ಆಹಾರವನ್ನು ಹಾಕಿ ಬೀದಿಯ ಮೇಲೆ ಅಲೆದಾಡಗೊಡುವುದರಿಂದ ಅವನ್ನು ಪೀಡಿಸಿದಂತಾಗುವುದು ಮತ್ತು ಅವುಗಳ ಅಧೋಗತಿಯಾಗುವುದು, ಅನ್ಯ ಪ್ರಜೆಗಳಿಗೆ ಅನನುಕೂಲತೆಯಾಗುವುದು. ಅಲ್ಲದೆ ಅಂಥ ನಾಯಿಗಳಿಗೆ ಹುಚ್ಚು ಹಿಡಿಯುವ ಸಂದರ್ಭವೂ ಇರುತ್ತದೆ.

೫ ಕೋತಿ, ಪಾರಿವಾಳ, ಹುಳು ಮುಂತಾದ ಪ್ರಾಣಿಗಳಿಗೆ ಆಹಾರ ಹಾಕುವುದೂ ಧರ್ಮವೆನಿಸುವುದಿಲ್ಲ. ಯಾವ ಪ್ರಾಣಿಗಳ ಜೀವನವು ಮನುಷ್ಯನನ್ನು ಅವಲಂಬಿಸಿಕೊಂಡಿರುವದಿಲ್ಲವೊ ಮತ್ತು ಯಾವ ಪ್ರಾಣಿಗಳ ಉಪಯೋಗವು ಮನುಷ್ಯನಿಗೆ ಇರುವುದಿಲ್ಲವೊ ಅಂಥ ಪ್ರಾಣಿಗಳನ್ನು ಸಾಕುವುದು ತರವಲ್ಲ. ಇಂಥ ಪ್ರಾಣಿಗಳನ್ನು ಸಾಕುವುದರಿಂದ ಮನುಷ್ಯನಿಗೆ ಹೆಚ್ಚು ತೊಂದರೆಯಾಗುವುದಲ್ಲದೆ ಆ ಪ್ರಾಣಿಗಳ ಹಿಂಸೆಯೂ ಹೆಚ್ಚಾಗುವುದು.

೬ ಪ್ರಾಣಿಗಳ ಅಹಿಂಸೆಯನ್ನು ಕುರಿತು ಜೈನರು ಮತ್ತು ವೈಷ್ಣವರು ಯಾವ ದೃಷ್ಟಿಯನ್ನಿಟ್ಟುಕೊಂಡಿದ್ದಾರೊ ಆ ದೃಷ್ಟಿಯನ್ನು ಇಟ್ಟುಕೊಳ್ಳದವರಿಂದ ಇಂಥ ಪ್ರಾಣಿಗಳ ಉಪದ್ರವವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಆಗಾಗ ಇವುಗಳ ಕೊಲೆಯಾದರೆ ಅದರಲ್ಲಿ ಆಶ್ಚರ್ಯದ ಸಂಗತಿಯೇನೂ ಇರುವುದಿಲ್ಲ. ಇಂಥ ಪ್ರಾಣಿಗಳಿಗೆ ಆಹಾರ ಹಾಕುವುದು ಧರ್ಮವೆಂದು ತಿಳಿಯುವ ವರ್ಗವೆ ಈ ಪ್ರಾಣಿಗಳ ವಧೆಗೆ ಹೊಣೆಯಾಗಿರುವುದು; ಇದರಿಂದ ಆ ವರ್ಗವು ಕುಪಿತವಾಗುವುದು ಯೋಗ್ಯವಲ್ಲ.

## ೩ ಪ್ರಾಣಿಗಳ ಬಗೆಗೆ ಕ್ರೂರತನ

೧ ಪ್ರಾಣಿಯನ್ನು ಒಂದೇ ಏಟಿನಿಂದ ಕೊಲ್ಲುವುದಕ್ಕಿಂತ ಅವರೊಡನೆ ಕ್ರೂರತನದಿಂದ ವರ್ತಿಸುವುದು ಕಡಿಮೆ ತರದ ಹಿಂಸೆಯಲ್ಲ. ಇಂತಹ ಹಿಂಸೆಯು ಹಿಂದೂ ಜನರಲ್ಲಿ ಚನ್ನಾಗಿ ಮನೆಮಾಡಿಕೊಂಡಿದೆ.

೨ ಫೂಂಕಾ ಎಂಬ ಕ್ರಿಯೆ, ಕಸಿಮಾಡಿಸುವುದು, ಅರೆಹೊಟ್ಟೆಗೆ ಹಾಕುವುದು, ಬಾರುಕೋಲಿನಿಂದ ಹೊಡೆಯುವುದು, ಮಿತಿಮೀರಿ ಭಾರಹೇರುವುದು, ಬಾಲಮುರಿಯುವುದು, ಆಹಾರಕ್ಕಾಗಿ ಕೊರಗಿಸುವುದು, ಗಾಯವಾದ ಅಂಗಗಳ ಶುಶ್ರೂಷೆ ಮಾಡದಿರುವುದು, ಮೂಗುದಾಣ ಹಾಕುವುದು ಮುಂತಾದ ರೀತಿಗಳು ಅಮಾನುಷವೂ ಕ್ರೂರವೂ ಇರುವವು.

೩ ಇವುಗಳ ಪರಿಣಾಮವು ಭಯಾನಕವಾಗಿದೆ. ಹಿಂದುಸ್ತಾನದಲ್ಲಿ ಆಕಳು, ಎತ್ತು, ಎಮ್ಮೆ, ಕುದುರೆ, ಕತ್ತೆ, ·ಬೆಕ್ಕು, ನಾಯಿ ಮುಂತಾದ ಪ್ರಾಣಿಗಳು ತೀರ ಕಂಗೆಡುವ ಸ್ಥಿತಿಯಲ್ಲಿ ಬಾಳುತ್ತಿವೆ.

## ೪ ಗೋವಧೆ

೧ ಹಿಂದೂ ಜನರ ಧಾರ್ಮಿಕ ದೃಷ್ಟಿಯನ್ನು ಸಂತೋಷಪಡಿಸುವುದಕ್ಕಾಗಿ ಮಾತ್ರವಲ್ಲ, ಹಿಂದುಸ್ತಾನದ ಆರ್ಥಿಕ ದೃಷ್ಟಿಯಿಂದಲೂ ಗೋವಧೆಗೆ ನಿರ್ಬಂಧವಿರತಕ್ಕದ್ದು.

೨ ಆದರೆ ಹೀಗಾಗದಿರುವ ವರೆಗೆ ಹಿಂದೂಗಳು ಧೈರ್ಯದಿಂದ ಇದ್ದುಕೊಂಡು ತಿಳಿಹೇಳಿಕೆ ಮತ್ತು ಸೇವೆಯಿಂದ ಗೋವಧೆಯನ್ನು ನಿಲ್ಲಿಸಲು ಯತ್ನಿಸತಕ್ಕದ್ದು.

೩ ಗೋವಧೆಯನ್ನು ನಿಲ್ಲಿಸಲು ಮನುಷ್ಯ (ಮುಸಲ್ಮಾನ) ವಧೆಯನ್ನು ಮಾಡುವುದು ಅಧರ್ಮ.

೪ ಆಕಳ ಬಲಿಯನ್ನು ಕೊಡುವುದು ಕರ್ತ್ಯವ್ಯಕರ್ಮವಲ್ಲವೆಂದು ತಿಳಿದುಕೊಂಡು ಮುಸಲ್ಮಾನರು ಅದರ ಬಲಿದಾನವನ್ನು ನಿಲ್ಲಿಸುವುದು ಪರಮ ಸತ್ಕೃತ್ಯವೆನಿಸುವುದು. ಕನಿಷ್ಠಪಕ್ಷದಲ್ಲಿ ಹಿಂದೂಗಳ ಅಂತಃಕರಣಕ್ಕೆ ನೋವಾಗದಂತೆ ಮರೆಯಲ್ಲಿ ಇಂಥ ವಧೆಯನ್ನು ಮಾಡುವುದು ಇದಕ್ಕಿಂತಲೂ ಕಡಿಮೆ ತರಗತಿಯ ಸತ್ಕೃತ್ಯವೆನಿಸುವುದು.

೫ ಹಿಂದೂ ಜನರ ಅಂತಃಕರಣವು ನೋಯುವ ಹಾಗೆ ಬಹಿರಂಗದಲ್ಲಿ ಗೋವಧೆಯನ್ನು ಮಾಡುವವರು ಮತ್ತು ವಧ್ಯಗೋವನ್ನು ಮೆರೆಸುವವರು

ಧರ್ಮಕಾರ್ಯವನ್ನು ಮಾಡಿದಂತಾಗುವುದಿಲ್ಲ. ಇಂಥ ಕೃತ್ಯದ ಆಚರಣೆಗೆ ನಿರ್ಬಂಧವಿರತಕ್ಕದ್ದು.

೬ ಯಾವುದೊಂದು ಹಬ್ಬದಲ್ಲಿ ಗೋ-ಬಲಿಯನ್ನು ಕೊಡುವ ಮುಸಲ್ಮಾನರಿಗಿಂತ ತಿನ್ನುವುದಕ್ಕಾಗಿ ದಿನವೂ ಗೋವಧೆಯನ್ನು ಮಾಡಿಸುವಂಥ ಇಂಗ್ಲಿಷ್ ರಾಜ್ಯವು ಹಿಂದೂಗಳಿಗೆ ಹಾಗೂ ಹಿಂದುಸ್ತಾನಕ್ಕೆ ಹೆಚ್ಚಿನ ಅಪಕಾರವನ್ನು ಮಾಡುತ್ತದೆ.

## ೫ ಸತ್ತ ದನಗಳು

೧ ತಾವು ಸಾಕಿದ ದನಗಳು ಸತ್ತ ಬಳಿಕ ಅವುಗಳ ಎಲುಬು, ಮಾಂಸ, ಮತ್ತು ಚರ್ಮಗಳನ್ನು ಉಪಯೋಗಿಸುವುದರಲ್ಲಿ ಉದಾರತೆಯಿಲ್ಲವೆಂದು ಎಷ್ಟೋ ಜನಗಳ ಭಾವನೆಯಾಗಿದೆ. ಆದ್ದರಿಂದಲೆ ದನದ ಯಾವ ಅಂಗವೂ ಉಪಯೋಗಿಸಲ್ಪಡುತ್ತಿರುವುದಿಲ್ಲ; ಮತ್ತು ಮಾದಿಗರು ಇವುಗಳ ಉಪಯೋಗವನ್ನು ಸರಿಯಾಗಿ ಮಾಡಿಕೊಳ್ಳುತ್ತಿರುವುದಿಲ್ಲ. ಮಾದಿಗರು ಸತ್ತ ದನಗಳ ಮಾಂಸವನ್ನು ತಿನ್ನುತ್ತಾರೆ. ಆದರೆ ಅವನ್ನು ದರದರ ಎಳೆಯುತ್ತ ಒಯ್ದು ಚರ್ಮವನ್ನು ಅನುಪಯುಕ್ತ ಮಾಡಿಬಿಡುತ್ತಾರೆ. ಅಲ್ಲದೆ ಎಲುಬುಗಳನ್ನು ಮುರಿದು ಪುಡಿಪುಡಿ ಮಾಡಿಬಿಡುತ್ತಾರೆ.

೨ ಈ ಭಾವನೆಯನ್ನು ಬಿಟ್ಟುಬಿಡುವುದು ಅವಶ್ಯ. ತಮ್ಮ ದನಗಳು ಜೀವಿಸಿರುವವರೆಗೆ ಅವನ್ನು ಸರಿಯಾಗಿ ರಕ್ಷಿಸತಕ್ಕದ್ದು ಮತ್ತು ಸತ್ತ ಬಳಿಕ ಅವನ್ನು ಮರ್ಯಾದೆಯಿಂದ ಹೊತ್ತುಕೊಂಡು ಹೋಗಿ ಯೋಗ್ಯ ಸ್ಥಳದಲ್ಲಿ ಕೊಯ್ಯಿಸತಕ್ಕದ್ದು. ದನಗಳು ಸತ್ತ ಮೇಲೂ ನಿರುಪಯೋಗಿಯಾಗುವುದಿಲ್ಲವೆಂದು ತಿಳಿದುಕೊಂಡು ಅವು ಜೀವಿಸಿರುವಾಗ ಅವುಗಳೊಡನೆ ದಯೆಯಿಂದ ವರ್ತಿಸತಕ್ಕದ್ದು ಮತ್ತು ಅವು ಜೀವಿಸಿದ್ದಾಗ ನಾವು ಅವುಗಳ ಉಪಕಾರವನ್ನು ಹೇಗೆ ಪಡೆಯುತ್ತೇವೊ ಹಾಗೆಯೆ ಸತ್ತ ಮೇಲೂ ಅವುಗಳನ್ನು ಕೃತಜ್ಞತಾಬುದ್ಧಿಯಿಂದ ಉಪಯೋಗಿಸಿಕೊಂಡರೆ ಅದರಲ್ಲಿ ಯಾವ ದೋಷವೂ ಇಲ್ಲ.

೩ ಸತ್ತ ದನಗಳನ್ನು ಉಪಯೋಗಿಸಿಕೊಳ್ಳದಿದ್ದರೆ ಅವು ಆರ್ಥಿಕ ದೃಷ್ಟಿಯಿಂದ ತುಟ್ಟಿಯಾಗುವುವು. ಹಾಗೆ ತುಟ್ಟಿಯಾದರೆ ಯಾರೂ ಅವುಗಳನ್ನು ಸಾಕುವುದಿಲ್ಲ ಮತ್ತು ಗೋಪಾಲನೆಯ ಧರ್ಮವನ್ನು ಬಿಟ್ಟುಬಿಡುತ್ತಾರೆ.

೪ ಸತ್ತ ದನಗಳನ್ನು ಎಳೆಯುತ್ತ ಒಯ್ಯುವುದು ಸರಿಯಲ್ಲ. ಎಳೆಯು

ವಾಗ ಅವುಗಳ ಚರ್ಮವು ಕೆಡುವುದಲ್ಲದೆ ಅದಕ್ಕೆ ಯೋಗ್ಯ ಬೆಲೆಯು ಸಿಕ್ಕುವುದಿಲ್ಲ. ಇವುಗಳನ್ನು ಬಂಡಿಯಲ್ಲಿ ಇಲ್ಲವೆ ಹೊತ್ತುಕೊಂಡು ಒಯ್ಯತಕ್ಕದ್ದು.

೫ ಚರ್ಮವನ್ನು ಸರಿಯಾಗಿ ಸುಲಿದುಕೊಳ್ಳತಕ್ಕದ್ದು. ಮಾಂಸ ಎಲುಬುಗಳ ಗೊಬ್ಬರ ಮಾಡಿಕೊಂಡು ಉಪಯೋಗಿಸತಕ್ಕದ್ದು. ಇವುಗಳ ಕರುಳುಗಳಿಂದ ಕೂಡ ಎಷ್ಟೋ ಉಪಯುಕ್ತ ವಸ್ತುಗಳು ಆಗಬಲ್ಲವು.

೬ ಈ ಉದ್ಯೋಗಕ್ಕೆ ತಕ್ಕಷ್ಟು ಕ್ಷೇತ್ರವಿದೆ. ಇದನ್ನು ಬೇಕಾದಷ್ಟು ಬೆಳೆಸಬಹುದು. ಆದ್ದರಿಂದ ಕಲಿತವರು ಈ ಉದ್ಯೋಗಕ್ಕೆ ಸಂಬಂಧಪಟ್ಟ ವಿದ್ಯಾರ್ಜನೆಯನ್ನು ಮಾಡುವುದು ಅವಶ್ಯ.

# ನವಮ ಖಂಡ

## ಖಾದಿ

### ರಾಟೆಯ ಗುಣಗಳು *

೧ ಪೋಷಕ ಉದ್ಯೋಗವೆನಿಸಿದ ರಾಟೆಯಲ್ಲಿರುವ ಗುಣಗಳು ಮತ್ತಾವ ಉದ್ಯೋಗದಲ್ಲಿಯೂ ಇರುವುದಿಲ್ಲ. ಈ ಗುಣಗಳು ಸಂಕ್ಷೇಪವಾಗಿ ಇಂತಿರುವವು :

(ಅ) ಈ ಉದ್ಯೋಗವು ಸುಸಾಧ್ಯವೂ ತತ್ಕಾಲಸಾಧ್ಯವೂ ಇರುತ್ತದೆ; ಏಕೆಂದರೆ:

(೧) ಇದಕ್ಕೆ ದೊಡ್ಡ ಉಪಕರಣಗಳೂ ಸಾಧನಗಳೂ ಬೇಕಾಗುವುದಿಲ್ಲ. ಹತ್ತಿಯು ಮನೆಯದು, ಉಪಕರಣಗಳೂ ಮನೆಯವೆ.

(೨) ಇದಕ್ಕೆ ವಿಶೇಷ ಬುದ್ಧಿಯೂ ಕೌಶಲ್ಯವೂ ಬೇಕಾಗುವುದಿಲ್ಲ. ಶುದ್ಧ ಅಶಿಕ್ಷಿತ ಒಕ್ಕಲಿಗನು ಕೂಡ ಇದನ್ನು ಮಾಡಬಲ್ಲನು.

---

* ೧೯೨೬ರ ಅಕ್ಟೋಬರ್ ೩೧ರಲ್ಲಿ "ನವಜೀವನ" ದಲ್ಲಿ ಪ್ರಕಟವಾಗಿರುವ ಗಾಂಧಿಯವರ ಲೇಖವು ಶ್ರೀಯುತ ಗ್ರೇಗ್ ಕೃತ "ಖಾದಿಯ ವ್ಯಾಪಕ ಅರ್ಥಶಾಸ್ತ್ರ" ದ ಪರಿಶಿಷ್ಟದಲ್ಲಿ ಉದ್ಧೃತವಾಗಿದೆ. ಇಲ್ಲಿ ಅದನ್ನು ತೆಗೆದುಕೊಂಡಿದೆ.

(೩) ಇದಕ್ಕೆ ಹೆಚ್ಚು ಪರಿಶ್ರಮವೂ ಬೇಡ. ಹೆಂಗುಸರು ನೂಲ ಬಹುದು; ಚಿಕ್ಕಮಕ್ಕಳು, ಮುದುಕರು, ಮತ್ತು ಬೇನೆ ಬೇಸರಿಕೆಯವರು ಕೂಡ ನೂಲಬಹುದು; ಮತ್ತು--

(೪) ಇದು ಅನೇಕ ಶತಕಗಳ ಅನುಭವದಿಂದ ಸಿದ್ಧವಾದ ಉದ್ಯೋಗ.

(ಆ) ನೂಲುವವರಿಗೆ ಮನೆಯಲ್ಲಿಯೆ ಉದ್ಯೋಗವು ಸಿಕ್ಕಂತಾಗು ವುದು, ಅವರ ನೂಲು ಯಾವಾಗಲೂ ವೆಚ್ಚವಾಗುವುದು, ಬಡವರ ಮನೆಯಲ್ಲಿ ಎರಡು ಕಾಸು ಉಳಿಯುವುದು.

(ಇ) ಇದಕ್ಕೆ ಮಳೆಗಾಲವೇ ಬೇಕೆಂದಿಲ್ಲ. ಬೇಸಿಗೆಯಲ್ಲಿಯೂ ಇದು ಹಸಿದವರ ಹೊಟ್ಟೆಗೆ ಒಂದು ತುತ್ತು ಅನ್ನ ಹಾಕುವುದು.

(ಈ) ಇದಕ್ಕೆ ಧರ್ಮದ ನಿಷೇಧವಿಲ್ಲ, ಮತ್ತು ಇದು ಜನರಿಗೆ ರುಚಿಸದ ಕಸುಬಲ್ಲ.

(ಉ) ಇದು ಜನರಿಗೆ ಮನೆಯಲ್ಲಿ ಕುಳಿತಲ್ಲಿಯೇ ಕೆಲಸ ಕೊಡುವುದು; ಗಿರಣಿಯ ಕೂಲಿಕಾರರಾದರೋ ದುಡಿಯುವುದಕ್ಕಾಗಿ ಮನೆಯನ್ನೂ ಹೊಲವನ್ನೂ ಬಿಟ್ಟು ಗಿರಣಿಗೆ ಹೋಗಬೇಕಾಗುವುದು. ಅದರಿಂದ ಅವರ ಮನೆತನವು ಮುಕ್ಕಾಗುವದು. ಇದರಲ್ಲಿ ಆ ತರದ ಭಯವಿಲ್ಲ.

(ಊ) ಹಿಂದುಸ್ಥಾನದ ಗ್ರಾಮಪಂಚಾಯತಿಗಳು ಇಂದು ಮರಣೋ ನ್ಮುಖವಾಗಿರುವವು. ಇದು ಅವುಗಳ ಪುನರುಜ್ಜೀವನವನ್ನು ಮಾಡಬಲ್ಲದು.

(ಎ) ಒಕ್ಕಲಿಗನಿಗೆ ಇದನ್ನು ಬಿಟ್ಟರೆ ಹೇಗೆ ಬೇರೆ ಗತಿ ಇಲ್ಲವೊ ಹಾಗೆಯೇ ನೇಕಾರನಿಗೂ ಇದರ ಹೊರತು ಕಾರ್ಯ ಸಾಗುವುದಿಲ್ಲ. ಇಂದು ಹಿಂದುಸ್ತಾನದಲ್ಲಿ ಉಪಯೋಗಿಸುವ ಬಟ್ಟೆಯ ೩ರಷ್ಟು ಬಟ್ಟೆಯನ್ನು ನೇಕಾರರು ನೇಯುವರು. ರಾಟಿಯು ನಿರ್ನಾಮವಾದರೆ ಅವರು ಒಂದಲ್ಲ ಒಂದು ದಿನ ನಿರ್ಗತಿಕರಾಗಬಹುದು.

(ಏ) ಇದರ ಪುನರುದ್ಧಾರದಿಂದ ಸಾವಿರಾರು ಉದ್ಯೋಗಗಳ ಉದ್ಧಾ ರವಾಗುವುದು. ಬಡಿಗರು, ಕಮ್ಮಾರರು, ಪಿಂಜಾರರು, ಬಣ್ಣಗಾರರು ಮುಂತಾದವರಲ್ಲಿ ಪುನಃ ಜೀವಕಳೆ ಬರುವುದು.

(ಐ) ಇದೊಂದರಿಂದಲೇ ಧನದ ಅಸಮಾನ ವಿಭಜನೆಯು ಅಳಿದು ಸಮಾನತೆಯು ಬರಬಹುದು.

(ಒ) ಇದರಿಂದಲೇ ಉದ್ಯೋಗಗೇಡಿತನವು ದೂರವಾಗುವುದು.

ಒಕ್ಕಲಿಗನಿಗೆ ಬಿಡುವಿನ ಸಮಯದಲ್ಲಿ ಮಾತ್ರವೇ ಅಲ್ಲ, ಇಂದು ಕೆಲಸವಿಲ್ಲದೆ ಗುಂಪು ಗುಂಪಾಗಿ ಅಲೆದಾಡುವ ಶಿಕ್ಷಿತ ಜನರಿಗೂ ಕೆಲಸ ದೊರೆಯುವುದು. ಈ ಕೈಗಾರಿಕೆಯ ಪುನರುದ್ಧಾರದ ಕಾರ್ಯವು ಅಷ್ಟಿಷ್ಟು ದೊಡ್ಡದಲ್ಲ. ಇದರಲ್ಲಿ ಸಾವಿರಾರು ಶಿಕ್ಷಿತ ಜನರು ತೊಡಗಿದರೂ ಕಡಿಮೆಯೇ.

೨ ಇನ್ನು, ರಾಟೆಗಳು ಪುನಃ ಪ್ರಚಾರಗೊಂಡಲ್ಲೆಲ್ಲ ಅವು ಅನೇಕರಿಗೆ ಅನೇಕ ತರದ ಲಾಭಗಳನ್ನು ಮಾಡಿಕೊಟ್ಟಿವೆ. ಈ ಲಾಭಗಳು ಕೂಡ ರಾಟೆಯ ಗುಣಗಳೇ. ಈ ಲಾಭಗಳು ಇಂತಿರುವವು: *

(ಅ) 'ರಾಟೆಗಳು ಎಷ್ಟೋ ಜನರ ಜೀವನಪರಿವರ್ತನೆಯನ್ನೂ ಹೃದಯ ಪರಿವರ್ತನೆಯನ್ನೂ ಮಾಡಿರುವವು.'

(ಆ) ' ರಾಟೆಗಳಿಂದಲೆ ಹೆಂಡದ ಚಟವು ಕಡಿಮೆಯಾಗಲಾರಂಭಿಸಿದೆ, ಮತ್ತು ಒಕ್ಕಲಿಗರು ಸಾಲದಿಂದ ಮುಕ್ತರಾಗುತ್ತಿದ್ದಾರೆ. '

(ಇ) ಬರಗಾಲದಲ್ಲಿ ಸಂಕಟಗಳ ನಿವಾರಣೆ ಮಾಡುವ ಕಾರ್ಯದಲ್ಲಿ ಇದು ಹೆಸರುವಾಸಿಯಾಗಿದೆ.

## ೨ ರಾಟೆಯನ್ನು ಕುರಿತ ತಪ್ಪು ವಿಚಾರಗಳು

೧ ' ರಾಟೆಯನ್ನು ಕುರಿತು ಅನೇಕರು ಅನೇಕ ತರದ ಟೀಕೆಗಳನ್ನು ಮಾಡುತ್ತಾರೆ. ಈ ಟೀಕೆಗೆ ರಾಟೆಯನ್ನು ಕುರಿತ ಅವರ ತಪ್ಪುವಿಚಾರಗಳೆ ಕಾರಣ.' ಕೆಳಗಿನ ಉತ್ತರಗಳಿಂದ ಆ ತಪ್ಪು ವಿಚಾರಗಳು ಯಾವವು ಎನ್ನುವುದು ತಿಳಿದುಬರುವುದು.

೨ ' ರಾಟೆಯು ಗಿರಣಿಯೊಡನೆ ಮೇಲಾಟಮಾಡುವ ಉದ್ಯೋಗವಲ್ಲ. ಗಿರಣಿಯ ಸ್ಥಾನವನ್ನು ರಾಟೆಯು ಪಡೆಯತಕ್ಕದ್ದೆಂಬ ವಿಚಾರವೇ ಇರುವುದಿಲ್ಲ. ಅದಕ್ಕೆ ಬದಲಾಗಿ ಗಿರಣಿಗಳೇ ರಾಟೆಯ ಪ್ರತಿಸ್ಪರ್ಧಿಗಳು. ಆ ಮಟ್ಟಿಗೆ ಅವುಗಳ ನಿಯಂತ್ರಣವು ಆವಶ್ಯ. '

೩ ರಾಟೆಯು ಯಾವುದಾದರೊಂದು ಮುಖ್ಯ ಉದ್ಯೋಗದ ಸ್ಥಾನದಲ್ಲಿ ವಿರಾಜಮಾನವಾಗಬೇಕೆಂದು ಬಯಸುವುದಿಲ್ಲ. ' ತನ್ನ ಪೂರ್ಣ ಶಕ್ತಿ ಮತ್ತು ಸಂಪೂರ್ಣ ಸಮಯವನ್ನು ಉಪಯೋಗಿಸಲು ತಕ್ಕಷ್ಟು ಕಾರ್ಯವು

---

* ಈ ಸೂತ್ರದಲ್ಲಿಯ ಭಾಗವು ಕೂಡ, ೧೯೨೪ರ ನವಂಬರ್ ೬ ರಲ್ಲಿ " ನವಜೀವನ "ದಲ್ಲಿ ಪ್ರಕಟವಾದ ಲೇಖನಮಾಲೆಯಿಂದ ಶ್ರೀ. ಗ್ರೇಗರು ತಮ್ಮ ಪುಸ್ತಕದಲ್ಲಿ ಎತ್ತಿಕೊಂಡಿದ್ದು ಇಲ್ಲಿ ಮತ್ತೆ ಉದ್ಧರಿಸಲ್ಪಟ್ಟಿದೆ.

ಇರುವ ಸಶಕ್ತ ಮನುಷ್ಯನು ತನ್ನ ಆ ಕೆಲಸವನ್ನು ಮಾಡಬಾರದೆಂದು ರಾಟೆಯು ಹೇಳುವುದಿಲ್ಲ.' ಆದ್ದರಿಂದ ಈ ಕೈಗಾರಿಕೆಯಿಂದ ಬಂದ ಗಳಿಕೆಯನ್ನು ಉಳಿದ ಧಂದೆಗಳಿಂದಾದ ಗಳಿಕೆಯೊಡನೆ ಹೋಲಿಸಿದರೆ ದೊಡ್ಡ ತಪ್ಪಾಗುವುದು.

೪ 'ರಾಟೆಯಿಂದ ಹೊಟ್ಟೆ ತುಂಬಿಕೊಳ್ಳಿರಿ. .... ಬೇರೆ ಉದ್ಯೋಗಗಳನ್ನು ಬಿಟ್ಟು ರಾಟೆಯನ್ನು ತಿರುಗಿಸಿರಿ ಎಂದು ಯಾರೂ ಹೇಳುವುದಿಲ್ಲ.'

೫ 'ರಾಟೆಯಿಂದ ದೇಶದ ಧನವು ತಪ್ಪದೆ ವೃದ್ಧಿಹೊಂದುವುದು, ಪೂರ್ಣ ಕೂಲಿ ಕೊಟ್ಟರೆ ಅದರಿಂದ ಹೊಟ್ಟೆಯೂ ತುಂಬಬಹುದು. ಆದರೆ ಯಾರಾದರೂ ರಾಟೆಯಿಂದ ಸಿರಿವಂತರಾಗಲು ಆಶೆಪಟ್ಟರೆ ಅವರು ಪೆಟ್ಟು ತಿನ್ನುವರು. ಇದು ರಾಟೆಯ ಗುಣವೆ ಹೊರತು ದೋಷವಲ್ಲ. ಆ ಮಟ್ಟಿಗೆ ಅದು ಆರ್ಥಿಕ ಸಮಾನತೆಯ ಸಾಧನವಾಗುವುದು.'

೬ 'ಹಿಂದುಸ್ತಾನದ ಒಕ್ಕಲಿಗರ ಆರು ತಿಂಗಳು ವ್ಯರ್ಥವಾಗಿ ಹಾಳಾಗುವವು. ಇದರಿಂದ ಅವರ ಎದುರು ನಿರುದ್ಯೋಗ ಮತ್ತು ಬಡತನದ ದೊಡ್ಡ ಪ್ರಶ್ನೆಯು ನಿಲ್ಲುವುದು. ಈ ಪ್ರಶ್ನೆಯನ್ನು ರಾಟೆಯು ಆಗಿಂದಾಗ ಬಗೆಹರಿಸಬಲ್ಲದು. ಆದುದರಿಂದ ವ್ಯಾವಹಾರಿಕ ಹಾಗೂ ಕೊನೆಯವರೆಗೆ ಬಾಳುವಂಥ ಉಪಾಯವು ಇದೇ ಎಂದು ರಾಟೆಯ ಪುರಸ್ಕರ್ತರು ಸ್ಪಷ್ಟವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತಾರೆ.'

೭ ರಾಟೆಯಿಂದ ಬಂದ ಹುಟ್ಟುವಳಿ ಒಂದು ಒಡಕು ಕವಡೆಯಷ್ಟು ಇರಬಹುದು. ಆದರೂ ಒಕ್ಕಲಿಗರ ವರ್ಷದಲ್ಲಿ ಅರ್ಧದಷ್ಟು ವೇಳೆಯು ವ್ಯರ್ಥವಾಗಿ ಹೋಗುವುದು. ಆ ಕಾಲದಲ್ಲಿ ಅವರಿಗೆ ಒಡಕು ಕವಡೆಯಷ್ಟೂ ಉತ್ಪನ್ನವಾಗುವುದಿಲ್ಲ. ಅಲ್ಲದೆ ಅವರಿಗೆ ನಿರುದ್ಯೋಗದ ರೋಗವೂ ಅಂಟಿಕೊಳ್ಳುವುದು. ಇಂತಹ ಪರಿಸ್ಥಿತಿ ಇದ್ದಿರದಿದ್ದರೆ ಹಿಂದುಸ್ತಾನದ ಅರ್ಥಶಾಸ್ತ್ರದಲ್ಲಿ ರಾಟೆಗೆ ಸ್ಥಾನವೆ ಇರುತ್ತಿರಲಿಲ್ಲ.'

೮ ರಾಟೆಯಿಂದ ಅತ್ಯಲ್ಪವಾದರೂ ಗಳಿಸಬಹುದೆಂದು ಮೇಲೆ ಹೇಳಿದೆ. ನಾವು ಹಾಗೆ ಹೇಳಿದ್ದು ಆತ್ಮಸಂತೋಷಕ್ಕಾಗಿ ಅಲ್ಲ ; ರಾಟೆಯು ಎಷ್ಟು ಉಪಯುಕ್ತವೆಂಬುದನ್ನು ತೋರಿಸುವುದಕ್ಕಾಗಿ. ವಾಸ್ತವಿಕವಾಗಿ ರಾಟೆಯಿಂದಲೆ ಆಗಲಿ ಮತ್ತಾವ ಕೆಲಸದಿಂದಲೆ ಆಗಲಿ, ಅತ್ಯಲ್ಪ ಉತ್ಪನ್ನವೇ ದೊರೆಯುವ ಸ್ಥಿತಿಯು ಸಂತೋಷಜನಕವಲ್ಲ. ಈ ವಿಷಯವಾಗಿ

'ಸ್ವಾವಲಂಬಿಯಾದ ಮತ್ತು ಕೂಲಿಯ ಖಾದಿ' ಎಂಬ ಪ್ರಕರಣದಲ್ಲಿ ಹೆಚ್ಚು ವಿಚಾರಗಳನ್ನು ಮಂಡಿಸಲಾಗಿದೆ.

## ೩ ಖಾದಿಯೂ ಗಿರಣಿಬಟ್ಟೆಯೂ

೧ ಖಾದಿ ಮತ್ತು ಗಿರಣಿ ಬಟ್ಟೆ ಇವೆರಡರಲ್ಲಿ ಮೇಲಾಟವಾಗಗೊಡ ತಕ್ಕದ್ದಲ್ಲ. ಈ ಮೇಲಾಟವು ಒಳಿತಾದುದೂ ಅಲ್ಲ.

೨ ರಾಟೆಯು ಕೋಟಿಗಟ್ಟಲೆ ಜನರ ಗೃಹೋದ್ಯೋಗ, ಜೀವನದ ಆಧಾರ. ಗೃಹೋದ್ಯೋಗವು ನಾಶವಾಗುವಂತೆ ಗಿರಣಿಗಳ ಉದ್ಯೋಗ ನಡೆದರೆ ಅಥವಾ ನಡೆಯಗೊಟ್ಟರೆ ಅದನ್ನು ನಡೆಸುವವನೂ ನಡೆಯಗೊಡು ವವನೂ ಜನರ ಕ್ಷೇಮಚಿಂತನೆ ಮಾಡುವುದಿಲ್ಲವೆನ್ನಬಹುದು.

೩ ಆದ್ದರಿಂದ, ಗಿರಣಿಗಳು ಒಂದು ವೇಳೆ ಇದ್ದರೂ ಅವು ರಾಟೆಯ ಕಾರ್ಯಕ್ಕೆ ಅಡ್ಡಿಮಾಡಕೂಡದು. ಕೋಟಿಗಟ್ಟಲೆ ಜನರು ಯಾವ ಬಗೆಯ ನೂಲನ್ನು ನೂಲುವರೊ ಮತ್ತು ಯಾವ ಬಗೆಯ ಬಟ್ಟೆಯನ್ನು ನೇಯು ವರೊ ಅದನ್ನು ಗಿರಣಿಗಳು ಮಾಡಕೂಡದೆಂದು ಅಪ್ಪಣೆ ಇರತಕ್ಕದ್ದು.

೪ ವ್ಯಕ್ತಿಯ ಪ್ರಶ್ನೆಯನ್ನು ಬಿಟ್ಟು, ರಾಷ್ಟ್ರೀಯ ಅರ್ಥಶಾಸ್ತ್ರದ ದೃಷ್ಟಿ ಯಿಂದ ಯೋಚಿಸಿದರೆ ಯಾವುದಾದರೂ ವಸ್ತುವಿನ ಮೂಲ ಬೆಲೆಯನ್ನು ಕಂಡುಹಿಡಿಯುವಾಗ ಅದಕ್ಕಾಗಿ ಉಪಯೋಗಿಸಿದ ಪದಾರ್ಥ, ಬಂಡ ವಲು, ಕೂಲಿ ಮತ್ತು ಅದನ್ನು ಮಾಡುವವನಿಗೆ ತಗಲಿದ ವೆಚ್ಚದ ವಿಚಾರ ವನ್ನು ಮಾತ್ರವೇ ಮಾಡತಕ್ಕದ್ದಲ್ಲ. ಆದರೆ ಈ ರೀತಿ ಆ ವಸ್ತುಗಳನ್ನು ಹುಟ್ಟಿಸುವುದರಿಂದ ನಿರುದ್ಯೋಗಿಗಳ ಸಂಖ್ಯೆಯು ಬೆಳೆಯುತ್ತಿದ್ದರೆ ಆ ನಿರು ದ್ಯೋಗಿಗಳನ್ನು ಕಾಪಾಡುವ ವೆಚ್ಚವೂ ಪ್ರಜರ ಮೇಲೆಯೇ ಬೀಳುವುದು, ಎಂದರೆ ಈ ವೆಚ್ಚವು ಆ ವಸ್ತುಗಳ ಮೇಲೆಯೇ ಬೀಳಬೇಕು ಎಂಬುದನ್ನು

* ಹೆಚ್ಚು ವಿವರಗಳಿಗಾಗಿ ಶ್ರೀ. ಗ್ರೇಗರ ಪುಸ್ತಕದಿಂದ ಎತ್ತಿದ ಈ ಅಂಕಿಗಳು ಹೆಚ್ಚು ಉಪಯುಕ್ತವಾಗಿವೆ. ಒಬ್ಬನು ಒಂದು ಗಂಟೆಯಲ್ಲಿ ಕೈಯಿಂದ ಎಷ್ಟು ನೇಯಬಲ್ಲನೊ ಅದಕ್ಕಿಂತಲೂ ೨೦೩ ರಿಂದ ೨೩೬ ಮಡಿ ಹೆಚ್ಚಾಗಿ ಗಿರಣಿಯಲ್ಲಿ ನೂಲಬಲ್ಲನು ; ಕೈಯಿಂದ ಎಷ್ಟು ನೇಯಬಲ್ಲನೋ ಅದಕ್ಕಿಂತಲೂ ೨೦ ಮಡಿ ಹೆಚ್ಚಾಗಿ ಗಿರಣಿಯಲ್ಲಿ ನೇಯಬಲ್ಲನು. [ ಇದು ೧೯೨೬ ರ ಲೆಕ್ಕ. ] ಇಬ್ಬರೂ ಸಮನಾಗಿ ಕೆಲಸಮಾಡಿದರೆ ಗಿರಣಿಯಲ್ಲಿ ನೂಲುವವನು ೨೦೦ ಕ್ಕಿಂತ ಹೆಚ್ಚು ಜನ ಕೈಯಿಂದ ನೂಲುವವರನ್ನೂ, ಗಿರಣಿಯ ನೇಕಾರನು ೨೦ ಕ್ಕಿಂತ ಹೆಚ್ಚು ಜನ ಕೈಯಿಂದ ನೂಲುವವರನ್ನೂ ಕೆಲಸಗೇಡಿ ಗಳನ್ನಾಗಿ ಮಾಡುತ್ತಾನೆ. ಇಂಥ ನಿರುದ್ಯೋಗಿಗಳ ಮುಕ್ಕಾಲು ಪಾಲು ಕಾಲವು ಅನ್ಯ

ತಿಳಿಯತಕ್ಕದ್ದು. ಈ ದೃಷ್ಟಿಯಿಂದ ನೋಡಿದರೆ ಖಾದಿಗಿಂತಲೂ ಗಿರಣಿ ಬಟ್ಟೆಯೆ ತುಟ್ಟಿಯಾಗುವುದೆಂಬುದು ಗೊತ್ತಾಗುವುದು.*

೫ ಹೀಗೆ ಪ್ರಜೆಗಳ ಹಿತವನ್ನು ಬಯಸುವ ಸರಕಾರವಿದ್ದರೆ ನಿರುದ್ಯೋಗದ ನಿರ್ಮೂಲನವನ್ನು ಮಾಡಿದಹೊರತು ಖಾದಿಯೊಡನೆ ಗಿರಣಿಯು ಮೇಲಾಟವನ್ನು ನಡೆಸಲು ಎಂದೂ ಇಂಬುಗೊಡಲಿಕ್ಕಿಲ್ಲ.

೬ ಇಂತಹ ಸರಕಾರವು ಇಲ್ಲದ್ದರಿಂದ ಜನರು ಬಡವರ ಮೇಲಿನ ಕನಿಕರದಿಂದಾದರೂ ಗಿರಣಿಯು ಇಂಥ ಉದ್ಯೋಗವನ್ನು ನಿಲ್ಲಿಸತಕ್ಕದ್ದು.

೭ ಗಿರಣಿಯು ಮಾಡುವ ಹಾನಿಕರವಾದ ಮೇಲಾಟವನ್ನು ನಿಲ್ಲಿಸುವುದಕ್ಕಾಗಿ ಪರದೇಶೀವಸ್ತ್ರದ ಮತ್ತು ಖಾದಿಯ ಕ್ಷೇತ್ರದಲ್ಲಿ ಕೈಹಾಕುವ ದೇಶೀ ಗಿರಣಿಗಳನ್ನು ಬಹಿಷ್ಕರಿಸುವುದು, ಖಾದೀ ಧರಿಸುವ ಪ್ರತಿಜ್ಞೆ ಮಾಡುವುದು, ಖಾದಿಯ ಬಗೆಗೆ ದಾನಮಾಡುವುದು, ಯಜ್ಞಕರ್ಮವೆಂದು ತಿಳಿದು ನೂಲುವುದು, ಮುಂತಾದವುಗಳು ಅಹಿಂಸಾತ್ಮಕ ಮಾರ್ಗಗಳು.

## ೪ ರಾಟೆಯೂ ಕೈಮಗ್ಗವೂ

೧ ಕೈನೂಲಿನ ಬದಲು ಕೇವಲ ಕೈನೇಯಿಗೆಗೆ ಮಾತ್ರ ಉತ್ತೇಜನ ಕೊಡತಕ್ಕದ್ದು, ಮತ್ತು ಗಿರಣಿಯ ನೂಲನ್ನು ಬಹಿಷ್ಕರಿಸದೆ ಗಿರಣಿಯ

ಉದ್ಯೋಗಗಳಲ್ಲಿ ಕಳೆದುಹೋಗುತ್ತದೆ ಎಂಬ ತಿಳಿವಳಿಕೆಯಿಂದ ಹೆಚ್ಚು ಸಡಿಲುಮಾಡಿ ಲೆಕ್ಕ ಹಾಕಿದರೂ ೨೬೭ತ್ತಿ ಲಕ್ಷ ಜನರಿಗೆ ದಿನಕ್ಕೆ ಪ್ರತಿ ಒಬ್ಬನಿಗೂ ೩ ಆಣೆಗಳಷ್ಟು ಹಾನಿಯಾಗುತ್ತದೆ. ಈ ನಿರುದ್ಯೋಗಿಗಳನ್ನು ಸಲಹುವ ವೆಚ್ಚವನ್ನು ಪರದೇಶಿ ಮತ್ತು ಸ್ವದೇಶೀ ಗಿರಣಿಗಳ ಬಟ್ಟೆಯಮೇಲೆ ಹಾಕಿದರೆ ಪ್ರತಿಯೊಂದು ಗಜಕ್ಕೆ ೦–೧–೯ಯಷ್ಟು, ಬರಿಯ ಪರದೇಶೀ ಗಿರಣಿಗಳ ಬಟ್ಟೆಯ ಮೇಲೆ ಹಾಕಿದರೆ ಪ್ರತಿಯೊಂದು ಗಜಕ್ಕೆ ೦–೫–೨ಯಷ್ಟು ಬೆಲೆಯು ಹೆಚ್ಚಾಗುವುದು. ೧೯೨೬ರಲ್ಲಿ ಮಾಡಿದ ಲೆಕ್ಕದ ಪ್ರಕಾರ ಖಾದಿ ಮತ್ತು ಗಿರಣಿ ಬಟ್ಟೆಯ ನಡುವೆ ಗಜಕ್ಕೆ ೦–೨–೦ಯ ಅಂತರವಿತ್ತು. ಇಂದು ಇದಕ್ಕೂ ಕಡಿಮೆ ಆಗಿದೆ. ಪ್ರಜಾತಂತ್ರ ಸರಕಾರವೇ, ಈ ನಿರುದ್ಯೋಗಿಗಳ ನಿರ್ವಾಹದ ವೆಚ್ಚವನ್ನು ಬಟ್ಟೆಯ ಗಿರಣಿಗಳಿಂದ ತೆರಿಗೆಯ ರೂಪದಿಂದ ವಸೂಲು ಮಾಡಬೇಕಾದೀತು. ಆಗ, ಗಿರಣಿ ಬಟ್ಟೆಯು ಅಗ್ಗವಾಗುವುದಿಲ್ಲವೆಂಬುದೂ ಗೊತ್ತಾದೀತು. ಆದರೆ ಈಗಲಾದರೋ ಈ ವೆಚ್ಚವನ್ನು ಪ್ರಜೆಗಳು ಪರೋಕ್ಷವಾಗಿ ಕೊಡುತ್ತಿದ್ದಾರೆ. ಆದರೆ ಇದು ಪೇಟೆಯ ದರದಲ್ಲಿ ಮಾತ್ರ ಕಂಡುಬರುವುದಿಲ್ಲ. ಇದರ ಬಗೆಗೆ ಹೆಚ್ಚು ವಿಷಯವನ್ನು ಶ್ರೀ. ಗ್ರೇಗರ ಪುಸ್ತಕದಿಂದ ತಿಳಿದುಕೊಳ್ಳಬಹುದು. —ಕಿ. ಘ. ಮ.

ನೇಯಿಗೆಯನ್ನು ಮಾತ್ರ ಬಹಿಷ್ಕರಿಸತಕ್ಕದ್ದು ಎನ್ನುವ ವಿಚಾರವು ರಾಟಿಯ ವಿಷಯದಲ್ಲಿದ್ದ ತಪ್ಪು ತಿಳಿವಳಿಕೆಯಿಂದ ಹುಟ್ಟಿದೆ. ಏಕೆಂದರೆ:

೨ 'ನೂಲುವ ಉದ್ಯೋಗವು ಹೇಗೆ ಸಾರ್ವತ್ರಿಕವಾಗಬಲ್ಲದೋ ಹಾಗೆ ಕೈನೇಯಿಗೆಯ ಉದ್ಯೋಗವು ಸಾರ್ವತ್ರಿಕವಾಗಲಾರದು.' *

೩ ನೂಲುವುದು ಪೋಷಕ ಉದ್ಯೋಗವಾಗಬಲ್ಲದು; ಆದರೆ ನೇಯಿಗೆಯು ಮಾತ್ರ ಸ್ವತಂತ್ರ ಉದ್ಯೋಗವೇ ಆಗಬಲ್ಲದು. ಈ ವಿಚಾರವು ಈ ಸೂಚನೆ ಮಾಡುವವರ ಲಕ್ಷ್ಯಕ್ಕೆ ಬಂದಿಲ್ಲ.

೪ ಒಂದು ವೇಳೆ ಗಿರಣಿಯ ನೇಯಿಗೆಯನ್ನು ಕಾಯಿದೆಯಿಂದ ನಿಲ್ಲಿಸದಿದ್ದರೆ ಜನರು ತಮ್ಮ ಪ್ರಯತ್ನದಿಂದಲೇ ಅದನ್ನು ಬಹಿಷ್ಕರಿಸಬೇಕಾಗುವುದು; ಮತ್ತು ನೇಕಾರರು ಗಿರಣಿಗಳ ಯಜಮಾನರ ದಯೆಯಿಂದಲೆ ಉಪಜೀವಿಸಬೇಕಾಗುವುದು. 'ಏಕೆಂದರೆ, ಗಿರಣಿಗಳು ಕೈ-ನೇಯಿಗೆಯೊಡನೆ ಮೇಲಾಟಮಾಡುತ್ತಿವೆ. . . (ಮತ್ತು) ನೇಯಿಗೆ ಕಾರ್ಯವನ್ನು ದಿನದಿನಕ್ಕೂ ಗಿರಣಿಗಳೆ ಹೆಚ್ಚೆಚ್ಚಾಗಿ ಮಾಡುತ್ತ ಸಾಗಿವೆ. . ಈ ಮೇಲಾಟವು ಹೆಚ್ಚು ವಿಷಮವೂ ಘಾತಕವೂ ಆಗುತ್ತ ಹೋಗುವುದು.'

೫ ಇದಕ್ಕೆ ವಿಪರೀತವಾಗಿ 'ಕೈಮಗ್ಗ ಮತ್ತು ರಾಟಿ ಇವೆರಡೂ ಅವಳಿಜವಳಿ ಸಹೋದರ–ಸಹೋದರಿಯರಂತಿವೆ. ಇವುಗಳಲ್ಲಿ ಒಂದು ಇನ್ನೊಂದನ್ನು ಬಿಟ್ಟು ಬದುಕಿರಲಾರದು.'

೬ 'ಪ್ರತಿಯೊಂದು ಮನೆಯಲ್ಲಿ ಒಂದು ರಾಟಿಯು ಇರತಕ್ಕದ್ದು; ಮತ್ತು ಪ್ರತಿಯೊಂದು ಚಿಕ್ಕ ವಸತಿಯ ಗ್ರಾಮದಲ್ಲಿ ಒಂದು ಕೈಮಗ್ಗವಿರತಕ್ಕದ್ದು. ಇವು ಭಾವೀ ಯುಗದ ಘಟನೆಯ ಮಂತ್ರಗಳು.'

* 'ಹಿಂದುಸ್ತಾನಕ್ಕೆ ಪ್ರತಿವರ್ಷ ೪೬೬ ಕೋಟಿ ಗಜ ಬಟ್ಟೆಯು ಬೇಕಾಗುತ್ತದೆ. (ಇಷ್ಟೆಲ್ಲವನ್ನೂ ಕೈಮಗ್ಗದ ಮೇಲೆಯೆ ನೇಯಿಸಿದರೂ) ಪರಮಾವಧಿಯೆಂದರೆ ದಿನವೂ ಎರಡು ಗಂಟೆ ಕೆಲಸಮಾಡುವ ೯೦ ಲಕ್ಷ ನೇಕಾರರನ್ನು ನಾವು ಕಾರ್ಯದಲ್ಲಿ ತೊಡಗಿಸಬಹುದು. ಇಷ್ಟು ನೇಕಾರರನ್ನು ಕೆಲಸದಲ್ಲಿ ತೊಡಗಿಸುವುದಕ್ಕಿಂತ ಇಷ್ಟು ಕುಟುಂಬಗಳನ್ನು ತೊಡಗಿಸುವುದು ಒಳಿತೆಂದು ಒಪ್ಪಿದರೆ ದಿನದ ಎರಡಾಣೆಗಳು ಅಷ್ಟು ಜನರಲ್ಲಿ ಹಂಚಿಹೋಗುವವು. ಇದರಿಂದ ಪ್ರತಿಯೊಬ್ಬನ ಗಳಿಕೆಯು ಪ್ರಮಾಣತಃ ನೋಡಿದರೆ ಕಡಿಮೆಯಾಗುವದು.' [ಈ ಪ್ರಕರಣದಲ್ಲಿಯ ಸೂತ್ರಗಳು ೧೪-೧೧-೧೯೨೬ ನೇ ದಿನಾಂಕದ "ನವಜೀವನ"ದ ಆಧಾರದಿಂದಲೆ ಬರೆಯಲ್ಪಟ್ಟಿವೆ. ಶ್ರೀ. ಗ್ರೇಗರ ಪುಸ್ತಕದಲ್ಲಿ ಈ ಲೇಖವು ಸಂಪೂರ್ಣವಾಗಿ ಕೊಡಲ್ಪಟ್ಟಿದೆ — ಕಿ. ಘ. ಮ.]

## ೫ ಖಾದೀ ಉತ್ಪತ್ತಿಯ ಕ್ರಿಯೆಗಳು

೧ ಹಿಂಜುವುದು ಮೊದಲುಗೊಂಡು ನೇಯಿಗೆಯ ವರೆಗಿನ ಖಾದೀ ಹುಟ್ಟುವಳಿಯ ಎಲ್ಲ ಕಾರ್ಯಗಳು ಮನೆಯಲ್ಲಿಯೆ ನಡೆಯತಕ್ಕದ್ದು. ಇವು ಗಳಲ್ಲಿ ಯಾವ ಒಂದು ಕ್ರಿಯೆಯು ಕಾರಖಾನೆಯನ್ನು ಅವಲಂಬಿಸಿದರೂ ಅದು ಒಂದಿಲ್ಲೊಂದು ದಿನ ಖಾದಿಯ ಉದ್ದೇಶವನ್ನು ಸಂಕಟಕ್ಕೀಡು ಮಾಡುವುದು.

೨ ಆದ್ದರಿಂದ ನೂಲುವ ರಾಟೆಯ ಜೊತೆಯಲ್ಲಿ ಹತ್ತಿಯನ್ನು ಅರೆಯುವ ರಾಟೆ ಮತ್ತು ಹಿಂಜುವ ಬಿಲ್ಲು ಇರತಕ್ಕವೇ ಎಂದು ತಿಳಿಯತಕ್ಕದ್ದು.

೩ ಹತ್ತಿಯನ್ನು ಅರೆಯುವ ರಾಟೆ, ಹಿಂಜುವ ಬಿಲ್ಲು ಮತ್ತು ನೂಲುವ ರಾಟೆಯಲ್ಲಿ ಸುಧಾರಣೆಮಾಡಬೇಕಾಗಿದ್ದಲ್ಲಿ ಅವು ಗೃಹೋದ್ಯೋಗ ಗಳಾಗಿ ಉಳಿಯುವಂತೆಯೆ ಮಾಡತಕ್ಕದ್ದು.

೪ ಖಾದಿಯನ್ನು ಸುಧಾರಿಸಬೇಕಾದರೆ ಹತ್ತಿಯ ಸಂಗ್ರಹದಿಂದ ಮೊದಲುಗೊಂಡು ನೇಯಿಗೆಯವರೆಗಿನ ಎಲ್ಲ ಕ್ರಿಯೆಗಳ ಮತ್ತು ಯಂತ್ರಗಳ ಅಭ್ಯಾಸವನ್ನು ಸೂಕ್ಷ್ಮವಾಗಿ ಮಾಡತಕ್ಕದ್ದು. ಆ ಮೇಲೆ ಅವುಗಳ ಸುಧಾರಣೆಗೆ ಕೈಹಾಕುವುದು ಒಳಿತು.

೫ ಹತ್ತಿಯ ಹೊಲವಿದ್ದವರು ತಮ್ಮ ಬಳಿಕೆಗಾಗಿ ತಮ್ಮ ಹೊಲದ ಹತ್ತಿಯನ್ನೆ ಸಂಗ್ರಹಿಸುವುದು ಮೊದಲನೆ ಕೆಲಸ. ಒಕ್ಕಲಿಗನು ಹೀಗೆ ಮಾಡುವುದರಿಂದ ಒಳ್ಳೆಯ ಹತ್ತಿಕಾಳುಗಳನ್ನು ದೊರಕಿಸಿಕೊಳ್ಳಬಹುದು. ಮತ್ತು ಕಸುರು ಬರದಂತೆ ಹತ್ತಿಯನ್ನು ಬಿಡಿಸಿಕೊಳ್ಳಬಹುದು. ಈ ಕೆಲಸವನ್ನು ಒಕ್ಕಲಿಗನು ತಾನೇ ಮಾಡುತ್ತ ಹೋಗಬಹುದು. ಆದರೆ ಅವನಿಗೆ ಅದರ ಮಹತ್ವವನ್ನು ತಿಳಿಸಿ ಸರಿಯಾದ ಮಾರ್ಗವನ್ನು ತೋರಿಸಿ ಆಗಾಗ ಸಲಹೆಗಳನ್ನು ಕೊಡುವುದು ಅಗತ್ಯವಿರುವುದು.

೬ ರಾಟೆಯಿಂದ ಹತ್ತಿಯನ್ನು ಅರೆದರೆ ಹತ್ತಿಯ ಕಾಳುಗಳಿಗೆ ಪೆಟ್ಟು ತಗಲುವುದಿಲ್ಲ, ಹತ್ತಿಯ ಎಳೆಯ ಕಸುವೂ ಕಡಿಮೆಯಾಗುವುದಿಲ್ಲ. ಆಗಿಂದಾಗ ಕಾಳು ತೆಗೆದ ಹತ್ತಿಯು ನೂಲಲು ಬಹಳ ಒಳ್ಳೆಯದು. ಆ ಹತ್ತಿಯಿಂದ ನೂಲಲು ಶ್ರಮವಾಗುವುದಿಲ್ಲ.

೭ ಉತ್ತಮ ನೂಲು ಹೊರಡಬೇಕಾದರೆ ಉತ್ತಮ ಹಂಜಿ ಬೇಕು. ಸರಿಯಾಗಿ ನೂಲಲು ಬರುವವರಿಗೆ ಒಳ್ಳೆಯ ಮತ್ತು ಕೆಡುಕು ಹಂಜಿಯೊಳಗಿನ ಭೇದವು ಗೊತ್ತಾಗುವುದು. ಹಿಂಜುವುದನ್ನರಿತವರಿಗೆ ಅದರಲ್ಲಿನ ಕ್ರಿಯೆಯ ಭೇದಗಳು ತಿಳಿಯುವುವು. ಆದ್ದರಿಂದ ಹಿಂಜಲು ಸರಿಯಾಗಿ ಬರುವವರು ಎರಡನೆಯವರು ಹಿಂಜಿ ಮಾಡಿದ ಹಂಜಿಯನ್ನು ಉಪಯೋಗಿಸಲು ಹಿಂಜರಿಯುವರು.

೮ ಕೆಟ್ಟ ಹಂಜಿಯು ನೂಲಿನ ನಂಬರನ್ನು ಕಡಿಮೆ ಮಾಡುವುದು. ಕೆಟ್ಟ ಹಂಜಿಯ ಎಳೆಗಳು ಆಗಾಗ ಹರಿಯುವವು. ಇದರಿಂದ ಬಹಳ ಆರ್ಥಿಕ ಹಾನಿಯಾಗುವುದು.

೯ ಯಾವ ಹತ್ತಿಯಿಂದ ಎಷ್ಟು ಜಿನುಗು ಮತ್ತು ಎಷ್ಟು ದಪ್ಪ ನೂಲು ಹೊರಡಬಹುದೊ ಅದಕ್ಕಿಂತ ಹೆಚ್ಚು ದಪ್ಪ ಅಥವಾ ಹೆಚ್ಚು ಜಿನುಗು ನೂಲುವುದು ಹಾನಿಕರ. ಸಾಮಾನ್ಯವಾಗಿ ಸರ್ವರ ಒಲವೂ ದಪ್ಪ ನೂಲುವುದರ ಕಡೆಗೇ ಇರುವುದು. ಇದನ್ನು ತಡೆಯತಕ್ಕದ್ದು. ಹತ್ತಿಯಿಂದ ಹೊರಡಲು ಸಾಧ್ಯವಿದ್ದಷ್ಟು ಜಿನುಗು ನೂಲನ್ನು ತೆಗೆಸುವುದರ ಕಡೆಗೇ ಖಾದೀ ಉತ್ಪಾದಕರು ಲಕ್ಷ್ಯಕೊಡತಕ್ಕದ್ದು.

೧೦ ನೂಲಿನ ಹುರಿಕಟ್ಟು ಮತ್ತು ಸಮಾನತೆಯ ಕಡೆಗೆ ಕೂಡ ಗಮನಕೊಡತಕ್ಕದ್ದು.

೧೧ ಜಿನುಗು ನೂಲೆಂದರೆ ಸ್ವಲ್ಪ ಹತ್ತಿಯಲ್ಲಿ ಹೆಚ್ಚು ಬಟ್ಟೆ, ಹುರಿಕಟ್ಟಿನ ನೂಲೆಂದರೆ ಬಹು ದಿನ ಬಾಳುವ ಬಟ್ಟೆ, ಸಮವಾದ ನೂಲೆಂದರೆ ನಯವಾದ ಮತ್ತು ಸುಂದರವಾದ ಬಟ್ಟೆ. ಹುರಿಕಟ್ಟಿನ ಮತ್ತು ಸಮವಾದ ನೂಲಿದ್ದರೆ ನೇಕಾರನು ಕಡಿಮೆ ಕೂಲಿಯಿಂದ ನೇಯಲು ಒಪ್ಪುವನು. ಆದುದರಿಂದ ಇವೆಲ್ಲವೂ ಖಾದಿಯನ್ನು ಅಗ್ಗಗೊಳಿಸುವ ಮಹತ್ವದ ಅಂಗಗಳೆಂಬುದು ಸ್ಪಷ್ಟವು.

೧೨ ಖಾದೀ ಸೇವಕನಿಗೆ ಖಾದೀ ಉತ್ಪತ್ತಿಯ ಸರ್ವ ಕ್ರಿಯೆಗಳ ಅನುಭವಜನ್ಯ ಜ್ಞಾನವಿರತಕ್ಕದ್ದು. ಖಾದಿಯ ಹುಟ್ಟುವಳಿಗಾಗಿ ಉಪಯೋಗಿಸಲ್ಪಡುವ ಎಲ್ಲ ಯಂತ್ರಗಳ ಗುಣದೋಷಗಳ ಹಾಗೂ ಅವನ್ನು ಸರಿಪಡಿಸುವ ಜ್ಞಾನವೂ ಇರತಕ್ಕದ್ದು. ಅವನಲ್ಲಿ ಹಳ್ಳಿಯ ಒಕ್ಕಲಿಗರಿಗಷ್ಟೆ ಅಲ್ಲ, ಬಡಿಗ ಕಮ್ಮಾರ ಮುಂತಾದ ಕೆಲಸಗಾರರಿಗೂ ಇದನ್ನು ಕಲಿಸುವಷ್ಟು ನೈಪುಣ್ಯವು ಇರತಕ್ಕದ್ದಲ್ಲದೆ ಎಲ್ಲವನ್ನೂ ತೂಗಿಸಿಕೊಂಡು

ಹೋಗುವ ಶಕ್ತಿಯೂ ಇರತಕ್ಕದ್ದು—ಅರ್ಥಾತ್ ಅವನೊಬ್ಬ ಕುಶಲ ಶಿಲ್ಪಿಯಾಗಿರಬೇಕು. ಖಾದಿಯ ಅರ್ಥಶಾಸ್ತ್ರವನ್ನು ಬಲ್ಲವನೂ ಇರಬೇಕು.

## ೬ ಸ್ವಾವಲಂಬಿ ಮತ್ತು ಕೂಲಿ ಖಾದಿ

೧ ಒಕ್ಕಲಿಗನು ತನ್ನ ಹೊಲದ ಹತ್ತಿಯನ್ನೆ ತಂದು ಕಾಳು ತೆಗೆದು ಹಿಂಜಿ ನೂಲಬೇಕು ಮತ್ತು ಕೂಲಿ ಕೊಟ್ಟು ನೇಕಾರನಿಂದ ನೇಯಿಸಿಕೊಳ್ಳಬೇಕು. ಹೀಗೆ ಮಾಡಿದರೆ ಅವನಿಗೆ ಗಿರಣಿಯ ಬಟ್ಟೆಗಿಂತಲೂ ಖಾದಿಯು ಅಗ್ಗವಾಗುವುದು. ಇಂತಹ ಖಾದಿಯೆ ಸ್ವಾಪಲಂಬಿ ಖಾದಿಯೆನಿಸುವುದು.

೨ ಒಕ್ಕಲಿಗನು ವಾಹನದ ಖರ್ಚುಬಿದ್ದು ಬಂದ ಹತ್ತಿಯನ್ನು ಕೊಂಡು ತಾನೇ ಸ್ವತಃ ಹಿಂಜಿ, ನೂತು ಬಟ್ಟೆನೇಯಿಸಿಕೊಂಡರೆ ಅದೂ ಅವನಿಗೆ ಗಿರಣಿಯ ಬಟ್ಟೆಗಿಂತ ಅಗ್ಗವಾಗುವುದು—ಎಂದರೆ ಗಿರಣಿಯ ಬಟ್ಟೆಗಿಂತಲೂ ತೀರ ಕಡಿಮೆ ತುಟ್ಟಿಯಾಗುವುದು. ಈ ತುಟ್ಟಿತನ ಕೂಡ ನೂಲು ಹುರಿಕಟ್ಟು ಇದ್ದರೆ ಮತ್ತು ನೂಲಿನ ನಂಬರಿನಲ್ಲಿ ಸುಧಾರಣೆಯಾದರೆ ಇಲ್ಲದಂತಾಗುವುದು.

೩ ಕೂಲಿಯಿಂದ ಮಾಡಿಸಿದ ಖಾದಿಯ ಪ್ರಕಾರಗಳಲ್ಲಿಯೂ ಅಗ್ಗತನದ ವಿಷಯದಲ್ಲೂ ಇಂದಿನವರೆಗಾದ ಪ್ರಗತಿಯು ಅದರ ಭಾವೀ ಉನ್ನತಿಯನ್ನೂ ಚರಖಾಪ್ರವೃತ್ತಿಯು ಸರಿಯಾದ ಮಾರ್ಗ ಹಿಡಿದಿರುವುದನ್ನೂ ಸೂಚಿಸುತ್ತದೆಂದು ನಿರಾತಂಕವಾಗಿ ಹೇಳಬಹುದು.

೪ ಕೂಲಿಯ ಖಾದಿಯನ್ನು ಅಗ್ಗಮಾಡುವುದಕ್ಕಾಗಿ ಪಟ್ಟ ಪರಿಶ್ರಮವು ಯೋಗ್ಯ ಮಾರ್ಗಗಳಿಂದ ನಡೆಯಲಿಲ್ಲವೆಂದು ಸ್ಪಷ್ಟವಾಗಿ ಕಂಡುಬಂದಿದೆ. ಯಾವ ಬಡವರ ಕಲ್ಯಾಣಕ್ಕಾಗಿ ಈ ಕಾರ್ಯವು ಮೊದಲಾಯಿತೊ ಅದರಿಂದ ಅವರಿಗೆ ಹೊಟ್ಟೆಯ ಮಟ್ಟಿಗಾದರೂ ಪ್ರತಿಫಲವು ದೊರೆಯುತ್ತದೋ ಇಲ್ಲವೊ ಎನ್ನುವುದರ ಕಡೆಗೆ ಸಂಪೂರ್ಣ ಗಮನ ಕೊಡಲ್ಪಡಲಿಲ್ಲ.

೫ ಖಾದಿ ಇಲ್ಲವೆ ಉಳಿದ ಉದ್ಯೋಗಗಳ ಉದ್ಧಾರಕ್ಕಾಗಿ ದುಡಿಯುವ ಸೇವಕರ ಮತ್ತು ಸಂಘಗಳ ಧರ್ಮವು ಕೇವಲ ಉದ್ಯೋಗಗಳನ್ನು ಅಂತೂ ಇಂತೂ ನಡೆಸಿಕೊಂಡು ಹೋಗುವುದಷ್ಟೆ ಅಲ್ಲ. ಆ ಉದ್ಯೋಗಗಳಲ್ಲಿ ತೊಡಗಿದವರಿಗೆ ಹೊಟ್ಟೆಯ ಮಟ್ಟಿಗಾದರೂ ಪ್ರತಿಫಲವು ಸಿಕ್ಕುವುದೊ ಇಲ್ಲವೊ ಎಂಬುದನ್ನೂ ಕೂಲಂಕಷವಾಗಿ ನೋಡುವುದೂ ಅವರ ಧರ್ಮವು. ಒಂದು ವೇಳೆ ದುಡಿಯುವವರಿಗೆ ಅಷ್ಟಾದರೂ ಪ್ರತಿಫಲವು ದೊರೆಯದಿದ್ದರೆ

ಆ ಉದ್ಯೋಗಗಳನ್ನು ನಡೆಸುವುದೆಂದರೆ ಬಡವರ ಪರಿಶ್ರಮದ ಅಯೋಗ್ಯ ಲಾಭ ತೆಗೆದುಕೊಂಡಂತೆ ಆಗುವುದೆಂದು ಹೇಳಬೇಕಾಗುವುದು.

೬ ಪರಿಶ್ರಮ ಮಾಡುವವರಿಗೆ ಹೊಟ್ಟೆಗೆ ಸಾಕಾಗುವಷ್ಟು ಪ್ರತಿಫಲವು ಮುಟ್ಟಿದ್ದನ್ನು ಮಾತ್ರ ನೋಡಿ ಖಾದೀ ಕೆಲಸಗಾರರು ಸಂತೋಷಪಡ ಕೂಡದು. ಅವರು ಪ್ರತಿಯೊಬ್ಬ ಕೂಲಿಕಾರನ ಜೀವನದಲ್ಲಿ ಪ್ರವೇಶಿಸ ಬೇಕು ಮತ್ತು ಅವನು ತನ್ನ ಉದ್ಯೋಗದಲ್ಲಿ ಕುಶಲ ಶಿಲ್ಪಿಯಾಗುವಂತೆ, ತನ್ನ ಗಳಿಕೆಯನ್ನು ಯೋಗ್ಯ ರೀತಿಯಿಂದ ವೆಚ್ಚಮಾಡುವಂತೆ ನೋಡಿ ಕೊಳ್ಳತಕ್ಕದ್ದು.

೭ ಖಾದಿಯ ವಿಷಯವಾಗಿ ಸೂಚಿಸಲ್ಪಟ್ಟ ಈ ಕೆಳಗಿನ ನಿಯಮಗಳು ಎಲ್ಲ ಗ್ರಾಮೋದ್ಯೋಗಗಳಿಗೂ ಅನ್ವಯಿಸಬಲ್ಲವು.

(೧) ಪ್ರತಿಯೊಬ್ಬ ಕಾರ್ಯಕರ್ತನು ಹತ್ತಿಯನ್ನು ಬಿಡಿಸುವುದನ್ನು ಮೊದಲುಗೊಂಡು ನೇಯಿಗೆಯ ವರೆಗಿನ ಎಲ್ಲ ಕೆಲಸಗಳನ್ನೂ ಸರಿಯಾಗಿ ಅರಿತವನಿರಬೇಕು. ಎಂದರೆ ಮಾತ್ರ ಅವನು ಅನ್ಯರಿಗೆ ಕಲಿಸಬಲ್ಲನು.

(೨) ವ್ಯವಸ್ಥಾಪಕರು ತಮ್ಮ ತಮ್ಮ ಕ್ಷೇತ್ರದಲ್ಲಿ ಕೆಲಸ ಮಾಡುವ ಪಿಂಜಾರರು, ನೂಲುವವರು, ನೇಯುವವರು ಮುಂತಾದವರ ಪಟ್ಟಿಯನ್ನು ಇಡತಕ್ಕದ್ದು.

(೩) ನೂಲುವವನು ಯಾವ ಜಾತಿಯ ಹತ್ತಿಯನ್ನು ಉಪಯೋಗಿಸು ವನೆಂಬುದನ್ನು ತಿಳಿದುಕೊಂಡು ಆ ಹತ್ತಿಯಿಂದ ಎಷ್ಟು ನಂಬರಿನ ನೂಲು ಹೊರಡಬಲ್ಲದೊ ಅದಕ್ಕಿಂತಲೂ ಹೆಚ್ಚು ನಂಬರಿನ ನೂಲನ್ನು ಅವನು ತೆಗೆಯದಂತೆ ಎಚ್ಚರಪಡತಕ್ಕದ್ದು.

(೪) ನೂಲುವವರೂ ಖಾದಿಯ ಹುಟ್ಟುವಳಿಗೆ ನೆರವಾಗುವಂಥ ಶಿಲ್ಪಿ ಗಳೂ ತಮ್ಮತಮ್ಮ ಮನೆಯಲ್ಲಿ ಖಾದಿಯನ್ನು ಉಪಯೋಗಿಸದಿದ್ದರೆ ಅವರಿಗೆ ಕೆಲಸವು ಸಿಕ್ಕಲಾರದೆಂದು ಸ್ಪಷ್ಟವಾಗಿ ಹೇಳಿಬಿಡತಕ್ಕದ್ದು.

(೫) ಈ ಎಚ್ಚರಿಕೆಯ ಜೊತೆಯಲ್ಲಿಯೆ, ಅವರಿಗೆ ಖಾದಿಯು ಅವರ ಕೂಲಿಯ ಬದಲಾಗಿಯೇ ದೊರೆಯುವಂತೆ ಕೂಡ ಅನುಕೂಲತೆಯನ್ನು ಮಾಡಿಕೊಡತಕ್ಕದ್ದು.

(೬) ಖಾದೀ ಕಾರ್ಯಾಲಯಕ್ಕೆ ಬರುವ ನೂಲಿನ ಪ್ರತಿಯೊಂದು ಪಟ್ಟಿಯ ಗಟ್ಟಿತನ ಮತ್ತು ಸಮಾನತೆಯನ್ನು ಪರೀಕ್ಷಿಸತಕ್ಕದ್ದು.

ಸರಿಯಾಗಿ ಬೇಯದಿದ್ದ ರೊಟ್ಟಿಯು ತಿನ್ನಲು ಹೇಗೆ ಅಯೋಗ್ಯವೊ ಹಾಗೆಯೆ ಗಟ್ಟಿಯಿಲ್ಲದ ಮತ್ತು ಸಮಾನವಿಲ್ಲದ ನೂಲು ಸ್ವೀಕರಿಸಲು ಅಯೋಗ್ಯವು.

(೭) ಸಾಮಾನ್ಯತಃ ಪ್ರತಿಯೊಬ್ಬನ ನೂಲನ್ನು ಪ್ರತ್ಯೇಕವಾಗಿ ಇಡ ತಕ್ಕದ್ದು. ಅದು ಒಂದು ಬಟ್ಟೆಗೆ ಸಾಕಾಗುವಷ್ಟು ಸೇರಿತೆಂದರೆ ಅವನ್ನು ಪ್ರತ್ಯೇಕವಾಗಿಯೇ ನೇಯಿಸತಕ್ಕದ್ದು. ಇದರಿಂದ ಖಾದಿಯು ತಾಳಿಕೆಯುಳ್ಳದ್ದಾಗುವುದು ಮತ್ತು ಅದರ ನೇಯಿಗೆಯೂ ಸೌಂದರ್ಯವೂ ಸುಧಾರಿಸುವುದು.

(೮) ಹೀಗೆ ಸಿದ್ಧವಾದ ಪ್ರತಿಯೊಂದು ಥಾನಿನ ಮೇಲೆ ಹತ್ತಿಕಾಳು ತೆಗೆಯುವವನ, ಹಿಂಜುವವನ, ನೂಲುವವನ, ಮತ್ತು ನೇಯುವವನ ಹೆಸರಿನ ಚೀಟಿಯೊಂದನ್ನು ಅಂಟಿಸತಕ್ಕದ್ದು.

(೯) ಶಿಲ್ಪಿಗಳಿಗೆ ಪರಿವಾರವಿದ್ದಲ್ಲಿ ಖಾದೀ ಹುಟ್ಟುವಳಿಯ ಸರ್ವ ಕಾರ್ಯ ಗಳನ್ನೂ ತಮ್ಮ ಪರಿವಾರಗಳಲ್ಲಿಯೆ ಮಾಡಿಕೊಳ್ಳಲು ಅವರಿಗೆ ತಿಳಿಸ ತಕ್ಕದ್ದು ಮತ್ತು ಉತ್ತೇಜನ ಕೊಡತಕ್ಕದ್ದು. ಕೂಲಿಯನ್ನು ಸಮಾನ ಮಾಡಿಬಿಟ್ಟರೆ ಎಲ್ಲವೂ ಸರಳವಾಗುವುದು.

(೧೦) ಶಿಲ್ಪಿಗಳ ಜೀವನಕ್ಕೆ ತಗಲುವ ವೆಚ್ಚವೆಷ್ಟು, ಅವರ ಆದಾಯ ವೆಷ್ಟು ಎಂಬುದನ್ನು ತಿಳಿದುಕೊಂಡು, ಅದರ ಅಭ್ಯಾಸಮಾಡಬೇಕು. ತನ್ನ ಆದಾಯದ ಸದ್ವಿನಿಯೋಗವನ್ನು ಸದಸದ್ವಿವೇಕದಿಂದ ಮಾಡುತ್ತಿರು ವವನಿಗೆ ಸಹಾಯ ಮಾಡಬೇಕು.

(೧೧) ಯಾವುದಾದರೂ ಸಂದರ್ಭದಲ್ಲಿ ಗ್ರಾಹಕರ ಸಂಖ್ಯೆಯು ಕಡಿಮೆಯಾಗಿ ಸಂಘದ ಕೈಕೆಳಗೆ ಕೆಲಸ ಮಾಡುವ ಶಿಲ್ಪಿಗಳನ್ನು ಕಡಿಮೆ ಮಾಡಬೇಕಾದ ಸಮಯವು ಬಂದರೆ, ಅನ್ಯ ಉದ್ಯೋಗಗಳಿಂದ ಹೊಟ್ಟೆ ತುಂಬಿಕೊಳ್ಳಬಲ್ಲ ಶಿಲ್ಪಿಗೆ ಮೊದಲು ಬಿಡುವು ಕೊಡತಕ್ಕದ್ದು. ಕೆಲವು ಪ್ರಾಂತಗಳಲ್ಲಿ ಉಪಜೀವನದ ಅವಶ್ಯಕತೆ ಇದ್ದವರಷ್ಟೇ ನೂಲುವ, ಮತ್ತು ಉಳಿದವರು ನೂಲದಿರುವ ಪರಿಸ್ಥಿತಿಯೇನೂ ಸದ್ಯಕ್ಕೆ ಇಲ್ಲ. ಅಂತೂ ಇಂತೂ ಎರಡು ಕಾಸು ಸಂಗ್ರಹಿಸಿ ಸಣ್ಣಪುಟ್ಟ ಪದಾರ್ಥಗಳನ್ನು ಕೊಳ್ಳ ಬೇಕೆಂಬ ಸ್ತ್ರೀಯರು ಕೂಡ ನೂಲುತ್ತಾರೆಂದು ನನ್ನ ಗ್ರಹಿಕೆ. ಇಂಥವರು ಇದರಿಂದಲೆ ಒಳ್ಳೆಯ ಆಹಾರವನ್ನು ದೊರಕಿಸಬೇಕು ಅಥವಾ ತಮ್ಮ ಸಾಲವನ್ನು ಸಲ್ಲಿಸಬೇಕು ಎಂಬ ವಿಚಾರವನ್ನೆ ಮಾಡುವುದಿಲ್ಲ.

(೧೨) ಪ್ರತಿಯೊಂದು ಕಡೆಯಲ್ಲಿ ಕಾರ್ಯಕರ್ತರು ಹಂಜಿಯನ್ನು ಮಾಡುವ ಸಾಧನಗಳನ್ನೂ ರಾಟಿಯನ್ನೂ ಕೂಲಂಕಷವಾಗಿ ಪರೀಕ್ಷಿಸ ತಕ್ಕದ್ದು. ವಿಶೇಷತಃ ಕದಿರು ತಕ್ಕಷ್ಟು ಸುತ್ತು ಚನ್ನಾಗಿ ತಿರುಗುತ್ತದೊ ಇಲ್ಲವೊ ಎಂಬುದನ್ನು ನೋಡತಕ್ಕದ್ದು. ಏಕೆಂದರೆ ಸರಿ ಇಲ್ಲದ ಕದಿರಿ ನಿಂದ ಸರಿಯಾಗಿ ನೂಲು ಬರದು. ಆದರೂ ಅವನಿಗೆ ಎಷ್ಟು ನೂತರೂ ಅಷ್ಟೇ ಕೊಡಬೇಕು, ಅಥವಾ ಬೇಕಾದವನು ಬೇಕಾದಷ್ಟು ನೂತರೂ ಅವನಿಗೆ ಹೆಚ್ಚು ದರವನ್ನು ಕೊಡಬೇಕು ಎಂದು ಯಾರೂ ತಿಳಿದುಕೊಳ್ಳ ಕೂಡದು. ನಿಶ್ಚಿತ ಸಮಯದಲ್ಲಿ ಯಾರು ಹೆಚ್ಚು ಗಜ ಮತ್ತು ಹೆಚ್ಚು ಸಮನಾದ ನೂಲನ್ನು ತೆಗೆಯುವರೊ ಅವರಿಗೆ ಹೆಚ್ಚು ಕೂಲಿಯು ದೊರೆಯ ತಕ್ಕದ್ದು ಯೋಗ್ಯವಾದುದು. ನೂಲುವವನು ತಾನು ನೂಲುವ ರೀತಿಯಲ್ಲಿ ಸುಧಾರಣೆ ಮಾಡಿಕೊಳ್ಳದಿದ್ದರೆ ಅವನಿಗೆ ಹೆಚ್ಚಿನ ಕೂಲಿ ದೊರೆಯುವ ಸಂಭವವಿಲ್ಲ.

(೧೩) ಮೇಲೆ ಹೇಳಿದ ಮಾತುಗಳಿಂದ ಸಿದ್ಧವಾಗುವುದೇನೆಂದರೆ ಚರಖಾ ಸಂಘವು ಹೊಸ ರಾಟಿ, ಹೊಸ ಕದಿರು ಮುಂತಾದ ಎಲ್ಲ ಸಾಧನ ಗಳನ್ನು ಮೊದಲಿಗೆ ಅಗ್ಗವಾಗಿ ಪೂರೈಸತಕ್ಕದ್ದು. ಎಷ್ಟೋ ಕಡೆಯಲ್ಲಿ ರಾಟಿಯ ಕದಿರು ಮುಂತಾದವುಗಳಲ್ಲಿ ಸುಧಾರಣೆ ಮಾಡಿದರೆ ಸಾಕು, ನೂಲು ತಾನಾಗಿಯೆ ಸುಧಾರಿಸುವುದು.

## ೭ ನೂಲುವುದು ಒಂದು ಯಜ್ಞಕಾರ್ಯ

೧ ತನ್ನ ಆರ್ಥಿಕ ಲಾಭದ ಕಡೆಗೆ ಗಮನಿಸದೆ ಬಡವರ ಉಪಯೋಗ ಕ್ಕಾಗಿ ನೂಲುವುದು ಯಜ್ಞಕಾರ್ಯವೆನಿಸುವುದು.

೨ ಬಡವರ ಮತ್ತು ದೇಶದ ಹಿತವನ್ನು ಬಯಸುವವರು ದಿನವೂ ನೂಲುವ ಯಜ್ಞಕಾರ್ಯವನ್ನು ಮಾಡತಕ್ಕದ್ದು.

೩ ಹೀಗೆ ಮಾಡುವುದರಿಂದ ಅಲ್ಪವಾದರೂ ಆರ್ಥಿಕ ಲಾಭವನ್ನು ಪಡೆಯಬೇಕೆನ್ನುವ ಬಡವರು ಕೂಡ ನೂಲತೊಡಗುವರು.

೪ ಇದರಿಂದ ಉತ್ಪಾದಕ ಶ್ರಮಪಡದೆ ನಾನಾ ವಸ್ತುಗಳನ್ನು ಉಪ ಭೋಗಿಸುವಂಥ ನಮಗೆ ಇಂಥ ಉತ್ಪಾದಕ ಶ್ರಮದ ಮಹಿಮೆಯು ತಿಳಿ ಯುವುದಲ್ಲದೆ ನಾವು ಅದಕ್ಕಾಗಿ ಸ್ವಲ್ಪವಾದರೂ ಶ್ರಮಪಡಲು ತೊಡಗು ವೆವು.

೫ ಹೀಗೆ ಶ್ರೀಮಂತರೂ ಬಡವರೂ ಒಂದೇ ತರದ ಶ್ರಮದಲ್ಲಿ ಸಮಾನ ಪಾಲುಗಾರರಾಗಿ ಒಬ್ಬರು ಇನ್ನೊಬ್ಬರೊಡನೆ ಬಳಿಕೆಯನ್ನಿಡಲು ಆರಂಭಿಸುವರು.

೬ ನಾವು ರಾಟೆಯನ್ನು ಬಿಟ್ಟುಕೊಟ್ಟು ಪರದೇಶೀ ವಸ್ತ್ರಗಳನ್ನು ಬಳಿಸುವ ಪಾಪವನ್ನು ಮಾಡಿದ್ದಕ್ಕಾಗಿ ನೂಲುವ ಯಜ್ಞಕಾರ್ಯವನ್ನು ಮಾಡುವುದೆ ಪ್ರಾಯಶ್ಚಿತ್ತವೆನಿಸುವುದು.

೭ ಆದ್ದರಿಂದ ನೂಲುವುದು ಇಂದು ಬರಿಯ ಸ್ತ್ರೀಯರ ಕರ್ತವ್ಯವಲ್ಲ, ಬಾಲಕರ ಮತ್ತು ಪುರುಷರ ಕರ್ತವ್ಯವೂ ಆಗಿದೆ.

೮ ತಮಗೆ ಬೇಕಾಗುವ ನೂಲನ್ನು ತಾವೆ ತೆಗೆಯುವವರು ತಮ್ಮ ಪೂರ್ತಿ ಹೊಣೆಯನ್ನು ಹೊತ್ತುಕೊಂಡು ಒಟ್ಟು ದೇಶಕ್ಕೆ ತಗಲುವ ಬಟ್ಟೆಯನ್ನು ಅಂಶತಃ ಹುಟ್ಟಿಸುವ ಕಾರ್ಯದಲ್ಲಿ ಸಹಾಯಮಾಡಿದಂತಾಗುವುದು ನಿಜ. ಆದರೆ ಇಂತಹ ನೂಲುವಿಕೆಯು ಯಜ್ಞಕಾರ್ಯವೆನಿಸುವುದಿಲ್ಲ.

೯ ಹೀಗೆ ನೂಲುವುದರಿಂದ ದೊರೆತ ಕೂಲಿಯ ದಾನವು ದೇಶಕ್ಕೆ ದೊಡ್ಡ ಪ್ರಮಾಣದಲ್ಲಿ ದೊರೆತರೆ ಅದರಿಂದ ಬಡವರ ಕೂಲಿಯೂ ಕಡಿಮೆಯಾಗುವುದಿಲ್ಲ, ಕೂಲಿಯ ಖಾದಿಯೂ ಅಗ್ಗವಾಗಬಲ್ಲದು.

ಯಜ್ಞಾರ್ಥ ನೂಲುವುದು:

ಕಾಂಗ್ರೆಸ್ಸಿನ ನಾಲ್ಕಾಣೆ ಸಭಾಸದರೆಲ್ಲರೂ ಯಜ್ಞಾರ್ಥವಾಗಿ ನೂತು ಕಾಂಗ್ರೆಸ್ ಸಂಸ್ಥೆಗೆ ವರ್ಷಕ್ಕೆ ೧೨೦೦೦ ಗಜ ನೂಲು ದಾನವಾಗಿ ಕೊಟ್ಟರೆ ಎಷ್ಟು ಲಾಭವಾಗುವುದು, ಹಾಗೂ ರಾಷ್ಟ್ರದ ಖಾದೀ ಉದ್ಯೋಗದ ಮೇಲೆ ಅದರ ಪರಿಣಾಮವೇನಾಗುವುದು ಎಂಬುದನ್ನು ಶ್ರೀ. ಕೃಷ್ಣದಾಸ ಗಾಂಧಿಯವರು ಕೆಳಗಿನಂತೆ ವಿವರಿಸಿದ್ದಾರೆ:

(೧) ಪ್ರಾಥಮಿಕ ಸಭಾಸದರ ಸಂಖ್ಯೆ: ೪೦೦೦೦೦

(೨) ಪ್ರತಿ ಸಭಾಸದನು ತಿಂಗಳಿಗೆ ಒಂದು ಸಾವಿರ ಗಜದಂತೆ ವರ್ಷಕ್ಕೆ ೧೨೦೦೦ ಗಜ ಕೊಟ್ಟರೆ ಅದರ ಸರಾಸರಿ ಬೆಲೆ ೪೦ ಲಕ್ಷ ರೂಪಾಯಿ.

(೩) ಆ ನೂಲಿನಿಂದ ಹುಟ್ಟಿದ ಖಾದೀ ಬಟ್ಟೆಯ ಬೆಲೆ ೪೮೦೦೦೦೦ ರೂಪಾಯಿ. ೧೯೩೯ರಲ್ಲಿ ಚರಖಾ ಸಂಘದ ಖಾದೀ ಮಾರಾಟ ೭೫ ಲಕ್ಷ ರೂಪಾಯಿ. ಇವೆರಡೂ ಕೂಡಿ ಒಟ್ಟು ಖಾದೀ ಮಾರಾಟ ೧೨೩೦೦೦೦೦

ರೂಪಾಯಿ. ಈ ಖಾದಿಯನ್ನು ನಿರ್ಮಿಸಲು ಚರಖಾ ಸಂಘಕ್ಕೆ ವೆಚ್ಚ ೮೩ ಲಕ್ಷ ರೂಪಾಯಿ. (೧೨೩ ಲಕ್ಷ—೪೦ ಲಕ್ಷ) ಅರ್ಥಾತ್ ಖಾದೀ ಹುಟ್ಟು ವಳಿಯಲ್ಲಿ ಹೆಚ್ಚಳ ನೂರಕ್ಕೆ ೬೪, ಅಥವಾ ಖಾದೀ ಮಾರಾಟದ ದರದಲ್ಲಿ ಕಡಿಮೆ ನೂರಕ್ಕೆ ೩೨·೫, ಅಥವಾ ದರ ಇಳಿಸದೆ ನೂಲುವವರಿಗೆ ಕೊಟ್ಟ ಹೆಚ್ಚು ಕೂಲಿ ಬಹುಶಃ ನೂರಕ್ಕೆ ೮೦ರಿಂದ ೧೦೦.

(೪) ಚರಖಾಸಂಘದ ನಿಯಮದಂತೆ ಸಭಾಸದನು ಹತ್ತಿಯ ಬೆಲೆ ಯನ್ನು (೫ ಆಣೆ) ಕಳೆದು ನೂಲನ್ನು ತಿರುಗಿ (೧೧ ಆಣೆಗೆ) ಕೊಳ್ಳ ಬಹುದು. ಹಾಗೆ ಎಲ್ಲರೂ ಮಾಡಿದ್ದಾದರೆ, ಚರಖಾ ಸಂಘಕ್ಕೆ ೨೭·೫ ಲಕ್ಷ ರೂಪಾಯಿ, ಆ ಮೂಲಕ ಚರಖಾಸಂಘದ ಖಾದಿಯ ಮೂಲ ಬೆಲೆ (೭೫— ೨೭·೫) ೪೭·೫ ಲಕ್ಷ ರೂಪಾಯಿ ಆಗುವುದು. ಈ ಮೂಲಕ ಚರಖಾ ಸಂಘವು ಮೇಲಿನ ಲೆಕ್ಕದಲ್ಲಿ ಹೇಳಿದ ನೂರಕ್ಕೆ ೩೨·೫ರ ಬದಲು ನೂರಕ್ಕೆ ೩೭ರಂತೆ ಬೆಲೆ ಕಡಿಮೆ ಮಾಡಬಹುದು. ವರ್ಗಣಿ ಎಂದು ಕೊಟ್ಟ ನೂಲು ೪೦ ಲಕ್ಷ ರೂಪಾಯಿಯದು ಇದ್ದ ಪಕ್ಷದಲ್ಲಿ ಪ್ರತಿಯೊಬ್ಬ ಸಭಾಸದನು ನಿಜವಾಗಿ ಎಂಟೇ ಆಣೆ ಕೊಟ್ಟಂತಾಗುವುದು. ಉಳಿದದ್ದು ಅವನ ಶ್ರಮದ ಬೆಲೆ; ನಗದು ಹಣವಲ್ಲ. ಈ ಎಂಟಾಣೆ ಎಂದರೆ ಹತ್ತಿಯ ಬೆಲೆ ಮತ್ತು ಹಿಂಜುವ ಕೂಲಿ ಮಾತ್ರ. ಅವನು ಹಂಜಿಯನ್ನು ಸ್ವತಃ ಹಿಂಜಿ ಮಾಡು ತ್ತಿದ್ದರೆ ಅವನ ಬೊಕ್ಕಸದಿಂದ ಎಂಟಾಣೆ ಸಹ ಹೋಗುವುದಿಲ್ಲ. ನೂಲಿನ ನಂಬರು ಹೆಚ್ಚು ಇದ್ದ ಹಾಗೆಲ್ಲ ಹತ್ತಿ ಕಡಿಮೆ ಬೇಕಾಗುವುದು, ಹಾಗೂ ನೂಲುವ ಪರಿಶ್ರಮ ಹೆಚ್ಚು ಆಗುವುದು.

ಪೂರ್ವಗ್ರಹಗಳನ್ನು ಬಿಟ್ಟು ಯೋಚಿಸುವವರಿಗೆ ಈ ಮೇಲಿನ ಮಾತು ಗಳಲ್ಲಿ ಬೇಕಾದಷ್ಟು ಆಸ್ಪದವಿದೆ.

## ೮ ಖಾದೀ ಕಾರ್ಯ

೧ ಖಾದೀ ಹುಟ್ಟುವಳಿಯ ಮತ್ತು ಮಾರಾಟದ ಕಾರ್ಯದಲ್ಲಿ ಮಹತ್ವಾ ಕಾಂಕ್ಷಿಗಳಾದ ನೂರಾರು ತರುಣರು ತಮ್ಮ ಬುದ್ಧಿ, ವ್ಯವಸ್ಥಾಶಕ್ತಿ, ವ್ಯಾಪಾರಕೌಶಲ್ಯ ಮತ್ತು ಶಾಸ್ತ್ರೀಯ ಜ್ಞಾನವನ್ನು ತೋರಿಸಲು ತಕ್ಕಷ್ಟು ಅವಕಾಶವಿದೆ. ಇದೊಂದೇ ಕಾರ್ಯವನ್ನು ಚನ್ನಾಗಿ ನಡೆಸಿ ತೋರಿಸಿದರೆ ಪ್ರಜೆಗಳಲ್ಲಿ ಸ್ವರಾಜ್ಯವನ್ನು ನಡೆಸುವ ಶಕ್ತಿಯೂ ಇದೆಯೆಂದು ಸಿದ್ಧ ಮಾಡಿದಂತಾಗುವುದು.

೨ ಖಾದೀ ಸೂರ್ಯನ ಸುತ್ತುಮುತ್ತಲು ಹಳ್ಳಿಯ ಉದ್ಯೋಗಗಳು ಗ್ರಹ ಗಳಂತೆ ಹೊಳೆಯಲಾರಂಭಿಸಬಹುದು; ಈಗ ಬಲಾತ್ಕಾರದಿಂದ ನಿರುದ್ಯೋಗಿಗಳೂ ಸೋಮಾರಿಗಳೂ ಆದ ಪ್ರಜೆಗಳ ಮನೆಗಳು ಆ ಉದ್ಯೋಗ ಗಳಿಂದಲೂ ಅದರಿಂದ ದೊರೆಯುತಕ್ಕ ಉಪಜೀವನದಿಂದಲೂ ಶೋಭಿಸ ಲಾರಂಭಿಸುವವು.

೩. ಇಂದು ಈ ಕಾರ್ಯವು ಆತ್ಮಶುದ್ಧಿಯ ವಿಷಯದಲ್ಲಿ ಚನ್ನಾಗಿ ನೆರ ವಾಗುತ್ತಲಿರುವುದು. ಈ ಕಾರಣದಿಂದ ಕಾರ್ಯಕರ್ತರು ಹಳ್ಳಿಹಳ್ಳಿಗೆ ಸ್ವರಾಜ್ಯದ ಮತ್ತು ಅದರ ಸಿದ್ಧತೆಗಾಗಿ ಪ್ರಜೆಗಳನ್ನು ಅಣಿಮಾಡುವುದಕ್ಕೋಸ್ಕರ ಮಾಡತಕ್ಕ ನಾನಾ ಕಾರ್ಯಕ್ರಮಗಳ (ಅಹಿಂಸೆ, ಮದ್ಯಪಾನ ನಿಷೇಧ, ಅಸ್ಪೃಶ್ಯತಾ ನಿವಾರಣೆ, ಸ್ವಚ್ಛತೆ, ಜಾತೀಯ ಐಕ್ಯ ಮುಂತಾದವುಗಳ) ಸಂದೇಶವನ್ನು ಮುಟ್ಟಿಸುತ್ತಾರೆ.

೪ ಖಾದೀ ಶಾಸ್ತ್ರವನ್ನು ಕುರಿತು ಸರ್ವವಿಧದ ಜ್ಞಾನವನ್ನೂ ಮಾಡಿ ಕೊಡುವಂಥ ಮತ್ತು ಅದರಲ್ಲಿ ಶೋಧಗಳನ್ನು ಮಾಡುವಂಥ ಒಂದು ವಿಭಾಗವು ಇರುವುದು ಅಗತ್ಯ.

## ದಶಮ ಖಂಡ

# ಸ್ವಚ್ಛತೆಯೂ ಆರೋಗ್ಯವೂ

### ೧ ಶಾರೀರಿಕ ಸ್ವಚ್ಛತೆ

೧ ಹಿಂದುಸ್ತಾನದ ಎಷ್ಟೋ ಜಾತಿಗಳು ಶಾರೀರಿಕ ಸ್ವಚ್ಛತೆಯ ಕಡೆಗೆ ತಕ್ಕಷ್ಟು ಗಮನ ಕೊಟ್ಟಿರುವವು. ಆದರೆ ಇನ್ನೂ ಸಾಮಾನ್ಯ ಜನತೆಯಲ್ಲಿ ಈ ಬಗೆಗೆ ತಕ್ಕಷ್ಟು ಕೆಲಸ ಮಾಡಬೇಕಾಗಿದೆ.

೨ ಉಚ್ಚ ಜಾತಿಯ ಜನರು ತಮ್ಮ ಮಕ್ಕಳ ಸ್ವಚ್ಛತೆಯ ಕಡೆಗೆ ಮಾತ್ರ ತೀರ ಸ್ವಲ್ಪ ಲಕ್ಷ್ಯಕೊಟ್ಟಿರುವರು. ಮಕ್ಕಳು ತಾವೇ ಚೊಕ್ಕಟ ವಾಗಿರುವ ಶಕ್ತಿಯನ್ನು ಸಂಪಾದಿಸಿಕೊಳ್ಳುವ ಮೊದಲು ತಂದೆತಾಯಿಗಳು ತಮ್ಮ ಮಕ್ಕಳ ಸ್ವಚ್ಛತೆಯ ಕಡೆಗೆ ತಕ್ಕಷ್ಟು ಲಕ್ಷ್ಯಕೊಡುವಂತೆ ಕಂಡು ಬರುವುದಿಲ್ಲ.

೩ ಸ್ನಾನವು ತಮ್ಮ ಧರ್ಮದ ಒಂದು ಅಂಗವೆಂದು ಅನೇಕ ಹಿಂದೂ ಜನರು ಒಪ್ಪುತ್ತಾರೆ. ಆದರೆ ಎಲ್ಲ ಹಿಂದುಗಳು ಹಾಗೆ ಒಪ್ಪುತ್ತಾರೆಂದು ಹೇಳಲಾಗದು. ಹಿಂದುಸ್ತಾನದಲ್ಲಿ ಇತರ ಜಾತಿಗಳಲ್ಲಿ ದಿನಂಪ್ರತಿ ಸ್ನಾನ ಮಾಡುವ ಅಭ್ಯಾಸವಿಲ್ಲ. ಹಿಂದುಸ್ತಾನದ ಹವಾಮಾನದ ದೃಷ್ಟಿಯಿಂದ ಸ್ವಚ್ಛತೆ ಮತ್ತು ಆರೋಗ್ಯವನ್ನು ಕಾಯ್ದುಕೊಳ್ಳುವುದಕ್ಕಾಗಿ ದಿನವೂ ಸ್ನಾನ ಮಾಡುವುದು ಅಗತ್ಯವಾದದ್ದು.

೪ ಒಂದೆರಡು ತಂಬಿಗೆ ನೀರು ಸುರುವಿಕೊಂಡು ಮೈ ತೋಯಿಸಿ ಕೊಳ್ಳುವುದು ಸ್ನಾನವೆನಿಸುವುದಿಲ್ಲ. ಎಷ್ಟೋ ಜನರು ಹೀಗೆಯೇ ಸ್ನಾನ ಮಾಡುತ್ತಾರೆ. ಶರೀರದ ಮೇಲಿನ ಹೊಲಸನ್ನು ನೀರಿನಿಂದ ಚನ್ನಾಗಿ ತೊಳೆದು ಚರ್ಮಛಿದ್ರಗಳನ್ನು ತೆರೆಯುವುದೆ ಸ್ನಾನವೆನಿಸುವುದು. ಆದ್ದರಿಂದ ಸ್ನಾನದ ನೀರು ಕುಡಿಯುವ ನೀರಿನಷ್ಟೆ ಚೊಕ್ಕಟವಾಗಿರತಕ್ಕದ್ದು. ಹಸನಾದ ನೀರು ತಕ್ಕಷ್ಟು ದೊರೆಯದಿದ್ದರೆ ಹೊಲಸು ನೀರಿನಿಂದ ಮೀಯುವುದಕ್ಕಿಂತ ಒಳ್ಳೇ ನೀರಿನಲ್ಲಿ ಬಟ್ಟೆ ತೋಯಿಸಿ ಅದರಿಂದ ಮೈಯನ್ನು ಚನ್ನಾಗಿ ತಿಕ್ಕಿಕೊಳ್ಳುವುದು ಲೇಸು. ನಮ್ಮ ದೇಶದ ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ಸ್ನಾನದ ನೀರು ಸ್ನಾನಕ್ಕೆ ಯೋಗ್ಯವಾಗುವಷ್ಟು ಸ್ವಚ್ಛವಾಗಿರುವುದೆಂದು ಹೇಳಲಾಗುವುದಿಲ್ಲ.

೫ ಕಣ್ಣು, ಕಿವಿ, ಮೂಗು, ಹಲ್ಲು, ಉಗುರು, ಕಂಕುಳು ಮುಂತಾದ ಸಂದುಗಳಲ್ಲಿ ಆಗಾಗ ಉಂಟಾಗುತ್ತಿರುವ ಕೊಳೆಯನ್ನು ತೆಗೆದುಹಾಕುವುದರ ಕಡೆಗೆ ಬಹು ಜನರ ಲಕ್ಷ್ಯವು ಹೋಗುವುದಿಲ್ಲ. ವಿಶೇಷತಃ ಚಿಕ್ಕ ಮಕ್ಕಳ ಈ ಅಂಗಗಳ ಸ್ವಚ್ಛತೆಯ ಕಡೆಗೆ ಹಿರಿಯರು ಗಮನಕೊಡುವುದಿಲ್ಲ. ಮಕ್ಕಳ ಕಣ್ಣುಮೂಗಿನೊಳಗಿನ ಹೊಲಸನ್ನು ದಿನವೂ ನಿರ್ಮಲವಾದ ನೀರುಬಟ್ಟೆಯಿಂದ ಸ್ವಚ್ಛ ಮಾಡುವುದಿಲ್ಲ. ಆದ್ದರಿಂದಲೆ ಕಣ್ಣುಬೇನೆಯು ಬರುತ್ತದೆ. ಈ ಅಂಗಗಳನ್ನು ಸ್ವಚ್ಛವಾಗಿಡುವ ಅಭ್ಯಾಸವೂ ಹೊಲಸಿನ ಬಗೆಗೆ ತಿರಸ್ಕಾರವೂ ನಮ್ಮ ಜನಗಳಲ್ಲಿ ಇಲ್ಲವೆನ್ನುವುದು ಒಡೆದು ಕಾಣುತ್ತದೆ. ಆದ್ದರಿಂದ ಇದು ಗ್ರಾಮಸೇವಕರೂ ಶಿಕ್ಷಕರೂ ಹೆಚ್ಚು ಗಮನಕೊಡತಕ್ಕಂಥ ವಿಷಯವಾಗಿದೆ.

೬ ಬಟ್ಟೆಗಳ ಸ್ವಚ್ಛತೆಯೂ ಶಾರೀರಿಕ ಸ್ವಚ್ಛತೆಯ ಒಂದು ಅಂಗ. ಬಟ್ಟೆಗಳ ಅಸ್ವಚ್ಛತೆಗೆ ಬಡತನವು ಕಾರಣವಲ್ಲವೆನ್ನಬಹುದು. ಆಲಸ್ಯ

ದಿಂದಲೂ ಉತ್ತಮ ರೂಢಿಗಳ ಅಭಾವದಿಂದಲೂ ಬಟ್ಟೆಗಳಲ್ಲಿ ಕೊಳೆಯು ಸೇರಿಕೊಳ್ಳುತ್ತದೆ.

೭ ತೇಪೆ ಹಚ್ಚಿ ಹೊಲಿದ ಬಟ್ಟೆಗಳಿಂದ ಪ್ರಕಟವಾಗುವುದು ಮನುಷ್ಯನ ಬಡತನವಲ್ಲ. ಅದಕ್ಕೋಸುಗ ನಾಚಬೇಕಾಗಿಯೂ ಇಲ್ಲ. ಪಟುಭಟರಿಗೆ ಗಾಯಗಳು ಹೇಗೋ ಹಾಗೆ ಬಡವರಿಗೆ ತೇಪೆಗಳು ಭೂಷಣಗಳು. ಆದರೆ ಬಟ್ಟೆಗಳನ್ನು ಕೊಳಕಾಗಿಟ್ಟುಕೊಳ್ಳುವುದು, ಹರಿದಿದ್ದರೆ ಅವನ್ನು ಹೊಲಿಯದೆ ಇರುವುದು ಮನುಷ್ಯನ ಬಡತನವನ್ನೂ ಆಲಸ್ಯವನ್ನೂ ಬಯಲಿಗೆಳೆಯುವವು. ಇದು ನಾಚಿಕೆಪಡುವಂಥ ಮಾತು.

೮ ಸ್ವಚ್ಛ ಬಟ್ಟೆಗಳೆಂದರೆ ಹಾಲಿನಷ್ಟು ಬೆಳ್ಳಗಿರಬೇಕೆಂದು ತಿಳಿಯತಕ್ಕದ್ದಲ್ಲ. ಶಾರೀರಿಕ ಶ್ರಮದ ಮತ್ತು ಕೂಲಿಯ ಬಡಜನರು ತಮ್ಮ ಬಟ್ಟೆಗಳನ್ನು ಸುಣ್ಣದ ಹಾಗೆ ಬೆಳ್ಳಗೆ ಇಡಲಾರರು. ಆದರೆ ಅವರು ತಮ್ಮ ಬಟ್ಟೆಗಳನ್ನು ನಿರ್ಮಲವಾದ ನೀರಿನಲ್ಲಿ ತೊಳೆದುಕೊಳ್ಳುವುದು, ಆಗಾಗ ಸಬಕಾರ ಅಂಟುವಳಕಾಯಿ ಮುಂತಾದ ಪದಾರ್ಥಗಳಿಂದ ಸ್ವಚ್ಛ ಮಾಡಿಕೊಳ್ಳುವುದು, ಕುದಿಯುವ ನೀರಿನಲ್ಲಿ ಅದ್ದಿ ಒಗೆದುಕೊಂಡು ಜಂತುರಹಿತ ಮಾಡಿಕೊಳ್ಳುವುದು ಅಗತ್ಯವಾದದ್ದು.

೯ ತೊಟ್ಟ ಬಟ್ಟೆಯಿಂದಲೆ ಮೂಗು ಕೈ ಮುಂತಾದವುಗಳನ್ನು ಉಜ್ಜಿಕೊಳ್ಳುವುದೂ ರೊಟ್ಟಿ ಮೊದಲಾದ ಪದಾರ್ಥಗಳನ್ನು ಕಟ್ಟಿಕೊಂಡು ಒಯ್ಯುವುದೂ ಅತ್ಯಂತ ಹೇಸಿ ಚಟ. ತೊಟ್ಟ ಬಟ್ಟೆಯ ಹೊರತು ಬೇರೆ ಬಟ್ಟೆಯೆ ಇಲ್ಲದವರು ಹಳೆಯ ಬಟ್ಟೆಗಳಿಂದ ಕೈವಸ್ತ್ರಗಳನ್ನೂ ಅಂಗವಸ್ತ್ರಗಳನ್ನೂ ಮಾಡಿಕೊಂಡು ಅವನ್ನು ಮೇಲಿನ ಕಾರ್ಯಕ್ಕಾಗಿ ಉಪಯೋಗಿಸತಕ್ಕದ್ದು. ಇದಕ್ಕೆ ಹೆಚ್ಚು ಶ್ರಮವೂ ಬೇಕಾಗುವುದಿಲ್ಲ, ಹೆಚ್ಚು ವೆಚ್ಚವೂ ತಗಲುವುದಿಲ್ಲ; ಧರಿಸಿದ ಬಟ್ಟೆಗಳೂ ಸ್ವಚ್ಛವಾಗಿ ಉಳಿಯುವವು ಮತ್ತು ಈ ಚಿಕ್ಕ ವಸ್ತ್ರಗಳನ್ನು ಚೊಕ್ಕಟವಾಗಿಡುವುದೂ ಸುಲಭವಾಗುವುದು.

## ೨ ಸುಂದರ ಮತ್ತು ಸ್ವಚ್ಛ ರೂಢಿಗಳು

೧ ಶಾರೀರಿಕ ಸ್ವಚ್ಛತೆಯ ಅಭ್ಯಾಸವಲ್ಲದೆ ಸಂಸ್ಕಾರದ ಸುಂದರ ಮತ್ತು ಸ್ವಚ್ಛವಾದ ಇನ್ನೂ ಕೆಲವು ಅಭ್ಯಾಸಗಳನ್ನು ಇಟ್ಟುಕೊಳ್ಳುವುದು ಅವಶ್ಯವಿದೆ. ನಮ್ಮಲ್ಲಿ ಈ ಸ್ವಭಾವವಿಲ್ಲದ್ದರಿಂದ ನಮ್ಮನ್ನು ನೋಡಿ

ಒಳ್ಳೆಯ ಅಭ್ಯಾಸಗಳಿದ್ದ ಜನರು ಹೇಸಿಕೊಳ್ಳುವರು. ನಮ್ಮ ಬಗೆಗೆ ಅವರಲ್ಲಿ ತಿರಸ್ಕಾರವು ಹುಟ್ಟುವುದು.

೨ ಕೊಳಕುತನವನ್ನು ಎಂದೂ ಸಹಿಸದಂಥ ಶಿಕ್ಷಣವನ್ನು ನಾವು ನಮ್ಮ ಕಣ್ಣುಗಳಿಗೆ ಕೊಡತಕ್ಕದ್ದು. ಹೊಲಸನ್ನು ಕಂಡ ಕೂಡಲೆ ಓಡಿ ಹೋಗಬೇಕೆಂದು ಅದರ ಅರ್ಥವಲ್ಲ. ಆ ಸ್ಥಳವನ್ನು ಸ್ವಚ್ಛವಾಗಿಡಲು ಯತ್ನಿಸಬೇಕೆಂಬುದೇ ಅದರ ತಾತ್ಪರ್ಯ.

೩ ನಿರ್ದುಷ್ಟ ರೂಢಿಗಳನ್ನಿಟ್ಟುಕೊಂಡ ಮನುಷ್ಯನು ತಾನು ಕುಳಿತುಕೊಳ್ಳುವ ಸ್ಥಳವನ್ನು ಸ್ವಚ್ಛಮಾಡದೆ ಕುಳಿತುಕೊಳ್ಳುವುದಿಲ್ಲ. ಕೂತಾಗ ಹೊಲಸು ಬಿದ್ದಿದ್ದರೆ ಎದ್ದ ಮೇಲೂ ಆ ಸ್ಥಳವನ್ನು ಸ್ವಚ್ಛ ಮಾಡುವನು. ಅವನು ಮನ ಬಂದತ್ತ ಕಾಗದಗಳನ್ನು ಹರಿದು ಚಲ್ಲುವುದಿಲ್ಲ, ಅಲ್ಲಿ–ಇಲ್ಲಿ ಉಗುಳುವುದಿಲ್ಲ; ಹಲ್ಲು ಉಜ್ಜುವ ಕಡ್ಡಿಗಳನ್ನೂ ಬೀಡಿಯ ತುಣುಕುಗಳನ್ನೂ ಬೆಂಕಿಕಡ್ಡಿಯ ಚೂರುಗಳನ್ನೂ ಇದೇ ಬಗೆಯ ಪದಾರ್ಥಗಳನ್ನೂ ಕೈ ಹೋದತ್ತ ಎಸೆಯುವುದಿಲ್ಲ. ಇವುಗಳ ಸಲುವಾಗಿ ಪ್ರತ್ಯೇಕವಾಗಿ ಒಂದು ಬುಟ್ಟಿಯನ್ನಾಗಲಿ ಪಾತ್ರೆಯನ್ನಾಗಲಿ ಒಂದೆಡೆಯಲ್ಲಿ ಇಟ್ಟು ಅವುಗಳಲ್ಲಿಯೆ ಎಸೆಯುವನು. ನಿರ್ದುಷ್ಟ ಮತ್ತು ಸ್ವಚ್ಛ ಅಭ್ಯಾಸಗಳುಳ್ಳವರಾಗಬೇಕಾದರೆ ಕೆಳಗಿನ ನಿಯಮಗಳನ್ನು ಪಾಲಿಸತಕ್ಕದ್ದು:

೪ ನೀರು ತೆಗೆದುಕೊಳ್ಳದೆ ಮಲಮೂತ್ರ-ವಿಸರ್ಜನೆಗೆ ಹೋಗಕೂಡದು.

೫ ಮಲವಿಸರ್ಜನೆಗೆ ಹೋಗಿ ಬಂದ ಬಳಿಕ ಕೈಕಾಲುಗಳನ್ನು ಚನ್ನಾಗಿ ತೊಳೆದುಕೊಳ್ಳತಕ್ಕದ್ದು; ಮತ್ತು ತಂಬಿಗೆಯನ್ನೂ ತಿಕ್ಕಿ ತೊಳೆದಿಡತಕ್ಕದ್ದು.

೬ ಕುಡಿಯುವ ನೀರಿನಲ್ಲಿ ಅದ್ದಲು ಪ್ರತ್ಯೇಕ ಪಾತ್ರೆ ಇರತಕ್ಕದ್ದು; ಎಂಜಲು ಪಾತ್ರೆಯನ್ನು ಅದರಲ್ಲಿ ಎಂದೂ ಅದ್ದಕೂಡದು. ಕುಡಿಯುವ ಪಾತ್ರೆಗೆ ನೀರು ಸಿಡಿಯುವಂತೆ ಅಥವಾ ಅದರ ಮೇಲೆ ನೀರು ಬೀಳುವಂತೆ ಅದರ ಬಳಿ ನಿಂತು ನೀರು ಕುಡಿಯತಕ್ಕದ್ದಲ್ಲ.

೭ ಬಹಳ ಜನರು ನೀರು ಕುಡಿಯಲು ಒಂದೇ ಪಾತ್ರೆಯು ಇದ್ದರೆ ಅದನ್ನು ಕಚ್ಚಿಕುಡಿಯುವುದು ತರವಲ್ಲ. ಪಾತ್ರೆಯನ್ನು ಕಚ್ಚದೆ ನೀರು ಕುಡಿಯುವ ರೂಢಿಯನ್ನಿಡತಕ್ಕದ್ದು, ಕಚ್ಚಿ ಕುಡಿಯುವ ಅಭ್ಯಾಸವಿದ್ದವರು ತಮಗಾಗಿ ಒಂದು ಬೇರೆ ಪಾತ್ರೆಯನ್ನೆ ಇಟ್ಟುಕೊಳ್ಳತಕ್ಕದ್ದು; ಇಲ್ಲವೆ ಬೊಗಸೆಯಿಂದ ನೀರು ಕುಡಿಯತಕ್ಕದ್ದು.

೮ ಊಟಮಾಡಿದ ಸ್ಥಾನದಲ್ಲಿ ಮುಸುರೆಯ ಪದಾರ್ಥಗಳು ಹರಡಿದ್ದರೆ

ಅವನ್ನು ತೆಗೆದು ಆ ಸ್ಥಾನವನ್ನು ಸಗಣಿಯಿಂದ ಸಾರಿಸಬೇಕು; ಆ ಸ್ಥಾನವು ಮನೆಯ ಹೊರಗೆ ಇದ್ದರೆ ಚನ್ನಾಗಿ ಗೂಡಿಸಿ ನೀರು ಚಿಮುಕಿಸಬೇಕು. ಹೀಗೆ ಮಾಡುವ ಮೊದಲು ಆ ಸ್ಥಳದಲ್ಲಿ ತಿರುಗಾಡುವುದು, ತಿರುಗಾಡಿದ ಮೇಲೆ ಪಾದಪ್ರಕ್ಷಾಲನೆ ಮಾಡಿಕೊಳ್ಳದೆ ಸ್ವಚ್ಛವಾದ ಕೋಣೆಗಳಲ್ಲಿ ಪ್ರವೇಶಿಸುವುದು, ಆ ಸ್ಥಾನಗಳಲ್ಲಿ ಬೇರೆಯವರಿಗೆ ಊಟಕ್ಕೆ ಹಾಕುವುದು ಲೇಸಲ್ಲ.

೯ ಸಾಮಾನ್ಯವಾಗಿ ಸೌಟು ಮತ್ತು ಚಮಚದಿಂದಲೆ ಊಟಕ್ಕೆ ಬಡಿಸತಕ್ಕದ್ದು. ಕಾಯಿಪಲ್ಲೆ ಬೇಳೆ ಅನ್ನ ಮುಂತಾದ ಪದಾರ್ಥಗಳನ್ನು ಕೈಯಿಂದ ಬಡಿಸುವುದು ಯೋಗ್ಯವಲ್ಲ. ಎಂಜಲುಕೈಯಿಂದ ಊಟಕ್ಕೆ ನೀಡುವುದಂತೂ ತೀರ ಅಯೋಗ್ಯ. ರೊಟ್ಟಿ ಅಥವಾ ಪುರೆಯಂಥ ಒಣ ಮತ್ತು ಕರಿದ ಪದಾರ್ಥಗಳನ್ನೂ ಎಂಜಲು ಕೈಯಿಂದ ಕೊಡತಕ್ಕದ್ದಲ್ಲ.

೧೦ ಉಣ್ಣುವವನ ತಟ್ಟೆ ಇಲ್ಲವೆ ಬಟ್ಟಲಿಗೆ ತಾಗುವಂತೆ ಬಡಿಸುವುದು ಅಸ್ವಚ್ಛತೆಯ ಗುರುತು; ಮತ್ತು ತಾಗುವುದೆಂಬ ಭಯದಿಂದ ಉಣ್ಣುವ ತಟ್ಟೆಯಲ್ಲಿ ಪದಾರ್ಥಗಳನ್ನು ಮೇಲಿನಿಂದ ಚಲ್ಲುವುದು ಅಸಭ್ಯತನವು.

೧೧ ಕೊಳಕುಕಾಲಿನಿಂದ ಹೋಗಿ ಹಾಸಿಗೆಯ ಮೇಲೆ ಕುಳಿತುಕೊಳ್ಳಕೂಡದು. ಜನರು ಮಲಗುವ ಸ್ಥಾನದಲ್ಲಿ ಯಾರ ಹಾಸಿಗೆಯ ಮೇಲೂ ಕಾಲು ಬೀಳದಂತೆ ಎಚ್ಚರಪಡತಕ್ಕದ್ದು.

೧೨ ದುಡಿದು ಬಂದ ಮೇಲೂ ಮೂತ್ರವಿಸರ್ಜನೆ ಮಾಡಿ ಬಂದ ಮೇಲೂ ಕೈಕಾಲು ತೊಳೆದುಕೊಳ್ಳದೆ ತಿಂಡಿತಿನಸುಗಳನ್ನು ಮುಟ್ಟಕೂಡದು. ಕುಡಿಯುವ ನೀರಿನಲ್ಲಿ ಕೈ ಅದ್ದಕೂಡದು. ತಾಂಬೂಲದ, ಹೊಗೆಸೊಪ್ಪಿನ ಇಲ್ಲವೆ ಬೀಡಿಯ ಚಟದವರು ಇತ್ತ ಹೆಚ್ಚು ಗಮನ ಕೊಡತಕ್ಕದ್ದು. ಆಗಾಗ ತುರಿಸಿಕೊಳ್ಳುವ, ಮೂಗಿನೊಳಗಿನ ಕೊಳೆಯನ್ನು ತೆಗೆದುಹಾಕುವ ಚಟವಿದ್ದವರು ತಿನ್ನುವ ಪದಾರ್ಥಗಳನ್ನು ಕೈತೊಳೆದುಕೊಳ್ಳದೆ ಮುಟ್ಟತಕ್ಕದ್ದಲ್ಲ.

೧೩ ಬಟ್ಟೆಗಳನ್ನು ಒಗೆಯುವುದಕ್ಕಾಗಿ ಉಪಯೋಗಿಸಿದ ಪಾತ್ರೆಯನ್ನು ಚನ್ನಾಗಿ ತಿಕ್ಕಿ ತೊಳೆಯದೆ ಬಾವಿಯಲ್ಲಿ ಬಿಡಬಾರದು ; ಕುಡಿಯುವ ಹಾಗೂ ಅಡಿಗೆ ಮಾಡುವ ನೀರನ್ನು ಅದರಲ್ಲಿ ತುಂಬಬಾರದು.

೧೪ ಮೂತ್ರವಿಸರ್ಜನೆ, ಬಾಯಿಮುಕ್ಕಳಿಸುವಿಕೆ, ಉಗುಳುವಿಕೆ, ಮುಂತಾದ್ದಕ್ಕಾಗಿ ಬಚ್ಚಲುಹರಿಗಳನ್ನು ಉಪಯೋಗಿಸುವ ವಾಡಿಕೆಯು ತೀರ

ಹೊಲಸಾದದ್ದು. ಇಂಥ ಹರಿಗಳನ್ನು ಮನೆಯಲ್ಲಿ ಮಾಡಿಸದಿರುವುದೆ ಯೋಗ್ಯ. ಮೇಲಿನ ಕಾರ್ಯಗಳಿಗಾಗಿ ಪ್ರತ್ಯೇಕ ಒಂದು ಪಾತ್ರೆಯನ್ನು ಉಪಯೋಗಿಸುವುದು ಮತ್ತು ಆ ಹೊಲಸನ್ನು ದೂರ ಒಯ್ದು ಚಲ್ಲಿ ಪಾತ್ರೆಯನ್ನು ಚೊಕ್ಕಟ ಮಾಡುವುದು ಒಳ್ಳೇ ನಿರ್ದುಷ್ಟವಾದ ನಡತೆ. ಕಾಲುವೆ (ಗಟಾರು)ಗಳು ಇಲ್ಲದ ಊರುಗಳಲ್ಲಿ ಹರಿಗಳನ್ನು ಉಪಯೋಗಿಸಕೂಡದು.

೧೫ ಆದರೆ ಎಲ್ಲಿ ಬಚ್ಚಲುಹರಿಗಳನ್ನು ಉಪಯೋಗಿಸುವುದು ಅವಶ್ಯವಿದೆಯೋ ಅಲ್ಲಿ ಹರಿಗಳಲ್ಲಿ ಮೂತ್ರವಿಸರ್ಜನೆ ಮಾಡಲು ಕುಳಿತುಕೊಳ್ಳುವವರು ಸಮೀಪದಲ್ಲಿ ಪಾತ್ರೆಗಳು ಬಿದ್ದಿದ್ದರೆ ಅವುಗಳನ್ನು ಮೂತ್ರದ ಹನಿಗಳು ಸಿಡಿಯದಷ್ಟು ದೂರದಲ್ಲಿಡತಕ್ಕದ್ದು. ಅವುಗಳಿಗೆ ಹನಿಗಳು ಸಿಡಿಯುವ ಹಾಗೆ ಕೈ ತೊಳೆದುಕೊಳ್ಳತಕ್ಕದ್ದಲ್ಲ ಮತ್ತು ಬಾಯಿ ಮುಕ್ಕುಳಿಸತಕ್ಕದ್ದಲ್ಲ.

೧೬ ತಾನು ತೊಟ್ಟ ಬಟ್ಟೆಗಳನ್ನು ಸ್ವಚ್ಛಮಾಡದೆ ಬೇರೆಯವರಿಗೆ ಅವನ್ನು ಧರಿಸಲು ಎಂದಿಗೂ ಕೊಡಕೂಡದು.

೧೭ ಬಾಯಿಂದ ಅವಾಚ್ಯ ಶಬ್ದಗಳನ್ನೂ ಬೈಗಳನ್ನೂ ಉಚ್ಚರಿಸುವುದು ಕೂಡ ಶಾರೀರಿಕ ಅಸ್ವಚ್ಛತೆಯೆನಿಸುವುದು. ಪರಮಾತ್ಮನ ನಾಮೋಚ್ಚಾರಣೆ ಮಾಡುವ ನಾಲಿಗೆಯಿಂದ ಕೆಟ್ಟ ಬೈಗಳನ್ನು ನುಡಿಯುವುದು ಸ್ನಾನ ಮಾಡಿ ತಿಪ್ಪೆಯ ಮೇಲೆ ಮಲಗಿಕೊಳ್ಳುವುದಕ್ಕಿಂತಲೂ ಮಲಿನವಾದುದು, ಹೇಯವಾದುದು. ಏಕೆಂದರೆ ಅದರಿಂದ ನಾಲಿಗೆಯೊಡನೆ ಮನವೂ ಅಪವಿತ್ರವಾಗುವುದು.

## ೩ ಬಾಹ್ಯ ಸ್ವಚ್ಛತೆ

೧ ಸ್ವಂತ ಶಾರೀರಕ ಸ್ವಚ್ಛತೆಯ ಬಗೆಗೆ ಉಚ್ಚ ವರ್ಗಗಳಿಗೆ ಪ್ರಮಾಣಪತ್ರವನ್ನು ಕೊಟ್ಟರೂ ಕೊಡಬಹುದು; ಆದರೆ ಮನೆ, ಅಂಗಳು, ಹರಿ, ಓಣಿ, ಮಾರ್ಗ ಮೊದಲಾದವುಗಳ ಸ್ವಚ್ಛತೆಯ ಬಗೆಗೆ ಮಾತ್ರ ಅವರು ತೀರ ಹಿಂದೆಬಿದ್ದಿದ್ದಾರೆ. ಈ ವಿಷಯದಲ್ಲಿ ದಲಿತವರ್ಗಗಳು ಸ್ವಲ್ಪ ಮಟ್ಟಿಗೆ ಒಳ್ಳೇ ಮಟ್ಟವನ್ನು ಕಾಯ್ದುಕೊಂಡು ಬಂದಿವೆ. ಒಟ್ಟಿನಲ್ಲಿ ಸರ್ವರೂ ತಮ್ಮ ಜೀವನದಲ್ಲಿ ಈ ಬಗೆಗೆ ಸುಧಾರಣೆ ಮಾಡಿಕೊಳ್ಳುವುದು ಅವಶ್ಯವಾದದ್ದು.

೨ ಅಲ್ಲಿ ಇಲ್ಲಿ ಉಗುಳುವುದು, ಮಲಮೂತ್ರ ವಿಸರ್ಜಿಸುವುದು, ಕಸ ಚಲ್ಲುವುದು ಮತ್ತು ಅದು ಒಂದೆಡೆ ಬೀಳುವಂತೆ ಮಾಡುವುದು ಹಿಂದೀಯ

ರಿಗೆ ರೂಢಿಯಾಗಿಬಿಟ್ಟಿದೆ. ಈ ಅಭ್ಯಾಸದಿಂದ ಹಿಂದುಸ್ತಾನದ ಹಳ್ಳಿಗಳು, ಪಟ್ಟಣಗಳು, ತೀರ್ಥಕ್ಷೇತ್ರಗಳು, ಮಾರ್ಗಗಳು, ಕೆರೆ-ಬಾವಿಗಳು, ಹೊಳೆ ಹಳ್ಳಗಳು, ಧರ್ಮಶಾಲೆಗಳು, ಉಗಿಬಂಡಿಗಳು, ಸ್ಟೀಮರುಗಳು ಮುಂತಾದವು ಗಳೆಲ್ಲ ಕಲಂಕಿತವಾಗಿವೆ.

೩ ಈ ನಡೆವಳಿಕೆಯ ಮೂಲದಲ್ಲಿ ಒಂದು ಬಗೆಯ ಅಸ್ಪೃಶ್ಯತೆಯ ಭಾವನೆ ಇದೆ. ಮನುಷ್ಯನಿದ್ದ ಕಡೆಯಲ್ಲೆಲ್ಲ ಹೊಲಸು ಉಂಟಾಗತಕ್ಕದ್ದೇ. ಆದರೂ ಹಿಂದುಸ್ತಾನದ ಸ್ಪೃಶ್ಯ ವರ್ಗಗಳು ಸ್ವತಃ ಹೊಲಸನ್ನು ದೂರ ಮಾಡುವುದು ಕೀಳೆಂದು ಭಾವಿಸಿ, ಈ ಪರೋಪಕಾರದ ಕೆಲಸ ಮಾಡು ವವರು ಅಸ್ಪೃಶ್ಯರು ಎಂದೆಣಿಸಿ, ಹೊಲಸು ತೆಗೆಯುವುದನ್ನು ಬಿಟ್ಟು ಅದು ಕೂಡಿಬೀಳುವ ರೂಢಿಯನ್ನು ಆಚರಣೆಯಲ್ಲಿ ತಂದಿರುವವು. ಹೊಲಸನ್ನು ದೂರಮಾಡುವ ಕಾರ್ಯದಲ್ಲಿ ನೆರವಾಗುವುದನ್ನೂ ಬಿಟ್ಟಿರುವವು. ಇದರಿಂದ ಅಸ್ಪೃಶ್ಯರು ಎಷ್ಟು ದುಡಿದರೂ ತೀರದಷ್ಟು ಕಾರ್ಯವನ್ನು ಅವರ ಮೇಲೆ ಸ್ಪೃಶ್ಯವರ್ಗಗಳು ಹಾಕಿದಂತಾಗಿದೆ. ಆದ್ದರಿಂದಲೆ ಇಂದು ರಾಷ್ಟ್ರದಲ್ಲಿ ನಾನಾತರದ ರೋಗಗಳೂ ಉಪದ್ರವಗಳೂ ಉದ್ಭವಿಸಿರುವವು; ಮತ್ತು ಉಪಯುಕ್ತ ಸ್ಥಾನಗಳೆಲ್ಲ ಓಕರಿಕೆಯನ್ನುಂಟುಮಾಡುವಷ್ಟು ಕೊಳಕಾ ಗಿರುವವು.

೪ ಮೇಲೆ ವರ್ಣಿಸಿದ ಸ್ಥಳಗಳಲ್ಲಿ ಉಗುಳುವುದು, ಮಲಮೂತ್ರ ವಿಸರ್ಜಿಸುವುದು, ಮತ್ತು ಕಸ ಚಲ್ಲುವುದು ಮುಂತಾದ ಕಾರ್ಯಗಳು ಪಾಪಮಯವೆಂದೂ ಅಪರಾಧಗಳೆಂದೂ ಎಣಿಸತಕ್ಕದ್ದು.

೫ ತಾಂಬೂಲ ಮತ್ತು ಹೊಗೆಸೊಪ್ಪು ತಿನ್ನುವ ಚಟವಿಲ್ಲದ ನಿರೋಗಿ ಯಾದ ಮನುಷ್ಯನು ಹಲ್ಲು ಉಜ್ಜುವಾಗ ಮಾತ್ರ ಉಗುಳಬೇಕಾಗುವುದು, ಇತರ ಸಮಯದಲ್ಲಿ ಉಗುಳಬೇಕಾಗುವುದಿಲ್ಲ. ಹಲ್ಲು ಮೂಗು ಮತ್ತು ಪುಪ್ಪುಸದ ರೋಗಗಳಿದ್ದವರು ಆಗಾಗ ಉಗುಳಬೇಕಾಗುವುದು ಇಲ್ಲವೆ ಮೂಗು ಸ್ವಚ್ಛಮಾಡಿಕೊಳ್ಳಬೇಕಾಗುವುದು. ನಿರೋಗಿಯಾದರೂ ತಾಂಬೂಲ ಮತ್ತು ಹೊಗೆಸೊಪ್ಪಿನ ಚಟವನ್ನಿಟ್ಟುಕೊಳ್ಳುವುದೆಂದರೆ ರೋಗಿಯಾದ ಮನುಷ್ಯನ ಕಷ್ಟಗಳನ್ನು ಅನುಭವಿಸಲು ಒಪ್ಪಿದಂತೆಯೆ ಸೈ. ಮನುಷ್ಯನ ಉಗುಳು ಮತ್ತು ಕಫದಲ್ಲಿ ನಾನಾ ಬಗೆಯ ವಿಷಗಳಿರುವವು. ಅವು ಗಾಳಿಯಲ್ಲಿ ಬೆರೆತು ನಿರೋಗಿಯಾದ ಮನುಷ್ಯರಲ್ಲಿಯೂ ಸೇರುವವು. ಆದ್ದರಿಂದ ಉಗುಳು ಮತ್ತು ಕಫವನ್ನು ನಾಶಮಾಡುವ ವ್ಯವಸ್ಥೆಯನ್ನು

ಮಾಡತಕ್ಕದ್ದು.

೬ ಪ್ರತಿಯೊಂದು ಮನೆಯಲ್ಲಿ ಉಗುಳಲು ಬೂದಿಯಿಂದ ತುಂಬಿದ ಒಂದು ಹರಿವಾಣವನ್ನಿಡತಕ್ಕದ್ದು ಮತ್ತು ಅದರಲ್ಲಿಯೆ ಉಗುಳತಕ್ಕದ್ದು. ಆ ಹರಿವಾಣವನ್ನು ದಿನವೂ ದೂರ ಒಯ್ದು ಚಲ್ಲಿ ಚೊಕ್ಕಟಮಾಡಿ ತಂದು ಪುನಃ ಅದರಲ್ಲಿ ಹಸನಾದ ಬೂದಿಯನ್ನು ತುಂಬಿ ಇಡತಕ್ಕದ್ದು. ಪೀಕ-ದಾನಿಯನ್ನು ಉಪಯೋಗಿಸುತ್ತಿದ್ದರೆ ಉಗುಳನ್ನು ಸಿಕ್ಕಸಿಕ್ಕಲ್ಲಿ ಚಲ್ಲತಕ್ಕದ್ದಲ್ಲ. ಮುಂಬಯಿಯಂಥ ದೊಡ್ಡ ಪಟ್ಟಣಗಳಲ್ಲಿ, ಗಟಾರುಗಳ ಸಂಪೂರ್ಣ ವ್ಯವಸ್ಥೆ ಇದ್ದ ಊರುಗಳಲ್ಲಿ ಉಗುಳನ್ನು ಗಟಾರಿನಲ್ಲಿ ಚಲ್ಲಿ ಪೀಕದಾನಿಯನ್ನು ಸ್ವಚ್ಛ ಮಾಡಬಹುದು. ಆದರೆ ಹಳ್ಳಿಗಳಲ್ಲಿ, ಗಟಾರಾದಿಗಳ ಸರಿಯಾದ ವ್ಯವಸ್ಥೆ ಇಲ್ಲದ ಊರುಗಳಲ್ಲಿ, ದೂರದ ಹೊಲಗಳಲ್ಲಿ ಉಗುಳನ್ನು ಚಲ್ಲಿ ಅದರ ಮೇಲೆ ಒಣ ಮಣ್ಣು ಹಾಕತಕ್ಕದ್ದು. ಇಲ್ಲವೆ ಅದನ್ನು ಬಿಸಿಬಿಸಿಯಾದ ಬೂದಿಯಲ್ಲಿ ಕಲಿಸಿ ದೂರ ಬಿಸುಟುಬರತಕ್ಕದ್ದು.

## ೪ ಶೌಚ *

೧ ಮಾರ್ಗದಲ್ಲಿ ಮಲವಿಸರ್ಜನೆ ಮಾಡುವ ಅಭ್ಯಾಸವು ಎಳ್ಳಷ್ಟೂ ಯೋಗ್ಯವಲ್ಲ. ಮರೆಯಿಲ್ಲದ ಬೈಲುಪ್ರದೇಶದಲ್ಲಿ ಎಲ್ಲರಿಗೂ ಕಾಣುವಂತೆ ಮಲತ್ಯಾಗ ಮಾಡುವುದೂ ಮಕ್ಕಳಿಂದ ಹಾಗೆ ಮಾಡಿಸುವುದೂ ಅಸಭ್ಯತನ.

೨ ಆದುದರಿಂದ ಪ್ರತಿಯೊಂದು ಹಳ್ಳಿಯಲ್ಲಿ ತಿಪ್ಪೆಯ ಹತ್ತಿರ ತೀರ ಕಡಿಮೆ ಬೆಲೆಯಲ್ಲಿ ಒಂದು ಕಕ್ಕಸು ಕಟ್ಟಿಸಿ ಅದನ್ನು ದಿನವೂ ನಿಯಮಿತವಾಗಿ ಸ್ವಚ್ಛಮಾಡತಕ್ಕದ್ದು.

೩ ಮಲವಿಸರ್ಜನೆಗೆ ಬಯಲಿಗೇ ಹೋಗುವುದಿದ್ದಲ್ಲಿ ಊರಿನಿಂದ ಒಂದು ಮೈಲು ದೂರ ಜನರ ಸುಳಿದಾಟವಿಲ್ಲದ ಸ್ಥಾನಕ್ಕೆ ಹೋಗಬೇಕು. ಒಂದು ಹೊಂಡ ತೆಗೆದು ಅದರಲ್ಲಿ ಮಲತ್ಯಾಗಮಾಡಿ ಅದರ ಮೇಲೆ ತಕ್ಕಷ್ಟು ಮಣ್ಣುಹಾಕಿ ಬರಬೇಕು. ಜಾಣನಾದ ಒಕ್ಕಲಿಗನು ಒಂದು ಕಕ್ಕಸನ್ನು ತನ್ನ ಹೊಲದಲ್ಲಿಯೆ ಅಗ್ಗವಾಗಿ ಕಟ್ಟಿಸಿಕೊಂಡು ಅದರಲ್ಲಿ

---

* ಇದು ಮತ್ತು ಇದರ ಮುಂದಿನ ಕೆಲವು ಪ್ರಕರಣಗಳು ಗಾಂಧೀಜಿಯವರು ಬರೆದ 'ಗಾವ್‌ಡಾನೀ ವಹಾರೆ' ಎಂಬ ಪ್ರಕಟವಾದ ಲೇಖಮಾಲೆಯ ಆಧಾರದಿಂದ ಬರೆಯಲ್ಪಟ್ಟಿವೆ. ಈ ಲೇಖಮಾಲೆಯ ಪುಸ್ತಕವನ್ನು ಸರ್ವರೂ ಅವಶ್ಯವಾಗಿ ಓದಬೇಕು.

—ಕೆ. ಘ. ಮ.

ವಿಸರ್ಜನೆ ಮಾಡಿದ ಮಲವನ್ನು ಹೊಲದಲ್ಲಿ ಹುಗಿದು, ಮೇಲೆ ಮಣ್ಣು ಹಾಕಿ ಪುಕ್ಕಟೆಯಾಗಿ ಗೊಬ್ಬರವನ್ನು ಮಾಡಿಕೊಳ್ಳುವನು.

೪ ಇದಾದನಂತರ ಬಾಲಕರ ಮತ್ತು ರೋಗಿಗಳ ಸಲುವಾಗಿಯೂ ಅಗತ್ಯದ ವೇಳೆಯಲ್ಲಿ ಉಪಯೋಗಿಸುವುದಕ್ಕಾಗಿಯೂ ಮನೆಗೊಂದು ಕಕ್ಕಸು ಬೇಕೇಬೇಕು. ಈ ಕಕ್ಕಸುಗಳಲ್ಲಿ ತಗಡಿನ ಡಬ್ಬಗಳನ್ನು ಉಪಯೋಗಿಸಬಹುದು. ಇಲ್ಲಿಯೂ ಶೌಚಕ್ರಿಯೆಯು ತೀರಿದ ಮೇಲೆ ಮಲದ ಮೇಲೆ ತಕ್ಕಷ್ಟು ಮಣ್ಣು ಹಾಕತಕ್ಕದ್ದು. ಈ ಡಬ್ಬವನ್ನು ದಿನವೂ ಹೊಲಕ್ಕೊಯ್ದು ಹೊಂಡ ತೆಗೆದು ಅದರಲ್ಲಿ ಸುರಿದು ಸಾಕಷ್ಟು ಮಣ್ಣು ಮುಚ್ಚಿ ಬರತಕ್ಕದ್ದು. ಡಬ್ಬದಿಂದ ನಾತ ಬರದಂತೆ ಅದನ್ನು ತಿಕ್ಕಿತಿಕ್ಕಿ ಚೊಕ್ಕಟಮಾಡಿ ಉಪಯೋಗಿಸತಕ್ಕದ್ದು.

೫ ಕಕ್ಕಸಿನಲ್ಲಿ ನೀರು ಮತ್ತು ಮೂತ್ರಕ್ಕಾಗಿ ಬೇರೆ ಬೇರೆ ಡಬ್ಬಗಳನ್ನು ಇಟ್ಟಿರಬೇಕು. ಮತ್ತು ಮೂತ್ರ ಇಲ್ಲವೆ ನೀರು ಅತ್ತ ಇತ್ತ ಬೀಳದಂತೆ ಎಚ್ಚರಪಡತಕ್ಕದ್ದು.

೬ ಈಗಿನ ಶೌಚಕೂಪಗಳು ಅತ್ಯಂತ ನಿರುಪಯುಕ್ತವಾದವು. ಬಹಳ ಆಳವಾದ ಕೂಪದಲ್ಲಿ ಗೊಬ್ಬರ ಮಾಡುವ ಜಂತುಗಳು ಇರುವುದಿಲ್ಲ. ಇಂಥ ಶೌಚಕೂಪಗಳಿಂದ ದುರ್ಗಂಧವು ಎದ್ದು ಗಾಳಿಯನ್ನು ಕೆಡಿಸುವುದು.

೭ ಬೀದಿಗಳಲ್ಲಿ ಮೂತ್ರವಿಸರ್ಜನೆ ಮಾಡುವುದು ಪಾಪಕರ್ಮವೆಂದು ತಿಳಿಯತಕ್ಕದ್ದು. ಇದಕ್ಕೂ ಮಣ್ಣಿನಿಂದ ತುಂಬಿದ ಡಬ್ಬಗಳನ್ನು ಇಡತಕ್ಕದ್ದು. ಎಂದರೆ ದುರ್ಗಂಧವು ಏಳಲಾರದು ಮತ್ತು ಹನಿಗಳು ಸಿಡಿಯಲಾರವು.

೮ ಪ್ರತಿಯೊಬ್ಬ ಮನುಷ್ಯನು ಕಕ್ಕಸನ್ನು ಚೊಕ್ಕಟ ಮಾಡುವುದನ್ನು ಕಲಿಯಬೇಕು. ಇದರಿಂದ, ಅಯೋಗ್ಯ ರೀತಿಯಿಂದ ಕಕ್ಕಸು ಉಪಯೋಗಿಸುವುದರಿಂದಲೂ, ಡಬ್ಬಗಳನ್ನು ಸರಿಯಾಗಿ ಇಡದಿರುವುದರಿಂದಲೂ ಎಷ್ಟು ಶ್ರಮವಾಗುವುದೆಂಬ ಕಲ್ಪನೆಯು ಬರುವುದು. ಭಂಗಿಯು ಮಾಡುವ ಸಮಾಜಸೇವೆ ಎಷ್ಟು ಉಚ್ಚ ಮಟ್ಟದ್ದೆಂಬುದು ಗೊತ್ತಾಗುವುದು. ಇದಲ್ಲದೆ ಯೋಗ್ಯರೀತಿಯಿಂದ ಉಪಯೋಗಿಸಿದ ಪಾಯಖಾನೆಯನ್ನು ಸ್ವಚ್ಛ ಮಾಡುವುದರಲ್ಲೇನೂ ಹೇಸಿಕೆ ಇಲ್ಲವೆಂದೂ ಭಂಗಿಗಳ ತೊಂದರೆಗೆ

ಕಾರಣವು ಈ ಕಾರ್ಯದ ಹೊಲಸುತನವಲ್ಲ, ಆದರೆ ಅದನ್ನು ಉಪಯೋಗಿಸುವುದರಲ್ಲಿದ್ದ ನಮ್ಮ ದುರ್ಲಕ್ಷ್ಯವೆಂದೂ ಗೊತ್ತಾಗುವುದು.

೯ ಮನುಷ್ಯನ ಮಲಮೂತ್ರದಂತೆಯೆ ದನಗಳ ಮಲಮೂತ್ರವನ್ನೂ ಗೊಬ್ಬರ ಮಾಡಿಕೊಂಡು ಉಪಯೋಗಿಸತಕ್ಕದ್ದು. ಸಗಣಿಯಿಂದ ಬೆರಣಿಗಳನ್ನು ಮಾಡಿಕೊಳ್ಳುವುದೆಂದರೆ ಕಾಗದದ ನಾಣ್ಯಗಳನ್ನು ( ನೋಟುಗಳನ್ನು ) ಸುಟ್ಟು ಕಾಸಿಕೊಂಡಂತೆಯೇ ಸರಿ ! ದನದ ಮೂತ್ರವು ಇನ್ನಾವ ಕೆಲಸಕ್ಕೂ ಪ್ರಯೋಜನವಿಲ್ಲ. ಅದನ್ನು ಗೊಬ್ಬರದಂತೆ ಉಪಯೋಗಿಸದಿದ್ದರೆ ಆರ್ಥಿಕ ದೃಷ್ಟಿಯಿಂದಲೂ ಆರೋಗ್ಯದೃಷ್ಟಿಯಿಂದಲೂ ಹಾನಿಯಾಗುತ್ತದೆ.

## ೫ ಜಲಾಶಯಗಳು

೧ ಕೆರೆ ಬಾವಿ ಮತ್ತು ನದಿಗಳ ನೀರು ನಿರ್ಮಲವಿರಬೇಕು. ಗ್ರಾಮ ಪಂಚಾಯತಿಗಳೂ ಗ್ರಾಮಸೇವಕರೂ ಇತ್ತ ಚನ್ನಾಗಿ ಲಕ್ಷ್ಯಕೊಡಬೇಕು.

೨ ಇಂದು ಜಲಾಶಯಗಳ ಸ್ಥಿತಿಯು ಅತ್ಯಂತ ಶೋಚನೀಯವಾಗಿದೆ. ಜನರು ಕೆರೆಗಳಲ್ಲಿಯೇ ಪಾತ್ರೆ ತೊಳೆಯುತ್ತಾರೆ, ಸ್ನಾನ ಮಾಡುತ್ತಾರೆ, ಬಟ್ಟೆಗಳನ್ನೂ ಒಗೆಯುತ್ತಾರೆ. ದನಗಳೂ ಅಲ್ಲಿಯೇ ತಮ್ಮ ಮೈ ತೊಳೆದುಕೊಳ್ಳುತ್ತವೆ, ನೀರು ಕುಡಿಯುತ್ತವೆ ಮತ್ತು ಬಿದ್ದುಕೊಂಡಿರುತ್ತವೆ. ಹುಡುಗರೂ ಹಿರಿಯರೂ ಮಲತೊಳೆದುಕೊಳ್ಳುವುದೂ ಅಲ್ಲಿಯೇ. ಅವುಗಳ ಸುತ್ತುಮುತ್ತಲಿನ ನಿಕಟಪ್ರದೇಶದಲ್ಲಿ ಮಲತ್ಯಾಗ ಮಾಡುತ್ತಾರೆ. ಅದೇ ನೀರನ್ನು ಕುಡಿಯಲೂ ಅಡಿಗೆ ಮಾಡಲೂ ಉಪಯೋಗಿಸುತ್ತಾರೆ. ಇದೆಲ್ಲವೂ ಪಾಪವೆಂದು ತಿಳಿದುಕೊಂಡು ಇದನ್ನು ನಿಲ್ಲಿಸತಕ್ಕದ್ದು.

೩ ಗ್ರಾಮದ ಕೆರೆಯನ್ನು ದನಗಳು ಪ್ರವೇಶಿಸದಂತೆ ಕಟ್ಟಿಸಬೇಕು ; ಹಾಗೂ ಬಾವಿಗಳ ಹತ್ತಿರ ದೋಣಿಗಳನ್ನು ಕಟ್ಟಿಸುವಂತೆ ಕೆರೆಯ ಹತ್ತಿರವೂ ಕಟ್ಟಿಸಬೇಕು.

೪ ಹಾಗೆಯೇ, ಬಟ್ಟೆಗಳನ್ನು ಒಗೆಯುವುದಕ್ಕೂ ಕೆರೆಯ ಹತ್ತಿರವೇ ಒಂದು ಹೌದು ಇರತಕ್ಕದ್ದು. ಒಗೆದ ನೀರು ಪುನಃ ಕೆರೆಯನ್ನು ಸೇರದ ಹಾಗೆ ಒಡ್ಡು ಕಟ್ಟಬೇಕು ; ಅಲ್ಲದೆ ಆ ನೀರು ದೂರ ಹರಿದುಹೋಗುವಂತೆ ಮಾಡತಕ್ಕದ್ದು.

೫ ಈ ದೋಣಿಯನ್ನು ದಿನವೂ ಊರ ಜನರೇ ತಮ್ಮ ಕೈಯಿಂದ ತುಂಬಿದರೆ ಬಹಳ ಉತ್ತಮ; ಇಲ್ಲವಾದರೆ ಯಾರಿಗಾದರೂ ಸ್ವಲ್ಪ ಕೂಲಿ ಕೊಟ್ಟು ತುಂಬಿಸಬೇಕು.

೬ ಎಂಜಲು ಪಾತ್ರೆಗಳನ್ನು ಕೆರೆಯಲ್ಲಿ ಅಥವಾ ಜನರು ಇಳಿದು ತುಂಬುವ ಬಾವಿಯಲ್ಲಿ ತೊಳೆಯಕೂಡದು. ಆದರೆ ಬಳಿಯಲ್ಲಿದ್ದ ದೋಣಿಯ ಹತ್ತಿರ ತಿಕ್ಕಿ ತೊಳೆದ ಬಳಿಕ ಅವನ್ನು ಕೆರೆಯಲ್ಲಿ ಅದ್ದಬಹುದು.

೭ ನೀರು ತುಂಬುವವರು ಕೆರೆಯಲ್ಲಿ ಕಾಲಿಡದೆ ನೀರು ತುಂಬಿ ಕೊಳ್ಳಲು ಬರುವ ಹಾಗೆ ಕೆರೆಯ ಏರ್ಪಾಡು ಇರತಕ್ಕದ್ದು.

೮ ಒಂದೇ ಕೆರೆ ಇರುವ ಊರಿನಲ್ಲಿ ಯಾರೂ ಕೆರೆಯಲ್ಲಿ ಇಳಿದು ಸ್ನಾನವನ್ನು ಮಾಡಕೂಡದು: ಅನೇಕ ಕೆರೆಗಳು ಇದ್ದ ಊರುಗಳಲ್ಲಿ ಕುಡಿಯುವ ನೀರಿನ ಕೆರೆಯು ಪ್ರತ್ಯೇಕವಾಗಿರತಕ್ಕದ್ದು; ಎಂದರೆ, ಕುಡಿಯುವುದಕ್ಕಾಗಿ ಒಂದು ಕೆರೆಯು ಮೀಸಲಾಗಿರತಕ್ಕದ್ದು.

೯ ಬಾವಿಗಳನ್ನು ಆಗಾಗ ಬಳಿಸಿ ಸ್ವಚ್ಛವಿಡತಕ್ಕದ್ದು. ಅವುಗಳ ಸುತ್ತಲೂ ಗೋಡೆಯು ಇರಬೇಕು, ಮತ್ತು ಕೆಸರು ಆಗಗೊಡಬಾರದು. ಆದ್ದರಿಂದ ಆವಾರದ ಗೋಡೆಯು ಗಚ್ಚಿನದಿರಬೇಕು. ಬಾವಿಯ ಸುತ್ತಲೂ ಬಿದ್ದ ನೀರು ಅಲ್ಲಿಯೆ ಇಂಗದಂತೆ ವ್ಯವಸ್ಥೆ ಮಾಡಬೇಕು. ಕಾಲುವೆಗಳನ್ನು ಕಟ್ಟಿಸಿ ಅವುಗಳ ಮುಖಾಂತರ ನೀರು ದೂರ ಹರಿಯುವಂತೆ ಮಾಡಬೇಕು.

೧೦ ಹೀಗೆ ನೀರು ದೂರ ಹರಿದುಹೋಗುವುದಕ್ಕಾಗಿ ಕಟ್ಟಿದ ಮನೆಯ ಬಾವಿ ಮುಂತಾದವುಗಳ ಮುಂದಿನ ಕಾಲುವೆಗಳಲ್ಲಿ ಹಾವಸೆಗಟ್ಟುವುದು, ಅದರಿಂದ ದುರ್ಗಂಧವು ಏಳುವುದು, ಮತ್ತು ಸೊಳ್ಳೆಗಳು ಹೆಚ್ಚಾಗುವವು. ಆದ್ದರಿಂದ ಈ ಹರಿಗಳ ಸ್ವಚ್ಛತೆಯ ಕಡೆಗೆ ಹೆಚ್ಚು ಗಮನಕೊಡತಕ್ಕದ್ದು; ಬಿದಿರಿನ ಪೊರಕೆಗಳಿಂದ ಅವನ್ನು ದಿನವೂ ತಿಕ್ಕಿ ತಿಕ್ಕಿ ತೊಳೆದು ಚೊಕ್ಕಟವಾಗಿಡತಕ್ಕದ್ದು.

## ೬ ರೋಗಗಳು

೧ ರೋಗ ಮತ್ತು ರೋಗದ ಬಾಹ್ಯ ಲಕ್ಷಣಗಳಲ್ಲಿಯ ಭೇದವನ್ನು ತಿಳಿದುಕೊಳ್ಳತಕ್ಕದ್ದು.

೨ ತಲೆನೋವು, ಜ್ವರ, ಉಬ್ಬಸ ಮುಂತಾದವು ರೋಗಗಳಲ್ಲ; ದೇಹ ದಲ್ಲಿ ಉದ್ಭವಿಸಿದ ವಿಷಗಳ ಅಥವಾ ರೋಗಗಳ ಬಾಹ್ಯ ಪರಿಣಾಮಗಳು.

೩. ಪ್ರಾಣಿಯ ರಕ್ತದಲ್ಲಿ ಉಪಕಾರಿ ಜಂತುಗಳಿರುವವು. ಅವು ಯಾವಾಗಲೂ ಶರೀರದಲ್ಲಿ ಹುಟ್ಟುವ ವಿಷಗಳನ್ನು ನಾಶಮಾಡಲು ಹೆಣಗುತ್ತಿರುವವು. ಈ ಹೆಣಗಾಟವೆ ಜ್ವರ ಮತ್ತು ಉಬ್ಬಸದ ರೂಪದಲ್ಲಿ ಹೊರಗೆ ಗೋಚರವಾಗುವುದು.

೪ ಎದರ ಕಾರಣದಿಂದ ಈ ವಿಷಗಳು ಹುಟ್ಟಿರುವವೊ ಅಥವಾ ಹುಟ್ಟುತ್ತಿರುವವೊ ಅದೇ ನಿಜವಾದ ರೋಗ. ಜ್ವರ ಮೊದಲಾದವು ಅದರ ಕೇವಲ ಬಾಹ್ಯಚಿನ್ಹಗಳು.

೫ ಬೀಳುವುದು, ಪೆಟ್ಟು ತಗಲುವುದು ಮುಂತಾದ ಆಕಸ್ಮಿಕ ಘಟನೆಗಳಿಂದ ಹುಟ್ಟುವ ರೋಗಗಳನ್ನು ಬಿಟ್ಟರೆ ಉಳಿದ ಎಲ್ಲ ರೋಗಗಳ ಮೂಲ ಕಾರಣವು ಸಂಯಮರಹಿತ ಜೀವನವೇ ಎನ್ನಬಹುದು.

೬ ಊಟ-ಉಡಿಗೆ, ವಿಷಯೋಪಭೋಗ, ನಿದ್ರೆ–ಜಾಗರಣೆ, ಆಲಸ್ಯ, ಅತಿಶ್ರಮ, ನಾಟಕ– ಸಿನೇಮಾದಿಗಳ ವಿಲಾಸ, ಕ್ರೋಧ, ದ್ವೇಷ, ರಾಗ ಮುಂತಾದ ಭಾವನೆಗಳ ಉದ್ವೇಗದಲ್ಲಿ ನಾವು ತೋರಿಸುತ್ತಿರುವ ಅಸಂಯಮವೆ ರೋಗಗಳ ಮುಖ್ಯ ಕಾರಣವು.

೭ ಈ ಅಸಂಯಮವು ಅನಿವಾರ್ಯವಾಗಿ ಅಜ್ಞಾನ ಮತ್ತು ಮೈಮರೆವಿನಿಂದ ಆಗಿರಲಿ, ಅಥವಾ ತಿಳಿದೂ ತಿಳಿದು ಆಗಿರಲಿ, ಇದರ ಪರಿಣಾಮದ ಫಲವಾದ ರೋಗಗಳನ್ನು ಶರೀರವು ಭೋಗಿಸಲೇ ಬೇಕಾಗುವುದು.

೮ ಈ ಅಸಂಯಮಕ್ಕೆ ಅಶುದ್ಧ ಗಾಳಿ, ಕೊಳಕು ನೀರು, ಅಥವಾ ಮತ್ತಾವುದಾದರೂ ಹೊಲಸು ಕೂಡಿದರೆ ತೀರಿತು, ರೋಗವು ಬಂದೇ ಬರುವುದು.

೯ ನಿರ್ಮಲ ಮತ್ತು ಸಂಯಮಪೂರ್ಣ ಜೀವನವನ್ನಿಟ್ಟುಕೊಂಡ ಮನುಷ್ಯನು ಅಂಟುರೋಗಿಗಳ ಮಧ್ಯದಲ್ಲಿದ್ದರೂ ಅವನಿಗೆ ರೋಗಗಳು ಅಂಟುವುದಿಲ್ಲವೆಂಬಂತೆ ತೋರುತ್ತದೆ. ಸಂಯಮಿಯಾದ ಮನುಷ್ಯನ ರಕ್ತದಲ್ಲಿ ಹೊರಗಿನಿಂದ ಬರುವ ವಿಷಗಳನ್ನು ಓಡಿಸುವ ಶಕ್ತಿಯು ಅಪಾರವಾಗಿರುತ್ತದೆಂಬುದು ಗೊತ್ತಾಗುವುದು. ಆದರೆ ಅಸಂಯಮದಿಂದ ಈ ಶಕ್ತಿಯು ಕುಂದಿದ ಕೂಡಲೆ ಅಂಟುರೋಗಗಳು ಅಂಟಿಕೊಳ್ಳುವವು.

೧೦ ರೋಗದ ಕಾರಣಗಳನ್ನು ತಡೆದು ನಿಲ್ಲಿಸುವುದೇ ಮೊದಲನೆಯ ಉಪಚಾರ. ಈ ಉಪಚಾರಗಳಲ್ಲಿ ಮೊದಲನೆಯ ಉಪಚಾರವು ಇಂದ್ರಿಯಗಳ ಮತ್ತು ಮನಸ್ಸಿನ ಸಂಯಮ. ಇದರ ಜೊತೆಯಲ್ಲಿ ನಿಯಮಿತವಾದ

ಸ್ವಚ್ಛ ಆಹಾರವಿಹಾರವೂ ಸಾಕಷ್ಟು ಪರಿಶ್ರಮ ಮತ್ತು ನಿದ್ರೆಯೂ ಅವಶ್ಯಕ; ಸ್ವಚ್ಛ ಹವೆ, ನಿರ್ಮಲ ನೀರು, ಹಸನಾದ ಬಟ್ಟೆ, ಮನೆ ಅಂಗಳು ಮತ್ತು ಬೀದಿಯ ಸ್ವಚ್ಛತೆ ಇವು ಎರಡನೆಯ ಉಪಚಾರ.

## ೭ ಉಪಚಾರಗಳು

೧ ಮೈಯಲ್ಲಿ ಸರಿಯಾಗಿಲ್ಲವೆಂದು ತೋರಿದ ಕೂಡಲೆ ರೋಗಗಳನ್ನು ತಡೆಯುವ ಉಪಾಯಗಳನ್ನು ಕೈಕೊಳ್ಳುವುದು ಮೊದಲನೆಯ ಉಪಚಾರ.

೨ ಈ ಉಪಚಾರವು ಸರಿಯಾಗಿ ನಡೆದರೆ ಸಾಮಾನ್ಯವಾಗಿ ರೋಗಗಳು ತಾನಾಗಿಯೆ ವಾಸಿಯಾಗುವವು. ಔಷಧ ಸೇವನೆಯು ಹೆಚ್ಚಾಗಿ ಹಾನಿಕರವೂ ವ್ಯರ್ಥವೂ ಆಗಿರುವುದು.

೩ ಆಹಾರ–ವಿಹಾರದಲ್ಲಿನ ದೋಷಗಳನ್ನು ದೂರ ಮಾಡದೆ ಒಳ್ಳೇ ಹವೆ ನೀರು ಮುಂತಾದವುಗಳಿಂದ ರೋಗನಿವಾರಣೆ ಮಾಡಲು ಯತ್ನಿಸುವುದು ಕೈಯನ್ನು ನಿರ್ಮಲವಾದ ನೀರಿನಿಂದ ತೊಳೆದು ಹೊಲಸು ಬಟ್ಟೆಯಿಂದ ಒರೆಸಿಕೊಂಡಂತೆಯೆ ಸರಿ. ಆಹಾರವಿಹಾರ, ಗಾಳಿ ನೀರು ಇವೆರಡರಲ್ಲಿಯೂ ಸುಧಾರಣೆ ಮಾಡದೆ ಔಷಧದಿಂದಲೆ ಗುಣ ಹೊಂದಲಿಚ್ಛಿಸುವುದು ಕೊಳಕು ಬಟ್ಟೆಗೆ ಕಪ್ಪು ಬಣ್ಣ ಹಾಕಿ ಅದು ಶುಭ್ರವಾಗಿದೆ, ಸ್ವಚ್ಛವಾಗಿದೆ ಎಂದು ತಿಳಿದುಕೊಂಡಂತೆಯೆ ಸರಿ.

೪ ಔಷಧದ ಹೊರತು ಅನ್ಯ ಶಾಸ್ತ್ರೀಯ ಉಪಚಾರಗಳೂ ಉಂಟು. ಅವುಗಳ ಜ್ಞಾನವು ಪ್ರತಿಯೊಬ್ಬರಿಗೂ ಇರತಕ್ಕದ್ದು. ಇವು ಸರಳವಿರುವವಲ್ಲದೆ ಇವುಗಳನ್ನು ಮಾಡಲಿಕ್ಕೆ ಹಣ ವೆಚ್ಚಮಾಡಬೇಕಾದ್ದೇನೂ ಇಲ್ಲ.

೫ ಪ್ರತಿಯೊಂದು ಊರಲ್ಲಿ ಒಂದು ಔಷಧಾಲಯವು ಇರಲೇಬೇಕೆನ್ನುವ ಗ್ರಹಿಕೆ ತಪ್ಪಾದುದು. ಅನೇಕ ಊರುಗಳ ನಡುವೆ ಒಂದು ಔಷಧಾಲಯವಿದ್ದರೆ ಸಾಕು. ಹಳ್ಳಿಯ ದವಾಖಾನೆಯೆಂದರೆ ಗ್ರಾಮ ಸೇವಕನು ಮಾಡುವ ಉಪಚಾರಗಳು ಎಂದು ತಿಳಿಯತಕ್ಕದ್ದು.

೬ ಉತ್ತಮ ಉಪಚಾರಗಳಲ್ಲಿ ಉಪವಾಸ, ಕಟಿಸ್ನಾನ ಮತ್ತು ಸೂರ್ಯಸ್ನಾನ ಇವು ಸರ್ವೋತ್ಕೃಷ್ಟವಾದವುಗಳು. ಇವುಗಳ ಬಗೆಗೆ ಬೇಕಾಗುವ ಜ್ಞಾನವನ್ನು ಸ್ವಯಂಸೇವಕರು ಪಡೆದುಕೊಳ್ಳತಕ್ಕದ್ದು. *

* ಈ ವಿಷಯವನ್ನು ಚರ್ಚಿಸಿದ ಗಾಂಧೀಜಿಯವರ “ಆರೋಗ್ಯ ರಕ್ಷಣೆ” ಎಂಬ ಪುಸ್ತಕದ ಅಧ್ಯಯನ ಮಾಡಬೇಕು.

೭ ಸೋಸಿದ ಹಸಿಮಣ್ಣಿನ ಲೇಪದಿಂದಲೂ ಎಷ್ಟೋ ರೋಗಗಳೂ ಜ್ವರಗಳೂ ವಾಸಿಯಾಗುವವು. ವಿಪರೀತ ಜ್ವರ, ತಲೆನೋವು, ಹೊಟ್ಟೆ ಮತ್ತು ಕಿಬ್ಬೊಟ್ಟೆ ನೋವು, ಪೆಟ್ಟಿನಿಂದ ಇಲ್ಲವೆ ಮತ್ತಾವುದಾದರೂ ಕಾರಣದಿಂದ ಉಂಟಾದ ಬಾವು,ಮೂಗಿನ ಸೊಳ್ಳೆ ಒಡೆಯುವಿಕೆ, ತುರಿ,ಕಜ್ಜಿ ಮುಂತಾದ ಚರ್ಮರೋಗಗಳು, ಮಲಬದ್ಧತೆ, ನಿದ್ರೆ ಚನ್ನಾಗಿ ಬರದಿರುವಿಕೆ, ವಿಷಕಾರಕ ಜಂತುಗಳು ಕಚ್ಚುವಿಕೆ ಮುಂತಾದ ನೋವುಗಳಿಗೆ ಮರಳಿಲ್ಲದ ಸೂಸುಮಣ್ಣಿನ ಲೇಪಹಾಕುವುದು ರಾಮಬಾಣ ಉಪಚಾರವಾಗಿದೆ. ಲೇಪದ ಒಂದು ಪಟ್ಟೆಯು ಒಣಗಿದ ಮೇಲೆ ಮತ್ತೊಂದು ಪಟ್ಟೆಯನ್ನು ಕಟ್ಟತಕ್ಕದ್ದು.

೮ ಹುಣ್ಣುಗಳನ್ನು ಹಣ್ಣು ಮಾಡಬೇಕಾದಲ್ಲಿ, ಶ್ವಾಸೋಚ್ಛ್ವಾಸದಲ್ಲಿ ತೊಂದರೆಯಾಗುತ್ತಿದ್ದರೆ, ದಣಿವಿನಿಂದ ಮತ್ತು ಶೀತದಿಂದ ಚಳಿಯಾಗುತ್ತಿದ್ದರೆ ಬಿಸಿಬಿಸಿ ನೀರಿನಲ್ಲಿ ವಸ್ತ್ರವನ್ನು ಅದ್ದಿ ಅದನ್ನು ಹಿಂಡಿ ಚರ್ಮವು ಸುಡದಂತೆ ಕಾವು ಕೊಟ್ಟರೆ ಬಹಳ ಸುಖವೆನಿಸುವುದು. ಉಸುಕು, ಮಣ್ಣು ಇಲ್ಲವೆ ಇಟ್ಟಿಗೆಯನ್ನು ಕಾಸಿ ಒಂದು ಬಟ್ಟೆಯಲ್ಲಿ ಸುತ್ತಿ ಅದರಿಂದಲೂ ಕಾವು ಕೊಡಬಹುದು.

೯ ಮನುಷ್ಯನು ಬೇನೆ ಬೀಳುತ್ತಲೆ ಅವನ ಹಾಸಿಗೆಯನ್ನು ಉಳಿದವರ ಹಾಸಿಗೆಗಳಿಂದ ಬೇರೆ ಮಾಡಬೇಕು. ಅವನ ಸುತ್ತಲೂ ಸಾಮಾನುಗಳು ದಟ್ಟವಾಗಿ ಹರಡಿದ್ದರೆ ಅವನ್ನು ದೂರಮಾಡಬೇಕು, ಮತ್ತು ಅಲ್ಲಿ ಹೆಚ್ಚು ಜನರು ಸೇರಗೊಡಬಾರದು. ಗಾಳಿಯು ಮತ್ತು ಬಿಸಿಲಿನ ತಾಪವು ತಟ್ಟದಂಥ ಮತ್ತು ತಕ್ಕಷ್ಟು ಗಾಳಿಯು ಸಿಗುವಂಥ ಸ್ಥಳದಲ್ಲಿ ಅವನನ್ನು ಮಲಗಿಸಬೇಕು. ಅವನ ಬಟ್ಟೆ, ಮಗ್ಗಲುಹಾಸಿಗೆ ಮತ್ತು ಹೊದ್ದುಕೊಳ್ಳುವ ವಸ್ತ್ರಗಳನ್ನು ಆಗಾಗ ಒಗೆದು ಸ್ವಚ್ಛವಾಗಿಡಬೇಕು. ಹಾಸಿಗೆ, ಕಂಬಳಿ, ದಿಂಬು ಮುಂತಾದವನ್ನು ಆಗಾಗ ಬಿಸಿಲಿಗೆ ಹಾಕಬೇಕು.

೧೦ ರೋಗಿಗೆ ಔಷಧ ಕೊಡುವುದಕ್ಕಿಂತಲೂ ಅವನ ಶರೀರ, ಮನಸ್ಸು ಹಾಗೂ ಹೊಟ್ಟೆಗೆ ವಿಶ್ರಾಂತಿಯನ್ನು ಕೊಡುವುದು ಹೆಚ್ಚು ಅವಶ್ಯವಾದುದು. ಆದರೆ ನಮ್ಮಲ್ಲಿ ಹೊಟ್ಟೆಯ ವಿಶ್ರಾಂತಿಯ ಕಡೆಗೆ ಹೆಚ್ಚು ಗಮನವನ್ನೇ ಕೊಡುವುದಿಲ್ಲ.

೧೧ ಹೊಟ್ಟೆಯು ಕೆಡದಿದ್ದರೆ ಮನುಷ್ಯನಿಗೆ ಯಾವುದೆ ರೋಗ ಬರುವುದು ತೀರ ಅಪರೂಪ. ಹೊಟ್ಟೆಯು ಕೆಟ್ಟರೆ ರೋಗ ಬರುವ ಸಂದರ್ಭ

ಹೆಚ್ಚು. ಆದ್ದರಿಂದ ಮೊಟ್ಟಮೊದಲು ರೋಗಿಯ ಹೊಟ್ಟೆಯನ್ನು ಹಗುರು ಮಾಡುವುದು ಉಪಚಾರಕನ ಮೊದಲ ಕರ್ತವ್ಯ. ಇದಕ್ಕಾಗಿ ಬಸ್ತಿ(ಎನಿಮಾ)ಕೊಡುವುದು ಪ್ರಥಮೋಪಾಯ. ಜ್ವರ ಹೆಚ್ಚು ಇಲ್ಲದಿದ್ದರೆ ಒಂದೆರಡು ಸಲ ಜುಲಾಬು ಆಗುವಷ್ಟು ರೇಚಕ ಕೊಡ ಬಹುದು. ಇದರೊಡನೆಯೆ ರೋಗಿಯು ಒಂದೆರಡು ಉಪವಾಸಗಳನ್ನು ಮಾಡಿದರೆ ಯಾವ ಹಾನಿಯೂ ಆಗುವುದಿಲ್ಲ. ಅತ್ಯಂತ ಅಶಕ್ತನಾಗಿದ್ದರೆ ಅವನು ಉಪವಾಸ ಮಾಡಬೇಕೊ ಮಾಡಬಾರದೊ ಎಂಬ ವಿಷಯದಲ್ಲಿ ಅನುಭವಿಗಳ ಸಲಹೆ ತೆಗೆದುಕೊಳ್ಳತಕ್ಕದ್ದು. ಇಂಥ ಸಲಹೆಗಾರರು ಇದ್ದರೂ ಸರಿ ಇಲ್ಲದಿದ್ದರೂ ಸರಿ, ರೋಗಿಯ ರಕ್ತವು ರೋಗದ ವಿಷ ಗಳೊಡನೆ ಹೋರಾಡುತ್ತಿರುವಾಗ ಅನ್ನ ಪಚನಮಾಡುವ ಭಾರವು ಅವನ ಹೊಟ್ಟೆಯ ಮೇಲೆ ಬೀಳದಂತೆ ಮಾಡಬೇಕು ಎಂಬುದನ್ನು ಯಾವಾ ಗಲೂ ಗಮನದಲ್ಲಿಡತಕ್ಕದ್ದು. ಆಹಾರವನ್ನು ಕೊಡಲೇಬೇಕಾಗಿದ್ದರೆ ಹಗುರವಾದ ಮತ್ತು ಜೀವನಾಧಾರಕ್ಕೆ ಬೇಕಾಗುವಷ್ಟು ಆಹಾರವನ್ನು ಮಾತ್ರವೇ ಕೊಡಬೇಕು.

೧೨ ಹಸುವಿನ ಅಥವಾ ಆಡಿನ ಹಾಲು ಬಹಳ ಹಗುರಾಗಿರುವುದು. ಬೇನೆ ಬಿದ್ದಾಗ ಪ್ರಾಣಾಧಾರಕ್ಕೆ ೧೦ರಿಂದ ೨೦ ತೊಲೆ ಹಾಲು ಸಾಕಾಗುವುದು.

೧೩. ಬೇನೆಬಿದ್ದಾಗ ಮತ್ತು ಉಪವಾಸ ಮಾಡಿದಾಗ ರೋಗಿಗೆ ತಕ್ಕಷ್ಟು ಪ್ರಮಾಣದಲ್ಲಿ ಸ್ವಚ್ಛವಾದ ನೀರನ್ನು ಕುಡಿಸಬೇಕು. ನೀರಿನೊಡನೆ ಉಪ್ಪು ಇಲ್ಲವೆ ಸೋಡಾ ಬೈಕಾರ್ಬ್ ಬೆರೆಸಿ ಕೊಡುವುದು ಒಳಿತು. ಹುಳಿ ನಿಂಬೆಯ ರಸವನ್ನೂ ಕೊಡಬಹುದು. ಚಳಿ ಜ್ವರ, ತಲೆನೋವು ಮತ್ತು ವಾಂತಿ ಇದ್ದರೆ ನಿಂಬೆಹಣ್ಣಿನ ರಸವನ್ನು ಅವಶ್ಯವಾಗಿ ಕೊಡತಕ್ಕದ್ದು.

೧೪ ಅಸ್ಥಿಜ್ವರಕ್ಕೂ ಚಳಿಜ್ವರಕ್ಕೂ ಕ್ವಿನೀನು ಕೊಡಬೇಕಾಗುವುದು; ಮೇಲೆ ವಿವರಿಸಿದ ಉಪಚಾರಗಳನ್ನು ಸರಿಯಾಗಿ ಮಾಡಿದರೆ ಡಾಕ್ಟರರು ಕೊಡುವಷ್ಟು ಪ್ರಮಾಣದಲ್ಲಿ ಕ್ವಿನೀನು ಕೊಡಬೇಕಾಗುವುದಿಲ್ಲ. ಅದನ್ನು ನಿಂಬೆಹಣ್ಣಿನ ರಸದಲ್ಲಿ ಬೆರೆಸಿ ಸೋಡಾದೊಡನೆ ಸೇವಿಸಿದರೆ ಹೆಚ್ಚು ಹಾನಿಯಿಲ್ಲ.

೧೫ ಜ್ವರವು ಅತ್ಯಧಿಕವಾಗಿದ್ದು ಅದನ್ನು ಬೇಗನೆ ಇಳಿಸುವುದು ಅಗತ್ಯ ವಿದ್ದಲ್ಲಿ ಒದ್ದೆಬಟ್ಟೆಯ ಉಪಚಾರವನ್ನು ಕೊಡತಕ್ಕದ್ದು. 'ಆರೋಗ್ಯರಕ್ಷ

ಣೆಯ ಸಾಮಾನ್ಯಜ್ಞಾನ’ ಎಂಬ ಪುಸ್ತಕದಿಂದ ಈ ಉಪಚಾರವನ್ನು ಅರಿತುಕೊಳ್ಳಬೇಕು.

೧೬ ಕಟ್ಟಿನ ಜ್ವರವಲ್ಲದಿದ್ದರೂ ಬಹಳ ದಿನಗಳವರೆಗೆ ಜ್ವರವು ನಿಲ್ಲದೆ ಬರುತ್ತಿದ್ದರೆ ನೀರು ಹವೆ ಬದಲಾಯಿಸುವುದು ಅವಶ್ಯವೆಂದು ತಿಳಿದು ರೋಗಿಯನ್ನು ನೀರು ಮತ್ತು ಗಾಳಿ ಚನ್ನಾಗಿದ್ದ ಕಡೆಗೆ ಕರೆದುಕೊಂಡು ಹೋಗಬೇಕು. ಆರೋಗ್ಯವರ್ಧನೆಗೆ ಹೆಸರಾದ ಸ್ಥಳಗಳಿಗೆ ಹೋಗಬೇಕಾದ ದ್ದೇನೂ ಇಲ್ಲ.

೧೭ ಮೇಲೆ ಸೂಚಿಸಿದ ಉಪಚಾರಗಳು ಹೆಚ್ಚು ಉಗ್ರವಲ್ಲದ ಚಿಕ್ಕ ಚಿಕ್ಕ ರೋಗಗಳಿಗೋಸ್ಕರ ಇರುವವು. ಕ್ಷಯ, ತೊನ್ನು, ರಕ್ತಪಿತ್ತ, ಹಳೆಯ ರೋಗ ಮುಂತಾದ ದೊಡ್ಡ ರೋಗಗಳಿಗೂ ಈ ಉಪಚಾರವನ್ನು ಮಾಡಬಹುದು. ಆದರೆ ಇದಕ್ಕೆ ಅನುಭವಿಗಳ ಸಲಹೆ, ಸಮಾಧಾನದಿಂದ ಕಾರ್ಯ ಮಾಡುವ ಗುಣ ಮತ್ತು ತಾಳ್ಮೆ ಬೇಕು.

೧೮ ಔಷಧಗಳ ಮೇಲೆ ವಿಶ್ವಾಸವಿಡುವ ಅಭ್ಯಾಸವು ಒಳಿತಾದದ್ದಲ್ಲ; ಔಷಧದಿಂದ ಯಾವ ಹಳೆಯ ರೋಗವೂ ಗುಣವಾಗಲಾರದೆಂದು ಇಲ್ಲಿ ಹೇಳಿದರೆ ಅತಿಶಯೋಕ್ತಿಯಾಗಲಾರದು.

೧೯ ಡಾಕ್ಟರರು ರೋಗಿಗಳಿಗೆ ಸರಳವಾದ ಉಪಚಾರಗಳನ್ನು ಕಲಿಸ ತಕ್ಕದ್ದು ಹಾಗೂ ಔಷಧಗಳ ಮೇಲೆ ಅವಾಸ್ತವ ನಂಬಿಗೆ ಹುಟ್ಟಿಸ ಕೂಡದು.

೨೦ ಗಾರುಡಿಗರ ಯಂತ್ರಮಂತ್ರದ ಮೇಲಿರುವಷ್ಟೆ ಅಂಧವಿಶ್ವಾಸವು ಎಷ್ಟೋ ಸಲ ಡಾಕ್ಟರುಗಳ ಔಷಧದ ಮೇಲೂ ಇರುವುದು. ವಾಸ್ತವಿಕ ವಾಗಿ ರೋಗಿಯ ರಕ್ತದಲ್ಲಿದ್ದ ಜೀವನಶಕ್ತಿಯೆ ಅವನನ್ನು ನಿರೋಗಿ ಯನ್ನಾಗಿ ಮಾಡುವುದು. ಈ ಶಕ್ತಿಯು ಕಡಿಮೆಯಾಗಿರದಿದ್ದರೆ ರೋಗಿಯು ಬದುಕುವನು. ಅವನ ಈ ಶಕ್ತಿಯನ್ನು ಕುಂದಿಸದಿರುವುದಕ್ಕೆ ಮೇಲೆ ವಿವರಿಸಿದ ಉಪಚಾರಗಳು ತಕ್ಕಷ್ಟಾಗುವವು. ಈ ಉಪಚಾರಗಳನ್ನು ಮಾಡಿದ ಮೇಲೂ ಬದುಕದಿದ್ದರೆ ಅವನ ಆಯುಷ್ಯವೇ ತೀರಿಹೋಯಿ ತೆಂದು ಭಾವಿಸಬೇಕು. ಡಾಕ್ಟರರ ಮತ್ತು ಮಂತ್ರ ಯಂತ್ರ ತಂತ್ರಗಾರರ ಬಲೆಗೆ ಸಿಕ್ಕು ಹಣವನ್ನು ಕಳೆದುಕೊಳ್ಳಬಾರದು.

೨೧ ಸೋಡಾಬೈಕಾರ್ಬ್, ಔಡಲೆಣ್ಣೆ, ಕ್ವಿನೀನು, ಮತ್ತು ಬಾಹ್ಯ ಉಪಚಾರಗಳಿಗಾಗಿ ಅಯೋಡಿನ್ ಇವುಗಳ ಹೊರತಾಗಿ ಹೆಚ್ಚಿಗೆ ಔಷಧಗಳು

ಗ್ರಾಮಸೇವಕನಿಗೆ ಬೇಕಾಗುವುದಿಲ್ಲ. ಇವುಗಳೊಡನೆ ಒಂದು ಎನಿಮಾ ಇದ್ದರೆ ಅವನ ಔಷಧಾಲಯವು ಪರಿಪೂರ್ಣವಾಯಿತೆಂದು ತಿಳಿಯತಕ್ಕದ್ದು.

## ೮ ಆಹಾರ

೧ ಮನುಷ್ಯನಿಗೆ ಮಾಂಸಾಹಾರದ ಅವಶ್ಯಕತೆಯೇ ಇಲ್ಲ.

೨ ಮಾಂಸಾಹಾರವನ್ನು ಬಿಟ್ಟಿದ್ದರಿಂದಲೆ ಹಿಂದೂ ಜನರ ಅಧಃಪತನವಾಗಿದೆಯೆಂದು ತಿಳಿಯುವುದು ತಪ್ಪಾದುದು, ನಿರಾಧಾರವಾದುದು. ಏಕೆಂದರೆ ಹಿಂದೂ ರಾಜರೂ ಸೈನಿಕ ಜಾತಿಯವರೂ ಬಹುಕಾಲ ಮಾಂಸಾಹಾರವನ್ನು ಬಿಟ್ಟಂತೆ ತೋರುವುದಿಲ್ಲ. ಎಂದ ಬಳಿಕ ಅದನ್ನು ಹಲವು ಜನರು ಬಿಟ್ಟದ್ದು ಈ ಅಧಃಪತನಕ್ಕೆ ಕಾರಣವಾಗಲಾರದು.

೩ ಇದಲ್ಲದೆ ಮಾಸಾಹಾರವನ್ನು ಬಿಟ್ಟವರು ಸಶಕ್ತರೂ ನಿರೋಗಿಗಳೂ ಬಂಟರೂ ಆಗಲಾರರೆಂದು ತಿಳಿಯಲು ಕಾರಣವೇ ಇಲ್ಲ.

೪ ನಿರಾಮಿಷ ಆಹಾರದ ಪಕ್ಷವನ್ನು ಹಿಡಿದರೂ ಮಾಂಸಾಹಾರಿಗಳನ್ನು ದ್ವೇಷಿಸುವುದು ಯೋಗ್ಯವಲ್ಲ. ಬಡತನ ಇರುವುದರಿಂದಲೆ ಹಿಂದುಸ್ಥಾನದ ಎಷ್ಟೋ ಜಾತಿಗಳು ಮಾಂಸಾಹಾರವನ್ನು ತಿನ್ನಬೇಕಾಗುವುದು.

೫ ಹಾಲೂ ಮಾಂಸವೇ. ಆದರೆ ಮಾಂಸಕ್ಕಾಗಿ ಪ್ರಾಣಿವಧೆಯನ್ನೂ ಹಿಂಸೆಯನ್ನೂ ಮಾಡಬೇಕಾಗುತ್ತದೆ, ಹಾಲಿಗಾಗಿ ಅದನ್ನು ಮಾಡಬೇಕಾಗುವುದಿಲ್ಲ; ಇವೆರಡರಲ್ಲೂ ಇರುವ ಅಂತರ ಇಷ್ಟೇ. ಚಿತ್ತಶುದ್ಧಿಗೆ ಹಾಲಿನ ಆಹಾರವೂ ಬಾಧಕವಾಗುವುದು.

೬ ಆದರೆ ನಿರಾಮಿಷ ಆಹಾರಿಗಳಿಗೆ ಹಾಲಿನ ಬದಲು ಅದರಷ್ಟೆ ಪುಷ್ಟಿವರ್ಧಕವಾದ ವನಸ್ಪತಿ ಆಹಾರವನ್ನು ಸೂಚಿಸಲಾಗುವುದಿಲ್ಲ. ಆದ್ದರಿಂದ ಹಾಲು ಅಪವಾದಸ್ವರೂಪವೆಂದು ನಿರ್ಧರಿಸಿದ ಹೊರತು ಗತ್ಯಂತರವಿಲ್ಲ. ಹಾಲು ಸರ್ವರಿಗೂ ಸಿಕ್ಕುವಂತೆ ಉಪಾಯಗಳನ್ನು ಯೋಜಿಸುವುದು ಅವಶ್ಯ.

೭ ವನದ ಪಕ್ವ ಅಥವಾ ಬೇಯಿಸದೆ ಇದ್ದ ಆಹಾರವು ಸೃಷ್ಟಿನಿರ್ಮಿತವಾಗಿರುವುದರಿಂದ ಅದು ನಿರಾಮಿಷ ಆಹಾರದಲ್ಲಿ ಅತ್ಯಂತ ಶ್ರೇಷ್ಠವಾದದ್ದು. ಎಲ್ಲ ಪ್ರಾಣಿಗಳೂ ನಿಸರ್ಗವು ಸಿದ್ಧಪಡಿಸಿದ ಆಹಾರವನ್ನು ಬೇಯಿಸದೆ ಅದರ ಮೂಲರೂಪದಲ್ಲಿಯೆ ತಿನ್ನುವವು. ಈ ನಿಯಮಕ್ಕೆ ಮನುಷ್ಯನು ಮಾತ್ರ ಅಪವಾದವಾಗಲು ಯಾವ ಕಾರಣವೂ ಇಲ್ಲ.

೮ ನಾವು ನೈಸರ್ಗಿಕ ಸ್ಥಿತಿಯಿಂದ ಪತಿತರಾಗಿ ಅಡಿಗೆಯ ಜಾಲದಲ್ಲಿ ಸಿಕ್ಕುಬಿಟ್ಟಿದ್ದೇವೆ. ಆದ್ದರಿಂದಲೆ ಮನುಷ್ಯಜಾತಿಯ ಅತಿ ದೊಡ್ಡಭಾಗವು ನೈಸರ್ಗಿಕ ಆಹಾರದಿಂದ ಜೀವಿಸಲು ಅಯೋಗ್ಯವಾದಂತಾಗಿದೆ. ಯಾವ ಆಹಾರವನ್ನು ನಾವು ಸ್ವಾಭಾವಿಕವಾಗಿ ತೆಗೆದುಕೊಳ್ಳುತ್ತ ಇರಬೇಕಾಗಿದೆಯೊ ಅದನ್ನು ಈಗ ಕುಶಲ ಅನ್ನಶಾಸ್ತ್ರಜ್ಞನ ಸಲಹೆಯ ಹೊರತು ತೆಗೆದುಕೊಳ್ಳಲು ಬರದಂಥ ಸ್ಥಿತಿಯು ಬಂದುಬಿಟ್ಟಿದೆ.

೯ ಆದ್ದರಿಂದ ಈಗ ಬಹು ಜನರು ಅಡಿಗೆಯನ್ನು ಮಾಡಿಕೊಳ್ಳಲೆಬೇಕಾಗಿದೆ. ಆಹಾರವನ್ನು ಬೇಯಿಸುವುದು, ಸುಡುವುದು ಮತ್ತು ಹುರಿಯುವುದು ಇಷ್ಟೇ ಅಡಿಗೆ ಎನಿಸುವುದು. ಆದರೆ ಮನುಷ್ಯನು ಇಲ್ಲಿಗೇ ನಿಲ್ಲಲಿಲ್ಲ. ಅಡಿಗೆಯೆಂಬ ಸುಧಾರಣೆ(?) ಮಾಡಿದ ಬಳಿಕ ನಾಲಿಗೆ ರುಚಿಯ ಬಲೆಗೆ ಬಿದ್ದು ನಾನಾತರದ ಮಸಾಲೆಗಳನ್ನೂ ಪಕ್ವಾನ್ನಗಳನ್ನೂ ಶೋಧಿಸಿಬಿಟ್ಟನು! ಶರೀರವನ್ನು ಉಳಿಸಿಕೊಳ್ಳುವುದಕ್ಕಾಗಿ ಯಾವ ವಸ್ತುವನ್ನು (ಅಡಿಗೆ) ಔಷಧದಂತೆ ಉಪಯೋಗಿಸಬೇಕಾಗಿತ್ತೊ ಆ ವಸ್ತು ಈಗ ಜೀವನದ ಮಹತ್ವದ ವ್ಯವಸಾಯವಾಗಿದೆ; ಮತ್ತು ಅದಕ್ಕಾಗಿ ಜೀವನದ ಎಷ್ಟೋ ಸಮಯವೂ ಶಕ್ತಿಯೂ ವ್ಯರ್ಥವಾಗಿ ವೆಚ್ಚವಾಗುತ್ತಿದೆ.

೧೦ ಆರೋಗ್ಯದ ದೃಷ್ಟಿಯಿಂದ, ವಿಕಾರಗಳ ದೃಷ್ಟಿಯಿಂದ ಹಾಗೆಯೆ ಸಮಯದ ದೃಷ್ಟಿಯಿಂದ ಮಸಾಲೆ ಹಾಗೂ ನಾನಾತರದ ಸವಿಸವಿ ಆಹಾರ ಪದಾರ್ಥಗಳನ್ನು ಉಪಯೋಗಿಸುವುದು ದೋಷಯುಕ್ತವಾಗಿರುವುದು, ಅಲ್ಲದೆ ತ್ಯಾಜ್ಯವೂ ಆಗಿರುವುದು.

೧೧ ಹಿಂದುಸ್ಥಾನದಲ್ಲಿ ಈಗ ನಾವು ಕಾಯಿಪಲ್ಲೆ ಮತ್ತು ಫಲಗಳನ್ನು ಯಾವ ಪ್ರಮಾಣದಲ್ಲಿ ತಿನ್ನುವೆವೊ ಅದಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಅವನ್ನು ತಿನ್ನತಕ್ಕದ್ದು. ವಿಶೇಷತಃ ಟೊಮ್ಯಾಟೊ, ಮೂಲಂಗಿ, ಸೌತೇಕಾಯಿ ಮುಂತಾದ ಎಷ್ಟೋ ಕಾಯಿಪಲ್ಲೆಗಳನ್ನು ಬೇಯಿಸದೆ ತಿನ್ನುವುದು ಅವಶ್ಯವಿದೆ. ಊಟಕ್ಕೆ ಬೇಳೆಗಿಂತಲೂ ಕಾಯಿಪಲ್ಲೆ, ವಿಶೇಷತಃ ಬೇಯಿಸದೆ ಇದ್ದ ಹಸುರು ತೊಪ್ಪಲು ಮತ್ತು ಕಾಯಿಪಲ್ಲೆ ಹೆಚ್ಚು ಬೇಕು.

೧೨ ಚಹಾ ಮತ್ತು ಕಾಫಿ ಇವು ಅತ್ಯಂತ ಹೊಸ ಚಟಗಳು. ನಮಗೆ ಇಂಥ ಪೇಯಗಳ ಚಟವು ಇದ್ದಿಲ್ಲ. ಇವುಗಳ ಸೇವನೆಯಿಂದ ನಮಗೆ ಯಾವ ಲಾಭವೂ ಆಗಿಲ್ಲ. ಇಷ್ಟೇ ಅಲ್ಲ, ಇವೆರಡೂ ಹಾನಿಕಾರಕ ಪದಾರ್ಥಗಳು. ಚಹದ ತೋಟಗಳಲ್ಲಿ ಮಾನವಹಿಂಸೆಯು ಬಹಳವಾಗುತ್ತಿರುವುದು.

ಇವು ನಮ್ಮ ಆಹಾರದ ವೆಚ್ಚವನ್ನು ವ್ಯರ್ಥವಾಗಿ ಬೆಳೆಯಿಸಿವೆ. ಇದರಿಂದ ಹಳ್ಳಿಗಳಲ್ಲಿ ಹಾಲು ಉಳಿಯುವುದಿಲ್ಲ, ಮತ್ತು ಸಕ್ಕರೆಯ ಉಪಯೋಗವೂ ಹೆಚ್ಚಾಗಿ ಹಾನಿಕರವಾಗುತ್ತಿದೆ.

೧೩. ಚಹಾ, ಕಾಫಿ, ಹೊಗೆಸೊಪ್ಪು, ಅಫೀಮು, ಗಾಂಜಿ ಮತ್ತು ಭಾಂಗುಗಳನ್ನು ಸೇವಿಸುವ ವ್ಯಸನಿಗಳು ತಾವು ಸ್ಥಿರವೀರ್ಯವುಳ್ಳವರೆಂದು ಹೇಳಿಕೊಂಡರೆ ನಂಬಲಾಗದೆಂದು ಎಷ್ಟೋ ಅನುಭವಿಗಳ ಅಭಿಪ್ರಾಯ.

## ೯ ವ್ಯಾಯಾಮ

೧ ಚಿಕ್ಕಂದಿನಿಂದ ತಕ್ಕಷ್ಟು ಶಾರೀರಕ ಶ್ರಮಪಡಬೇಕಾಗುವವರಿಗೆ ಗರಡೀಸಾಧನೆಯ ಅವಶ್ಯಕತೆ ಅಷ್ಟು ಇರುವುದಿಲ್ಲ.

೨ ಕುಳಿತು ಕೆಲಸ ಮಾಡುವವರಿಗೆ, ಸಿಪಾಯಿಗಳಿಗೆ ಅಥವಾ ಉದರನಿರ್ವಾಹಕ್ಕಾಗಿ ಕುಸ್ತಿಮಾಡುವ ಜಟ್ಟಿಗಳಿಗೆ ಮಾತ್ರ ಗರಡೀಮನೆಯ ವ್ಯಾಯಾಮವು ಬೇಕು.

೩ ವ್ಯಾಯಾಮಶಾಲೆಯ ಕಸರತ್ತುಗಳಿಂದ ಮನುಷ್ಯರು ದೀರ್ಘಾಯುಷಿಗಳೂ ನಿರೋಗಿಗಳೂ ಅಥವಾ ಕಲಿಗಳೂ ಶ್ರಮಸಹಿಷ್ಣುಗಳೂ ಆಗಿಯೆ ಆಗುವರೆಂದು ಹೇಳಲಾಗದು; ಈ ತರದ ಅನುಭವವೂ ಬಂದಿಲ್ಲ. ಎಷ್ಟೋ ವ್ಯಾಯಾಮವಿಶಾರದರ ಮೈಕಟ್ಟು ಬಲಿಷ್ಠವಾಗಿದ್ದರೂ ಅವರು ಹೇಡಿಗಳಾಗಿದ್ದಾರೆ. ಕಸರತ್ತಿನ ಹೊರತು ಬೇರೆ ಬಗೆಯ ಪರಿಶ್ರಮವನ್ನು ಹೆಚ್ಚು ಮಾಡಿದ ಕೂಡಲೆ ಮತ್ತು ಬಿಸಿಲು ಚಳಿ ಹೆಚ್ಚು ತಗಲಿದ ಕೂಡಲೆ ಹಣ್ಣಾಗುವ ಮಲ್ಲರೂ ಅನೇಕರಿದ್ದಾರೆ; ಇದೂ ನಮ್ಮ ದೃಷ್ಟಿಗೆ ಬೀಳುವ ಸಂಗತಿ.

೪ ವ್ಯಾಯಾಮಶಾಲೆಯ ಕಸರತ್ತುಗಳು ವಿಕಾರವರ್ಧಕವಿರುವವು. ಅವುಗಳಿಂದ ಸಾಮಾನ್ಯವಾಗಿ ಶರೀರದಲ್ಲಿ ಕಾವು ಹೆಚ್ಚಾಗಿ ಭೋಜನಕ್ಕೂ ಭೋಗವೃತ್ತಿಗೂ ಉತ್ತೇಜನವು ದೊರೆಯುವುದು.

೫ ವ್ಯಾಯಾಮಶಾಲೆಯೊಳಗಿನ ಎಲ್ಲ ಅಂಗಸಾಧನೆಗಳನ್ನು ನಿಷೇಧಿಸಬೇಕೆಂದು ನಮ್ಮ ಅಭಿಪ್ರಾಯವಲ್ಲ. ಉಳಿದ ಅಂಗಸಾಧನೆಗಳಂತೆಯೆ ಅವಕ್ಕೂ ಒಂದು ಮೇರೆ ಇರಬೇಕು.

೬ ಸಂಘವ್ಯಾಯಾಮ, ಎಂದರೆ ಕವಾಯಿತು- ಡ್ರಿಲ್, ಅತ್ಯಂತ ಉಪಯುಕ್ತ ವ್ಯಾಯಾಮ. ಇದು ಎಲ್ಲ ತರುಣತರುಣಿಯರಿಗೂ ಅವಶ್ಯವಾಗಿ ದೊರೆಯಬೇಕು.

೭ ತಿರುಗಾಡುವುದು ಸಾತ್ವಿಕ ವ್ಯಾಯಾಮಗಳಲ್ಲಿ ಒಂದು ಶ್ರೇಷ್ಠ ವ್ಯಾಯಾಮ. ಇದು ಶರೀರದ ಆರೋಗ್ಯಕ್ಕಾಗಿ ಅವಶ್ಯವಾಗಿ ಬೇಕು. ಇದು ವ್ಯಾಯಾಮಗಳ ಅರಸನೆಂದು ಹೇಳುವರು. ಇದು ದಿಟ.

೮ ಬಳಿಕ, ಆಸನಗಳೂ ಪ್ರಾಣಾಯಾಮವೂ ಸಾತ್ವಿಕ ವ್ಯಾಯಾಮಗಳೆನಿಸುವವು. ಈ ವ್ಯಾಯಾಮಗಳ ಉದ್ದೇಶವು ಶರೀರವನ್ನು ಶುದ್ಧ ಮಾಡುವುದೇ ಹೊರತು ಭೋಗಕ್ಕೆ ಅಣಿಮಾಡುವುದಲ್ಲ. ಇವುಗಳಿಂದ ಎಷ್ಟೋ ರೋಗಗಳೂ ಗುಣಹೊಂದುವವು.

೯ ಆದರೆ ಈ ವ್ಯಾಯಾಮಗಳನ್ನು ತಮ್ಮ ಉಪಜೀವನದ ವ್ಯವಸಾಯವನ್ನಾಗಿ ಮಾಡಿಕೊಂಡರೆ ಮತ್ತು ಅವುಗಳಿಂದ ದೊರೆಯುವ ಸಿದ್ಧಿಯ ಬೆನ್ನು ಹಿಡಿದರೆ ಅವುಗಳ ದುರುಪಯೋಗ ಮಾಡಿಕೊಂಡಂತಾಗುವುದು. ಶರೀರದ ಅಶುದ್ಧಿಗಳನ್ನು ಮಲಮೂತ್ರಗಳ ಮುಖಾಂತರ ಹೇಗೆ ಹೊರಗೆ ಹಾಕಬಹುದೋ ಹಾಗೆಯೆ ಆಸನ ಪ್ರಾಣಾಯಾಮಗಳಿಂದಲೂ ಹೊರಗೆ ಹಾಕಿ ಶರೀರವನ್ನು ಸ್ವಚ್ಛಮಾಡಬಹುದು. ಶರೀರವನ್ನು ನಿರ್ಮಲ ಮಾಡುವುದೇ ಇವುಗಳ ಗುರಿ.

## ಏಕಾದಶ ಖಂಡ

## ಶಿಕ್ಷಣ

### ೧ ಶಿಕ್ಷಣದ ಧ್ಯೇಯ

೧ ಸಾ ವಿದ್ಯಾ ಯಾ ವಿಮುಕ್ತಯೇ–ಮುಕ್ತಿಯನ್ನು ದೊರಕಿಸಿಕೊಡುವಂತಹದೇ ವಿದ್ಯೆ, ಉಳಿದುದೆಲ್ಲವೂ ಅವಿದ್ಯೆ.

೨ ಆದ್ದರಿಂದ ಯಾವುದು ಚಿತ್ತಶುದ್ಧಿಯನ್ನು ಮಾಡುವುದಿಲ್ಲವೊ ಮನಸ್ಸನ್ನು ಮತ್ತು ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳಲು ಕಲಿಸುವುದಿಲ್ಲವೊ ಧೈರ್ಯವನ್ನು ಹುಟ್ಟಿಸುವುದಿಲ್ಲವೊ ಸ್ವಾವಲಂಬನವನ್ನೂ ಉಪಜೀವನದ

ಮಾರ್ಗವನ್ನೂ ತೋರಿಸುವುದಿಲ್ಲವೊ ಪಾರತಂತ್ರ್ಯದಿಂದ ಬಿಡುಗಡೆಯಾಗಿ ಸ್ವಾತಂತ್ರ್ಯದಿಂದ ಬಾಳುವ ಕಳಕಳಿ, ಸಾಹಸ ಮತ್ತು ಸಾಮರ್ಥ್ಯವನ್ನು ಹುಟ್ಟಿಸುವುದಿಲ್ಲವೊ ಆ ಶಿಕ್ಷಣದಲ್ಲಿ ಜ್ಞಾನದ ಬೊಕ್ಕಸವೂ ತಾರ್ಕಿಕ ಕೌಶಲ್ಯವೂ ಭಾಷಾಪಾಂಡಿತ್ಯವೂ ಎಷ್ಟೇ ಇದ್ದರೂ ಅದು ಶಿಕ್ಷಣವಲ್ಲ, ಅಪೂರ್ಣ ಶಿಕ್ಷಣ.

## ೨ ಅರಾಷ್ಟ್ರೀಯ ಶಿಕ್ಷಣ

೧ ನೂರಕ್ಕೆ ೮೦-೮೫ ಜನರ ಜೀವನದ ಅವಶ್ಯಕತೆಗಳನ್ನು ಯೋಚಿಸುವುದರ ಬದಲು ನಾಲ್ಕಾರು ಜನರ ಅಥವಾ ರಾಜ್ಯದ ಕೆಲವು ವಿಭಾಗಗಳ ಅವಶ್ಯಕತೆಗಳನ್ನು ಕುರಿತು ಮಾತ್ರ ಯೋಚಿಸುವ ಶಿಕ್ಷಣವು ರಾಷ್ಟ್ರೀಯ ಶಿಕ್ಷಣವೆನಿಸುವುದೆ ಇಲ್ಲ. ಅದು ಅಸತ್ಯ ಶಿಕ್ಷಣವಾಗಿರುವುದರಿಂದ ಅವಿದ್ಯೆಯೆ ಸರಿ.

೨ ಇಂಥ ಶಿಕ್ಷಣವು ಶಿಕ್ಷಿತರ ಮತ್ತು ಅಶಿಕ್ಷಿತರ ನಡುವೆ ಮಹದಂತರವನ್ನುಂಟುಮಾಡಿದೆ; ವಿದ್ವಾಂಸರನ್ನು ಪ್ರಜರ ಮುಂದಾಳುಗಳನ್ನಾಗಿಯೂ ಮಾರ್ಗದರ್ಶಕರನ್ನಾಗಿಯೂ ಪ್ರತಿನಿಧಿಗಳನ್ನಾಗಿಯೂ ಮಾಡುವುದರ ಬದಲು ಅವರನ್ನು ಪ್ರಜೆಗಳಿಂದ ಬೇರ್ಪಡಿಸಿ, ಪ್ರಜೆಗಳ ಜೀವನ ಮತ್ತು ಭಾವಗಳನ್ನರಿಯದವರನ್ನಾಗಿ ಮಾಡಿರುವುದಲ್ಲದೆ ಪ್ರಜಾಪಕ್ಷವನ್ನು ಮಂಡಿಸಲು ಅಯೋಗ್ಯರನ್ನಾಗಿ ಮಾಡಿಬಿಟ್ಟಿದೆ.

೩ ಈ ಶಿಕ್ಷಣವು ತನ್ನ ಪ್ರತಿಷ್ಠೆಯನ್ನು ಬೆಳೆಸಿಕೊಳ್ಳುವುದಕ್ಕಾಗಿ ಭವ್ಯವಾದ ಭವನಗಳನ್ನು ಕಟ್ಟಿಸಿ, ದೊಡ್ಡ ಸಾಧನಗಳನ್ನು ನಿರ್ಮಿಸಿ, ಪುಸ್ತಕಗಳನ್ನು ರಚಿಸಿ, ಮರೀಚಿಕಾಜಲದಂತೆ ಮೋಸಮಾಡುವ ಲಾಭದ ಆಶೆಗಳನ್ನು ದೂರದಿಂದ ತೋರಿಸಿ, ಠೀವಿಯ ಆಡಂಬರವನ್ನು ಜನತೆಯ ಕಣ್ಣೆದುರಿನಲ್ಲಿಟ್ಟು ಜನರನ್ನು ಸಾಲದಲ್ಲಿ ಮುಳುಗಿಸಿಬಿಟ್ಟಿರುವುದು.

೪ ಈ ಶಿಕ್ಷಣವು ಜನತೆಯಲ್ಲಿ ಅನೇಕ ಭ್ರಮೆಗಳನ್ನು ಹುಟ್ಟಿಸಿದೆ. ಉದಾಹರಣೆಗೆ: ಅಕ್ಷರಜ್ಞಾನವೂ ಶಿಕ್ಷಣವೂ ಒಂದೇ, ಅಕ್ಷರಜ್ಞಾನದ ಹೊರತು ಶಿಕ್ಷಣವು ಸಿಗದು, ಶಿಕ್ಷಿತನು ಕೂಲಿಕಾರನಂತೆ ಜೀವಿಸಿದರೆ ಅವನು ಶಿಕ್ಷಣವನ್ನು ಹೀಯಾಳಿಸಿದಂತೆ, ಇಂಗ್ಲಿಷು ಓದಿದವರೆ ಶಿಕ್ಷಿತರು ಇತ್ಯಾದಿ.

೫ ಈ ಶಿಕ್ಷಣವು ಪ್ರಜೆಗಳನ್ನು ಧರ್ಮದಿಂದ ವಿಮುಖರನ್ನಾಗಿ ಮಾಡಿದೆ; ಮತ್ತು ಅನೇಕ ಪೀಳಿಗೆಗಳಿಂದ ನಡೆದು ಬಂದ ಧರ್ಮದ ಮತ್ತು ಸಂಯಮದ ಸಂಸ್ಕಾರಗಳನ್ನು ಸುಟ್ಟುಬಿಡುವ ಕೆಲಸವನ್ನೆ ಮಾಡುತ್ತಿದೆ.

೬ ಚಿತ್ತಶುದ್ಧಿಗೆ ಬೇಕಾಗುವ ಮಹತ್ವಪೂರ್ಣವಾದ ಅಂಗಗಳು ಈಶ್ವರನಲ್ಲಿ ಗುರು-ಹಿರಿಯರು ಮೊದಲಾದವರಲ್ಲಿ ಭಕ್ತಿ, ನೀತಿಪೂರ್ಣ ಜೀವನಕ್ಕೆ ಬೇಕಾದ ಆಗ್ರಹ ಸಂಯಮ ಮತ್ತು ತಪಸ್ಸಿನಲ್ಲಿ ಶ್ರದ್ಧೆ, ಮುಂತಾದ ಅನೇಕ ವಿಷಯಗಳನ್ನು ಕುರಿತು ಆಧುನಿಕ ಶಿಕ್ಷಣವನ್ನು ಪಡೆದವರಲ್ಲಿ ನಾನಾ ಸಂಶಯಗಳನ್ನು ಹುಟ್ಟಿಸಿದೆ; ಅವರನ್ನು ನಾಸ್ತಿಕವಾದಿಗಳನ್ನಾಗಿ ಮಾಡಲು ಯತ್ನಿಸುತ್ತದೆ.

೭ ಮೇಲೆ ವಿವರಿಸಿದ ಪರಿಣಾಮಗಳಿಗೆ ಯಾರಾದರೂ ಹೊರತಾಗಿದ್ದರೆ ಅದು ಈ ಶಿಕ್ಷಣದಿಂದಲ್ಲ, ಆದರೆ ಅವರವರ ಮನೆಯ ಉಚ್ಚವಾದ ವಾತಾವರಣದಿಂದ.

೮ ಈ ಶಿಕ್ಷಣವು ಭೋಗ ಮತ್ತು ಸಂಪತ್ತುಗಳಲ್ಲಿ ಅಚಲಶ್ರದ್ಧೆಯನ್ನು ಹುಟ್ಟಿಸುವುದರಿಂದ ಅವುಗಳನ್ನು ಕಡಿಮೆ ಮಾಡಲು ಅವರಿಗೆ ಧೈರ್ಯವೆ ಸಾಲುವುದಿಲ್ಲ. ಭೋಗಾದಿಗಳು ಕಡಿಮೆಯಾಗಬಹುದೆಂಬ ಬೆದರಿನಿಂದ ಅವರು ಅಂಜುಬುರುಕರಾಗುತ್ತಾರೆ. ಮತ್ತು ಸ್ಪಷ್ಟವಾಗಿ ತೋರುವ ಧರ್ಮವನ್ನು ಆಚರಿಸಲು ತಾವು ಅಸಮರ್ಥರಿದ್ದೇವೆಂದು ಹೇಳುತ್ತಾರೆ.

## ೩ ರಾಷ್ಟ್ರೀಯ ಶಿಕ್ಷಣ

೧ ಹಿಂದುಸ್ತಾನದ ರಾಷ್ಟ್ರೀಯ ಶಿಕ್ಷಣವು ಹಿಂದುಸ್ತಾನದಲ್ಲಿ ನೂರಕ್ಕೆ ೮೦-೮೫ ಜನರು ಯಾವ ತರದ ಜೀವನವನ್ನು ಕಳೆಯಬೇಕಾಗುವುದೋ ಅದನ್ನು ಕುರಿತು ಯೋಚಿಸಿ ಯೋಜಿಸಿದ್ದಿರಬೇಕು.

೨ ಹಿಂದುಸ್ತಾನದಲ್ಲಿ ನೂರಕ್ಕೆ ೮೦-೮೫ ಜನರು ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾಗಿ ಒಕ್ಕಲುತನದಿಂದ ಜೀವಿಸುವರು. ಆದ್ದರಿಂದ ಇವರನ್ನು ಒಳ್ಳೇ ಒಕ್ಕಲಿಗರನ್ನು ಮಾಡುವ ದೃಷ್ಟಿಯಿಂದಲೂ ಒಕ್ಕಲುತನಕ್ಕೆ ಸಂಬಂಧಪಟ್ಟ ಉದ್ಯೋಗಗಳ ಜ್ಞಾನವನ್ನು ಇವರಿಗೆ ಮಾಡಿಕೊಡುವ ದೃಷ್ಟಿಯಿಂದಲೂ ಇವರ ಶಿಕ್ಷಣವು ಯೋಜಿಸಿದ್ದಿರಬೇಕು.

೩ ಶಿಕ್ಷಣದಿಂದ ಜೀವನನಿರ್ವಾಹದ ಪ್ರಶ್ನೆಯು ತೊಲಗಬೇಕು. ಅದಕ್ಕಾಗಿ ಔದ್ಯೋಗಿಕ ಶಿಕ್ಷಣವು ಈ ಶಿಕ್ಷಣದ ಮುಖ್ಯ ಅಂಗವಾಗಿರಬೇಕು.

೪ ಎಲ್ಲಿಯವರೆಗೆ ಉದರನಿರ್ವಾಹದ ಪ್ರಶ್ನೆಯು ಬಿಡಿಸಲ್ಪಡುವುದಿಲ್ಲವೊ ಅಲ್ಲಿಯವರೆಗೆ 'ಸಂಸ್ಕೃತಿ (Culture) ಶಿಕ್ಷಣ' ಇಲ್ಲವೆ 'ಈಶ್ವರೀ ಜ್ಞಾನವನ್ನು ಮಾಡಿಕೊಡುವ ಶಿಕ್ಷಣ' ಮುಂತಾದ ಮಾತುಗಳು ನಿರರ್ಥಕ.

ಈ ತರದ ಶಿಕ್ಷಣವನ್ನು ಹೊಲದಲ್ಲಿ ಇಲ್ಲವೆ ಹಳ್ಳಿಯಲ್ಲಿಯೇ ಕೊಡಬಹುದು. ದೊಡ್ಡ ಊರುಗಳಲ್ಲಿ ಇಲ್ಲವೆ ಪಟ್ಟಣಗಳಲ್ಲಿ ಇದು ದೊರೆಯುವುದಿಲ್ಲ.

೬ ಓದುವುದಕ್ಕೂ ಬರೆಯುವುದಕ್ಕೂ ಕಲಿಸುವುದಕ್ಕಿಂತ ಮೊದಲು ಈ ಶಿಕ್ಷಣವನ್ನು ಕೊಡಲು ಬರುವುದೇ ಇಲ್ಲವೆಂದರೆ ಹಿಂದುಸ್ತಾನದ ಜನರನ್ನು ಸುಶಿಕ್ಷಿತರನ್ನಾಗಿ ಮಾಡಲು ಹತ್ತಿಪ್ಪತ್ತು ಶತಮಾನಗಳು ಬೇಕು.

೭ ಆದರೆ ಅಕ್ಷರಜ್ಞಾನದ (ಓದುಬರಹದ ಜ್ಞಾನ) ಮಾತನ್ನು ವಿರೋಧಿಸದೆ ಅದರ ಹೊರತು ಶಿಕ್ಷಣವನ್ನು ಕೊಡಬಹುದು, ಮತ್ತು ಕೊಡತಕ್ಕದ್ದೆಂದು ಹೇಳತಕ್ಕದ್ದು.

೮ ಓದುಬರಹದ ಜ್ಞಾನವಿಲ್ಲದಿದ್ದರೂ ಮನುಷ್ಯನು ಅಂಕಿ ಮಗ್ಗಿಯನ್ನು ಕಲಿಯಬಲ್ಲನು, ತನ್ನ ಉದ್ಯೋಗಕ್ಕೆ ಬೇಕಾಗುವಂಥ ಜ್ಞಾನಾರ್ಜನೆ ಮಾಡಿಕೊಳ್ಳಬಲ್ಲನು, ಸಾಹಿತ್ಯವನ್ನರಿತುಕೊಳ್ಳಬಲ್ಲನು, ಸಾಹಿತ್ಯವನ್ನು ಕೇಳಬಲ್ಲನು ಮತ್ತು ಕಂಠಸ್ಥಮಾಡಬಲ್ಲನು, ಹಾಗೂ ಸಾಮರ್ಥ್ಯವಿದ್ದರೆ ಸೃಜಿಸಲೂ ಬಲ್ಲನು ಮತ್ತು ಅವನಲ್ಲಿ ಸತ್ಯದ ಸಾಕ್ಷಾತ್ಕಾರದ ಬಗೆಗೆ ಕಳಕಳಿ ಇದ್ದರೆ ಪರಮಾತ್ಮಜ್ಞಾನವನ್ನು ಕೂಡ ಸಂಪಾದಿಸಬಲ್ಲನು.

೯ ವಿದ್ಯಾವಂತರಾದ ನೂರಾರು ಮನುಷ್ಯರ ಜ್ಞಾನಭಂಡಾರವು ಕೂಡ ಅನೇಕ ಗ್ರಂಥಗಳನ್ನು ಓದಿದ ಬಳಿಕವೂ ಅತ್ಯಲ್ಪವಿರುವುದು ನಮಗೆ ಎಷ್ಟೋ ಸಲ ಕಂಡುಬರುತ್ತದೆ. ಅವರು, ಲಕ್ಷಾಂತರ ಜನರಿಗೆ ತಮ್ಮಷ್ಟೆ ಜ್ಞಾನಭಂಡಾರವನ್ನು ಸಂಪಾದಿಸಲು ಓದಬೇಕೆಂದು ಹೇಳಿ ಅವರನ್ನು ಓದುಬರಹದ ತೊಡಕಿನಲ್ಲಿ ಸಿಕ್ಕಿಸುವುದಕ್ಕಿಂತಲೂ ಅವರಿಗೆ ಬಾಯಿಂದ ಶಿಕ್ಷಣವನ್ನು ಕೊಟ್ಟರೆ ಅನೇಕ ವರ್ಷಗಳಲ್ಲಿ ಕೊಡಬಹುದಾದ ಜ್ಞಾನವನ್ನು ಕೆಲವೇ ವರ್ಷಗಳಲ್ಲಿ ಕೊಡಬಹುದೆಂಬ ಅನುಭವವುಂಟಾಗುವುದು.

೧೦ ಮೇಲಾಗಿ ಬಡ ಹಿಂದುಸ್ತಾನದ ಶಿಕ್ಷಣಪದ್ಧತಿಯು ಬಹಳ ಹಣವನ್ನು ವೆಚ್ಚಮಾಡಬೇಕಾದ ಪದ್ಧತಿಯಾಗಿರತಕ್ಕದ್ದಲ್ಲ.

೧೧ ಆದ್ದರಿಂದ ಈ ಶಿಕ್ಷಣವನ್ನು ಬೇಗನೆ ಪೂರ್ತಿಗೊಳಿಸಬೇಕೆಂದು ಯಾರೂ ಹವ್ಯಾಸಪಡಕೂಡದು. ಉದ್ಯೋಗಮಾಡುತ್ತ, ನಿರ್ವಾಹವನ್ನು ಸಾಗಿಸುತ್ತ ಇದನ್ನು ಆಜನ್ಮಪರಿಯಂತ ಪಡೆಯುತ್ತಿರಬಹುದು. ನಮ್ಮ ಪದ್ಧತಿಯು ಇರಬೇಕಾದುದು ಹೀಗೆಯೇ.

೧೨ ಈ ಶಿಕ್ಷಣವು ಹೆಚ್ಚಾಗಿ ಗ್ರಂಥಗಳನ್ನವಲಂಬಿಸಿ ಇರಕೂಡದು. ಗ್ರಂಥಗಳು ಬೇಕಾಗುವುದೆ ಇಲ್ಲ, ಅವು ಇರಲೇಕೂಡದು ಎಂದು ನಮ್ಮ ಅಭಿಪ್ರಾಯವಲ್ಲ. ಆದರೆ ಶಿಕ್ಷಣವನ್ನು ವಿಶೇಷವಾಗಿ ಓದಿಗಿಂತಲೂ ಶ್ರವಣ, ದರ್ಶನ ಮತ್ತು ಕ್ರಿಯೆಯ ಮುಖಾಂತರವಾಗಿಯೆ ಕೊಡತಕ್ಕದ್ದು.

## ೪ ಉದ್ಯೋಗದ ಮೂಲಕ ಶಿಕ್ಷಣ

೧ ಶಿಕ್ಷಣದ ಪ್ರಾರಂಭವು ಅಕ್ಷರಜ್ಞಾನದಿಂದ ಆಗುವುದರ ಬದಲು ಔದ್ಯೋಗಿಕ ಶಿಕ್ಷಣದಿಂದ, ಅದರ ಮುಖಾಂತರ ಆಗಬೇಕು. ಯಾವ ಉದ್ಯೋಗಗಳಿಂದ ಉದರನಿರ್ವಾಹವು ಸುಸೂತ್ರವಾಗಿ ಸಾಗುವುದೊ ಅವುಗಳ ಬಗೆಗೆ ಬಾಲಕರಿಗೆ ಚಿಕ್ಕಂದಿನಿಂದಲೆ ಜ್ಞಾನವನ್ನು ಮಾಡಿಕೊಡತಕ್ಕದ್ದು.

೨ ಉದ್ಯೋಗವು ಉದರನಿರ್ವಾಹವನ್ನು ಸಾಗಿಸಬಲ್ಲದ್ದು, ಜನರ ಜೀವನಕ್ಕೆ ಉಪಯುಕ್ತವಾದ ವಸ್ತುವನ್ನು ಹುಟ್ಟಿಸುವಂತಹದು ಇರಬೇಕು.

೩ ಆ ಆ ವಸ್ತುವನ್ನು ಉತ್ಪಾದಿಸುತ್ತಿರುವಾಗಲೆ ಹುಡುಗರಿಗೆ ಆ ಆ ಉದ್ಯೋಗಕ್ಕೆ ಸಂಬಂಧಿಸಿದ ಗಣಿತ, ಸಾಹಿತ್ಯ, ವಿಜ್ಞಾನ, ಚಿತ್ರಕಲೆ, ಇತಿಹಾಸ, ಭೂಗೋಲ ಮುಂತಾದ ವಿಷಯಗಳನ್ನು ತಿಳಿಹೇಳಬೇಕು. ಹೀಗೆ ಉದ್ಯೋಗವು ಶಿಕ್ಷಣದ ಕೇವಲ ಒಂದು ವಿಷಯವಾಗುವುದರ ಬದಲು ಇಡಿಯ ಶಿಕ್ಷಣದ ಮತ್ತು ಮನೋವಿಕಾಸದ ಮಾಧ್ಯಮವಾಗಬೇಕು.

೪ ಹೀಗೆ, ಉದ್ಯೋಗಮುಖಾಂತರ ಶಿಕ್ಷಣಕೊಡುವ ಸಂಸ್ಥೆಯು ತಕ್ಕಮಟ್ಟಿಗಾದರೂ ಸ್ವಾವಲಂಬಿಯಾಗುವ ವರೆಗೆ ಆ ಸಂಸ್ಥೆಯ ಇಲ್ಲವೆ ವಿದಾರ್ಥಿಗಳ ಪ್ರಗತಿ ತಕ್ಕಷ್ಟಾಗಿದೆಯೆಂದು ಹೇಳಲಾಗುವುದಿಲ್ಲ. ಪ್ರತಿಯೊಬ್ಬನ ಪ್ರತಿಯೊಂದು ಕ್ಷಣವೂ ಉಪಯುಕ್ತ ವಸ್ತುನಿರ್ಮಾಣದಲ್ಲಿ ಕಳೆಯಬೇಕೆಂಬ ಮುಖ್ಯ ತತ್ವದ ಜ್ಞಾನದಿಂದ ಕಾರ್ಯ ನಡೆದರೆ ಆರ್ಥಿಕೋನ್ನತಿ ಆಗಿಯೆ ತೀರಬೇಕೆಂದು ಗಾಂಧೀಜಿಯವರ ಮತ.

೫ ಒಕ್ಕಲುತನ ಮತ್ತು ವಸ್ತ್ರದ ಉದ್ಯೋಗ ಇವೆರಡೂ ಹಿಂದುಸ್ತಾನದ ರಾಷ್ಟ್ರೀಯ ಉದ್ಯೋಗಗಳು. ಆದ್ದರಿಂದ ಇವೆರಡೂ ಉದ್ಯೋಗಗಳ ಪ್ರಾಥಮಿಕ ಜ್ಞಾನವನ್ನು ಮಾಡಿಕೊಡುವುದಕ್ಕೆ ಪ್ರತಿಯೊಂದು ಪಾಠಶಾಲೆಯಲ್ಲಿಯೂ ಅನುಕೂಲತೆಗಳು ಇರತಕ್ಕದ್ದು.

೬ ಇವೆರಡೂ ಉದ್ಯೋಗಗಳ ಪ್ರಾಥಮಿಕ ಜ್ಞಾನವನ್ನು ಸರ್ವರೂ ಸಂಪಾದಿಸುವುದು ಅವಶ್ಯ. ಏಕೆಂದರೆ, ಇವುಗಳಿಂದ ಉಪಜೀವನ

ಮಾಡುವ ಬಯಕೆ ಇಲ್ಲದವರಿಗೂ ಪೂರ್ಣ ಶಿಕ್ಷಣದ ಮತ್ತು ಇಂದ್ರಿಯ ಶಿಕ್ಷಣದ ದೃಷ್ಟಿಯಿಂದಲೂ ಈ ಜ್ಞಾನವು ಅತ್ಯಂತ ಮಹತ್ವದ್ದು.

೭ ಒಕ್ಕಲುತನ ಮತ್ತು ವಸ್ತ್ರದ ಉದ್ಯೋಗಗಳಿಗೆ ಬಡಿಗತನ, ಕಮ್ಮಾರಿಕೆ, ಬಣ್ಣಗಾರಿಕೆ ಮುಂತಾದ ಉದ್ಯೋಗಗಳ ನೆರವೂ ಬೇಕು. ಆದ್ದರಿಂದ ಪ್ರತಿಯೊಬ್ಬ ಒಕ್ಕಲಿಗನಿಗೂ ನೇಕಾರನಿಗೂ ಇವುಗಳ ಸಾಮಾನ್ಯ ಜ್ಞಾನವನ್ನು ಮಾಡಿಕೊಡಬೇಕು.

೮ ಕಬ್ಬು, ನೀಲಿ, ಎಣ್ಣೆಕಾಳುಗಳ ಒಕ್ಕಲುತನ, ಸುತ್ತುಮುತ್ತಲಿನ ಅರಣ್ಯದಲ್ಲಿ ದೊರೆಯುವ ವನಸ್ಪತಿ ಮುಂತಾದವುಗಳ ಉಪಯೋಗ, ಮುಂತಾದ ಅನೇಕ ತರದ ಉದ್ಯೋಗಗಳನ್ನು ಶೋಧಿಸಿ ಅರಳಿಸಬಹುದು, ಬೆಳೆಸಬಹುದು. ಈ ಉದ್ಯೋಗಗಳ ಶಿಕ್ಷಣವನ್ನು ಅಲ್ಲಿಯೆ ಕೊಡತಕ್ಕದ್ದು.

## ೫ ಮಕ್ಕಳ ಶಿಕ್ಷಣ

೧ ಮಕ್ಕಳ ಶಿಕ್ಷಣವು ಮೊದಲಾಗತಕ್ಕದ್ದು ಅಕ್ಷರಜ್ಞಾನದ ಮೂಲಕ ವಲ್ಲ, ಸ್ವಚ್ಛತೆಯ ಮೂಲಕ.

೨ ಮಕ್ಕಳ ಶಿಕ್ಷಕನು ( ಅಥವಾ ಶಿಕ್ಷಿಕೆಯು ) ಮಕ್ಕಳಿಗೆ ವರ್ಣಮಾಲೆ ಯನ್ನು ಕಲಿಸಲು ಹಾತೊರೆಯಕೂಡದು. ಅವರಿಗೆ ತಮ್ಮ ಕೈಕಾಲು, ಮೂಗು, ಕಣ್ಣು, ಹಲ್ಲು, ಉಗುರು ಮುಂತಾದವುಗಳನ್ನು ಚೊಕ್ಕಟ ವಾಗಿಡುವುದಕ್ಕೂ ಸ್ನಾನಮಾಡುವುದಕ್ಕೂ ಬಟ್ಟೆಗಳನ್ನು ನಿರ್ಮಲಮಾಡುವು ದಕ್ಕೂ ಮೂಗು ಮುಂತಾದ ಅವಯವಗಳನ್ನು ಕೈವಸ್ತ್ರದಿಂದಲೇ ಒರೆಸಿ ಕೊಳ್ಳುವುದಕ್ಕೂ ಕಲಿಸತಕ್ಕದ್ದು.

೩ ಆ ಮೇಲೆ ಶಿಕ್ಷಕನು ಮಕ್ಕಳ ಕೈಯಲ್ಲಿ ಕದಿರುಂಡಿಗೆ (ತಕಲಿ) ಮತ್ತು ರಾಟೆ (ಚರಕ) ಯನ್ನು ಕೊಟ್ಟು ನೂಲುವುದಕ್ಕೆ ಬೇಕಾಗುವ ಎಲ್ಲ ಕ್ರಿಯೆಗಳನ್ನು ಸಮಾಧಾನದಿಂದ ಕಲಿಸಿ ಅದರ ಅಭ್ಯಾಸಮಾಡಿಸಬೇಕು.

೪ ಅವರಿಗೆ ಓದುಬರಹ ಬರುವ ತನಕ ಅವರನ್ನು ಅಜ್ಞಾನದಲ್ಲಿಡ ಕೂಡದು. ಚಿಕ್ಕ ಕತೆಗಳ ಮುಖಾಂತರ ಇತಿಹಾಸ ಭೂಗೋಲಗಳ ಜ್ಞಾನವನ್ನೂ, ಕತೆ–ಭಜನೆಯ ಮುಖಾಂತರ ಧರ್ಮದ ಜ್ಞಾನವನ್ನೂ, ಪ್ರತ್ಯಕ್ಷ ವಸ್ತುಗಳನ್ನು ತೋರಿಸಿ ಪದಾರ್ಥವಿಜ್ಞಾನದ ಜ್ಞಾನವನ್ನೂ ವನಸ್ಪತಿ ಭೂಮಿ ಆಕಾಶಗಳ ಜ್ಞಾನವನ್ನೂ ಮಾಡಿಕೊಡಬೇಕು.

ಪ್ರತ್ಯಕ್ಷ ಪದಾರ್ಥಗಳ ಮುಖಾಂತರ ಅಂಕಗಣಿತವನ್ನು ಕಲಿಸಬೇಕು. ಈ ರೀತಿ ಓದುಬರಹ ಬರುವತನಕ ಕನ್ನಡ ಮೂರನೆಯ ನಾಲ್ಕನೆಯ ತರಗತಿಯ ವರೆಗಿನ ಜ್ಞಾನವನ್ನು ಮಾಡಿಕೊಡಬೇಕು.

೫ ಇದಲ್ಲದೆ ಅಕ್ಷರಗಳನ್ನು ಬರೆಸುವ ಪೂರ್ವದಲ್ಲಿ ಅವರಿಗೆ ಚಿತ್ರ ಗಳನ್ನೂ ಸುಳಿವುಗಳನ್ನೂ ಬರೆಯಲು ಕಲಿಸಬೇಕು. ಮತ್ತು ತಮ್ಮ ವಿಚಾರಗಳನ್ನು ಚಿತ್ರಗಳ ಮುಖಾಂತರವಾಗಿಯೆ ತಿಳಿಸಲು ಕಲಿಸಬೇಕು.

೬ ಭಜನೆಯ ಅನೇಕ ಪದಗಳನ್ನೂ ಶ್ಲೋಕಗಳನ್ನೂ ಕವಿತೆಗಳನ್ನೂ ಮುಖೋದ್ಗತ ಮಾಡಿಸಬೇಕು, ಉಚ್ಚಾರವನ್ನು ತಿದ್ದಬೇಕು, ಅಲ್ಲದೆ ನಾನಾ ಬಗೆಯ ಸಾಹಿತ್ಯವನ್ನು ಕಂಠಸ್ಥಮಾಡಿಸಬೇಕು.

೭. ತದನಂತರ ಸುಂದರವಾಗಿಯೂ ಸ್ಪಷ್ಟವಾಗಿಯೂ ಅಕ್ಷರಗಳನ್ನು ಬರೆಯಲು ಕಲಿಸಬೇಕು. ಇಷ್ಟು ತಡಮಾಡಿ ಅಕ್ಷರಜ್ಞಾನ ಮಾಡಿಸು ವುದರಿಂದ ಮಕ್ಕಳ ಸಮಯವನ್ನು ನಷ್ಟಪಡಿಸಿದಂತಾಗುವುದಿಲ್ಲವೆಂದು ಅನುಭವವಾಗುವುದು.

## ೬ ಹಳ್ಳಿಗರ ಶಿಕ್ಷಣ

೧ ಅಕ್ಷರಜ್ಞಾನದ ನಂತರವೇ ಶಿಕ್ಷಣ ಹೊಂದತಕ್ಕದ್ದು ಎಂಬ ತಿಳಿವಳಿಕೆಯನ್ನು ಹಳ್ಳಿಗಳ ವಯೋವೃದ್ಧರು ಬಿಟ್ಟುಬಿಡುವುದು ಅವಶ್ಯ.

೨ ಶಕ್ತಿ ಮತ್ತು ಉತ್ಸಾಹವಿದ್ದವರಿಗೆ ಅಕ್ಷರಜ್ಞಾನವನ್ನು ಮಾಡಿ ಕೊಡಲು ಯತ್ನಿಸುವುದು ಯೋಗ್ಯವಾದದ್ದು. ಇದಕ್ಕೆ ಅವರಿಗೆ ಉತ್ತೇ ಜನವನ್ನೂ ಕೊಡತಕ್ಕದ್ದು, ಮತ್ತು ಅವರಿಗಾಗಿ ತಕ್ಕಷ್ಟು ಹೆಚ್ಚು ಅನುಕೂಲತೆಗಳನ್ನೂ ಮಾಡಿಕೊಡತಕ್ಕದ್ದು.

೩ ಇಳಿವಯಸ್ಸಿನಲ್ಲಿ ಓದುಬರಹ ಕಲಿಯುವ ಇಚ್ಛೆಯಾಗುವುದು ಕಠಿಣ. ಆದರೆ ಇಂಥವರು ಪ್ರೌಢರ ಪಾಠಶಾಲೆಗೆ ಬರಲೇಕೂಡದೆಂಬ ನಿಯಮವಿರಕೂಡದು.

೪ ಹಳ್ಳಿಗಳ ಪುಸ್ತಕಭಂಡಾರವು ಚಿಕ್ಕದೆ ಇರಬಲ್ಲದು. ಹಳ್ಳಿಗರಲ್ಲಿ ಪುಸ್ತಕಗಳನ್ನು ಕೊಳ್ಳುವ ಶಕ್ತಿಯು ತೀರ ಕಡಿಮೆ ಇರುವುದು; ಸ್ವಲ್ಪ ಹೆಚ್ಚುಕಡಿಮೆ ಓದುಬರಹ ಬಂದಕೂಡಲೆ ಅವರು ತಮ್ಮ ಜ್ಞಾನಭಂಡಾರ ವನ್ನು ತಾವೇ ಬೆಳೆಸಿಕೊಳ್ಳಲು ಸಮರ್ಥರಾಗುತ್ತಾರೆಂಬುದು ಅನುಭವ ದಿಂದ ಇನ್ನೂ ಸಿದ್ಧವಾಗಿಲ್ಲ.

೫ ಆದ್ದರಿಂದ, ಶಿಕ್ಷಿತರು ಇತರರಿಗೆ ಓದಿ ತೋರಿಸಿ, ತಿಳಿಸಿ ಮತ್ತು ವ್ಯಾಖ್ಯಾನಗಳನ್ನು ಕೊಟ್ಟು ಕಲಿಸಿದರೆ ಕಲಿತವರು ಎಷ್ಟು ಜ್ಞಾನವನ್ನು ಸಂಪಾದಿಸಿಕೊಳ್ಳಬಲ್ಲರೊ ಅಷ್ಟೇ ಜ್ಞಾನವನ್ನು ಓದುಬರಹ ಬರದ ಹಳ್ಳಿಗನೂ ಸಂಪಾದಿಸಿಕೊಳ್ಳಬಲ್ಲನು.

೬ ಓದುಬರಹ ಬಂದಮಾತ್ರಕ್ಕೇ ಅರಿತುಕೊಳ್ಳುವ ಶಕ್ತಿಯು ವೃದ್ಧಿ ಹೊಂದುತ್ತದೆಂದು ಹೇಳಲಾಗುವುದಿಲ್ಲ. ಎಷ್ಟೋ ಸಲ ಶ್ರವಣದಿಂದ ಸಂಪಾದಿಸಿದ ಹಳ್ಳಿಗನ ಜ್ಞಾನವು ಶಿಕ್ಷಿತನ ಜ್ಞಾನಕ್ಕಿಂತಲೂ ಮಿಗಿಲಾಗಿರುವುದೆಂದು ಕಂಡುಬರುತ್ತದೆ.

೭ ಜ್ಞಾನದ ಝರಿಯು ಅವಲೋಕನ, ಅನುಭವ ಮತ್ತು ವಿಚಾರ ಶಕ್ತಿಯಲ್ಲಿರುವುದು, ಪುಸ್ತಕಗಳಲ್ಲಿ ಅಲ್ಲ. ಈ ಮಾತನ್ನು ನಾವು ಮರೆತು ಬಿಟ್ಟಿರುವುದರಿಂದ ಪುಸ್ತಕಗಳ ಜ್ಞಾನಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟು ಅವನ್ನೆ ಅವಲಂಬಿಸಿದ್ದೇವೆ.

## ೭ ಸ್ತ್ರೀಶಿಕ್ಷಣ

೧ ಶಿಕ್ಷಣವನ್ನು ಪಡೆಯಲು ಪುರುಷರಂತೆ ಸ್ತ್ರೀಯರಿಗೂ ಸಂಪೂರ್ಣ ಅಧಿಕಾರವುಂಟು. ಶಿಕ್ಷಣ ಪಡೆಯುವುದಕ್ಕೆ ಪುರುಷರಷ್ಟೇ ಅನುಕೂಲತೆಗಳು ಸ್ತ್ರೀಯರಿಗೂ ಇರತಕ್ಕದ್ದು.

೨ ಪುರುಷನಿಗಿಂತಲೂ ಸ್ತ್ರೀಯ ಮಟ್ಟ ಮತ್ತು ಅಧಿಕಾರವು ಕಡಿಮೆ ಇರುವುದು ಎಂಬ ಭಾವನೆಯನ್ನು ನಿರ್ಮೂಲಮಾಡುವುದು ಒಳಿತು.

೩ ಶಿಕ್ಷಣವನ್ನು ಪಡೆಯಲು ಪುರುಷರಂತೆ ಸ್ತ್ರೀಯರಿಗೂ ಬಂಧನವಿರಕೂಡದು. ಆದರೆ ನೂರಕ್ಕೆ ೯೯ ಸ್ತ್ರೀಯರು ಮಾತೃಪದವನ್ನು ಪಡೆಯಬೇಕಾಗುವುದೆಂಬುದನ್ನು ಗಮನದಲ್ಲಿಟ್ಟುಕೊಂಡು ಶಿಕ್ಷಣದ ಏರ್ಪಾಡು ಮಾಡತಕ್ಕದ್ದು.

೪ ಒಕ್ಕಲಿಗರೂ ನೇಕಾರರೂ ಅಲ್ಲದವರಿಗೂ ಹೇಗೆ ಆ ಉದ್ಯೋಗಗಳ ಪ್ರಾಥಮಿಕ ಜ್ಞಾನವಿರುವದು ಒಳ್ಳೆಯದೊ ಹಾಗೆಯೆ ಮಾತೃಪದವನ್ನು ಪಡೆಯಲು ಬೇಡವಾದ ಮತ್ತು ಮನೆತನವನ್ನು ನಡೆಸಿಕೊಂಡು ಹೋಗುವುದು ಬೇಡವಾದ ಸ್ತ್ರೀಗೂ ಮಾತೃತ್ವದ ಶಿಕ್ಷಣವನ್ನೂ ಗೃಹಕರ್ಮದ ಶಿಕ್ಷಣವನ್ನೂ ಕೊಡುವುದು ಒಳಿತು.

## ೮ ಧಾರ್ಮಿಕ ಶಿಕ್ಷಣ

೧ ಧಾರ್ಮಿಕ ಶಿಕ್ಷಣಕ್ಕೆ ಆಸ್ಪದವಿಲ್ಲದ ಶಿಕ್ಷಣಕ್ರಮವು ಶಿಕ್ಷಣವೆನಿಸಿಕೊಳ್ಳಲೂ ಯೋಗ್ಯವಲ್ಲ.

೨ ಯಾವ ಬಾಲಕನು ಯಾವ ಧರ್ಮದಲ್ಲಿ ಜನ್ಮವೆತ್ತುವನೋ ಅವನಿಗೆ ಆ ಧರ್ಮದ ಮುಖ್ಯ ಗ್ರಂಥಗಳ, ಮಹಾಪುರುಷರ, ಸಾಧುಸಂತರ, ಮತ್ತು ಆ ಧರ್ಮದ ಮುಖ್ಯ ಸಿದ್ಧಾಂತಗಳ ವಿಷಯದ ಶ್ರದ್ಧಾಪುರಸ್ಸರ ಜ್ಞಾನವನ್ನು ಮಾಡಿಕೊಡತಕ್ಕದ್ದು.

೩ ಈ ಸಂದರ್ಭದಲ್ಲಿ ಧರ್ಮವೆಂದರೆ ವೈದಿಕ, ಮುಸಲ್ಮಾನ, ಕ್ರಿಸ್ತ, ಯಹುದಿ, ಪಾರಸಿ, ಶಿಖ್, ಜೈನ, ಬುದ್ಧ ಮುಂತಾದ ಧರ್ಮಗಳೇ ಹೊರತು ಈ ಧರ್ಮಗಳಿಂದ ಹುಟ್ಟಿದ ಸಂಪ್ರದಾಯಗಳು, ಉಪಶಾಖೆಗಳು ಅಲ್ಲವೆಂದು ತಿಳಿಯತಕ್ಕದ್ದು. ಸಂಪ್ರದಾಯದ ಮತ್ತು ಉಪಶಾಖೆಗಳ ಸಂಸ್ಕಾರವು ಆ ಆ ಸಂಪ್ರದಾಯದ ಸಂಸ್ಥೆಗಳಿಂದಲೆ ದೊರೆಯಬಲ್ಲದು.

೪ ಬಾಲಕನಿಗೆ ಅವನ ಧರ್ಮದ ಹೊರತು ಉಳಿದ ಮಹಾನ್ ಧರ್ಮಗಳ ಸಾಮಾನ್ಯ ಜ್ಞಾನವನ್ನೂ ಸಮಭಾವನೆಯಿಂದ ಕೊಡಿಸಲು ಯತ್ನಿಸಬೇಕು.

೫ ಮನುಷ್ಯನ ಶರೀರರಕ್ಷಣೆಗಾಗಿ ಆಹಾರ, ಶ್ರಮ ಮತ್ತು ವಿಶ್ರಾಂತಿ ಅವಶ್ಯವಾಗಿ ಬೇಕಾಗುವಂತೆ ಚಿತ್ತದ ಉನ್ನತಿಗಾಗಿ ಧರ್ಮದ ಆಧಾರವು ಬೇಕೇಬೇಕು. ಪ್ರತಿಯೊಂದು ಧರ್ಮವೂ ಇಂಥ ಆಧಾರವನ್ನೀಯಬಲ್ಲದು. ಆದ್ದರಿಂದ ಧರ್ಮಾಂತರ ಮಾಡುವ ಅವಶ್ಯಕತೆಯೆ ಉಂಟಾಗುವುದಿಲ್ಲ. ಪ್ರತಿಯೊಂದು ಧರ್ಮದ ಪ್ರಚಾರವಾದದ್ದೂ ಮನುಷ್ಯನಿಂದಲೆ. ಆದ್ದರಿಂದ ಅದರಲ್ಲಿ ದೋಷಗಳು ಇದ್ದೇ ಇರುವವು, ಮತ್ತು ಅನೇಕ ದೋಷಗಳು ಆಗಾಗ ಉಂಟಾಗುತ್ತಲೂ ಇರುವವು. ಈ ದೋಷಗಳನ್ನು ಆಗಾಗ ಪರಿಹರಿಸಿ ಅದನ್ನು ಪರಿಶುದ್ಧ ಮಾಡಬೇಕಾಗುತ್ತದೆ. ಹೀಗಿದ್ದರೂ ಯಾವ ಧರ್ಮವೂ ಸರ್ವಥಾ ತ್ಯಾಜ್ಯವಲ್ಲ. ಮೇಲೆ ಹೇಳಿದ ಸಂಸ್ಕಾರವು ಧಾರ್ಮಿಕಶಿಕ್ಷಣದಿಂದ ನಿರ್ಮಾಣವಾಗುವಂತೆ ಯತ್ನಿಸತಕ್ಕದ್ದು.

೬ ಭಿನ್ನ ಭಿನ್ನ ಮಾನವಸಮಾಜಗಳಲ್ಲಿ ಭಿನ್ನ ಭಿನ್ನ ಧರ್ಮಗಳು ಹುಟ್ಟಿರುವುದರಿಂದ ಅವುಗಳಲ್ಲಿಯ ಸಮಾಜರಚನೆ, ವಿಧಿವಿಧಾನ ಮತ್ತು ರೂಢಿ ಇವುಗಳಲ್ಲಿ ಪರಸ್ಪರ ವಿರೋಧಿಯೆನಿಸುವ ಭೇದಗಳು ಇದ್ದರೂ ಪ್ರತಿ

ಯೊಂದು ಧರ್ಮದಲ್ಲಿ ಸತ್ಯರೂಪೀ ಪರಮಾತ್ಮನ ಶೋಧ ಮತ್ತು ಅವನ ಆಧಾರ,ನೀತಿಪರಾಯಣತೆಯು ಮತ್ತು ಸಂಯಮೀ ಜೀವನ,ಪರರಿಗೋಸ್ಕರ ತಾನು ಸವೆದುಹೋಗಬೇಕೆನ್ನುವ ಮತ್ತು ಸ್ವಾರ್ಥಕ್ಕಿಂತಲೂ ಪರರ ಹಿತ ವನ್ನು ಸಾಧಿಸಬೇಕೆನ್ನುವ ವೃತ್ತಿ ಇವು ಎಲ್ಲ ಧಾರ್ಮಿಕ ಜೀವನದ ಸಾಮಾನ್ಯ ಅಂಗಗಳು. ವಿಸ್ತಾರವಾದ ಕ್ಷೇತ್ರದಲ್ಲಿ ಈ ಸಂಸ್ಕಾರಗಳು ಯಾವಾಗಲೂ ಹೊಂದುವ ವಿಕಾಸವೆ ಧಾರ್ಮಿಕ ಜೀವನವಿಕಾಸ. ಆದ್ದ ರಿಂದ ಧಾರ್ಮಿಕ ಶಿಕ್ಷಣದಲ್ಲಿ ಈ ಅಂಗಗಳ ಮಹತ್ವವನ್ನು ತಿಳಿಸಿ, ಬಾಹ್ಯ ಭೇದಗಳು ಗೌಣವೆಂದು ಅರಿತುಕೊಳ್ಳಲು ಎಲ್ಲರಿಗೂ ಕಲಿಸತಕ್ಕದ್ದು.

## ೯ ಶಿಕ್ಷಣದ ಮಾಧ್ಯಮ

೧ ಉಚ್ಚಾತಿ ಉಚ್ಚ ಶಿಕ್ಷಣವನ್ನು ಕೂಡ ಸ್ವಭಾಷೆಯ ಮೂಲಕವೇ ಕೊಡತಕ್ಕದ್ದು.

೨ ಇಂಗ್ಲಿಷಿನಂಥ ಪೂರ್ಣ ಪರದೇಶೀ ಭಾಷೆಯನ್ನು ಶಿಕ್ಷಣದ ಬೋಧ ಭಾಷೆಯನ್ನಾಗಿ ಮಾಡಿಕೊಂಡು ನಾವು ಶಿಕ್ಷಣಕ್ಕಾಗಿ ಪಟ್ಟ ಹಾಗೂ ಪಡು ತ್ತಿರುವ ಪರಿಶ್ರಮವು ವ್ಯರ್ಥವಾಗಿದೆ.

೩ ಇಂಗ್ಲಿಷ್ ಜ್ಞಾನವಿಲ್ಲದಿದ್ದರೆ ಉಚ್ಚ ಶಿಕ್ಷಣವನ್ನು ಪಡೆಯಲಾಗು ವುದೇ ಇಲ್ಲ ಎಂಬುದು ಈಗಿನ ಸ್ಥಿತಿ. ಇದು ಕರುಣಾಜನಕವೂ ಲಜ್ಜಾ ಸ್ಪದವೂ ಆಗಿದೆ.

೪ ಶಿಕ್ಷಣವು ಇನ್ನೂ ಮನೆಮನೆಗೂ ಹಳ್ಳಿಹಳ್ಳಿಗೂ ಮುಟ್ಟಿಲ್ಲ. ಶಿಕ್ಷಣ ವನ್ನು ಸ್ವಭಾಷೆಯ ಮೂಲಕ ಕೊಡದಿರುವುದೇ ಹೀಗಾಗಲು ಮುಖ್ಯ ಕಾರಣ.

೫ ಇಂಗ್ಲಿಷೇ ಶಿಕ್ಷಣದ ಮಾಧ್ಯಮವೆಂದು ನಿರ್ಧರಿಸಿದ್ದರಿಂದ ದೇಶೀ ಭಾಷೆಗಳ ಉನ್ನತಿಯಾಗಿರುವುದಿಲ್ಲ. ಇಂಗ್ಲಿಷಿನಲ್ಲಿದ್ದ ವಿಚಾರಗಳನ್ನು ಸಂಸ್ಕೃತದಲ್ಲಾಗಲಿ ಪಾರಸಿಯಲ್ಲಾಗಲಿ ಅನುವಾದಿಸಿ ಸ್ವಭಾಷೆಯ ಪ್ರತ್ಯಯ ಗಳನ್ನು ಹಚ್ಚಿ ಮಾಡುವ ಸೇವೆಯೆ ಶಿಕ್ಷಿತರು ಮಾಡುವ ಸ್ವಭಾಷಾ ಸೇವೆಯೆನಿಸಿದೆ. ಆದ್ದರಿಂದಲೆ ಈ ಸಾಹಿತ್ಯವು ಸಾಮಾನ್ಯ ಜನತೆಯಲ್ಲಿ ಪ್ರಚಾರವಾಗಿಲ್ಲ; ಮತ್ತು ಅದರಿಂದ ಯಾವ ಪರಿಣಾಮವೂ ಆಗಿಲ್ಲ.

೬ ಪರಭಾಷೆಯು ಶಿಕ್ಷಣದ ಮಾಧ್ಯಮವಾಗಿದ್ದರಿಂದ ಆಗಿರುವ ಇನ್ನೂ ಒಂದು ದುಷ್ಪರಿಣಾಮವೇನೆಂದರೆ ಎಷ್ಟೋ ಶಿಕ್ಷಿತರು ಇಂಗ್ಲಿಷಿನಲ್ಲಿ

ಮಾತ್ರವೇ ಯೋಚಿಸಬಲ್ಲರು, ಸ್ವಭಾಷೆಯಲ್ಲಿ ಯೋಚನೆ ಮಾಡಲಾರರು. ಇದು ವಿಷಾದದ ಸಂಗತಿ.

೭ ಗುಜರಾತ್ ವಿದ್ಯಾಪೀಠದಂಥ ಚಿಕ್ಕ ಶಿಕ್ಷಣಸಂಸ್ಥೆಯಲ್ಲಿ ಗುಜರಾತಿಯನ್ನೇ ಶಿಕ್ಷಣದ ಮಾಧ್ಯಮವನ್ನಾಗಿ ಮಾಡಿದ್ದರಿಂದ ಗುಜರಾತೀ ಸಾಹಿತ್ಯದಲ್ಲಿ ಎಷ್ಟು ಪ್ರಗತಿಯಾಗಿದೆಯೆನ್ನುವುದು ಕೆಲವು ವರ್ಷಗಳ ಗುಜರಾತೀ ಸಾಹಿತ್ಯದ ಇತಿಹಾಸದಿಂದ ಮನವರಿಕೆಯಾಗುವುದು.

೮ ಲೋಕಮಾನ್ಯರು ಮರಾಠಿಯ ಮುಖಾಂತರವಾಗಿಯೆ ತಮ್ಮ ಪ್ರಾಂತದ ಸೇವೆ ಮಾಡಿದ್ದರಿಂದ ಮರಾಠಿ ಸಾಹಿತ್ಯವು ಬಹಳ ಸಮೃದ್ಧವಾಗಿದೆ. ಇದು ಈ ವಿಷಯದಲ್ಲಿ ಸಾಕ್ಷಿಯಾಗಿದೆ.

## ೧೦ ಇಂಗ್ಲಿಷ್ ಭಾಷೆ

೧ ಇಂಗ್ಲಿಷ್ ಭಾಷೆಯ ಜ್ಞಾನವನ್ನು ಸಂಪಾದಿಸಿದ ಹೊರತು ಶಿಕ್ಷಣವು ಪೂರ್ತಿಯಾಗುವುದಿಲ್ಲ ಎಂಬ ತಿಳಿವಳಿಕೆಯನ್ನು ದೂರ ಮಾಡುವುದು ಅವಶ್ಯ.

೨ ಇಂಗ್ಲಿಷ್ ಭಾಷೆಯ ವಿಶಾಲ ಸಾಹಿತ್ಯದಲ್ಲಿ ಸುಂದರವಾದ ರತ್ನಗಳನ್ನು ಆರಿಸಿ ತಮ್ಮ ತಮ್ಮ ಭಾಷೆಗೆ ಪರಿವರ್ತಿಸುವುದು ಇಂಗ್ಲಿಷ್ ಭಾಷಾಜ್ಞಾನಿಗಳ ಒಂದು ಕರ್ತವ್ಯ. ಈ ರತ್ನಗಳ ಆನಂದವನ್ನು ಸವಿಯುವುದಕ್ಕಾಗಿ ಕೋಟ್ಯಂತರ ಜನರನ್ನು ಇಂಗ್ಲಿಷ್ ಕಲಿಯಬೇಕೆನ್ನುವ ಹವ್ಯಾಸದಲ್ಲಿ ತೊಡಗಿಸುವುದು ಕ್ರೂರತನ.

೩ ಇಂಗ್ಲಿಷ್ ಭಾಷೆ ವ್ಯವಹಾರಕ್ಕೆ ಹೆಚ್ಚಾಗಿ ಅವಶ್ಯಕವೆನ್ನುವುದು ನಿಜವು; ಆದರೆ ಇಂಥ ವ್ಯವಹಾರವನ್ನು ಕೇವಲ ಸ್ವಲ್ಪ ಜನರೇ ಮಾಡಬಲ್ಲರು. ಮೇಲಾಗಿ ಈ ಜನರು ಮಾಡುವ ವ್ಯವಹಾರದ ಬಹು ಭಾಗವು ನಿಷ್ಕಾರಣವಾಗಿ ಇಂಗ್ಲಿಷಿನಲ್ಲಿ ಆಗುವುದು, ಮತ್ತು ಅದು ಇಂಗ್ಲಿಷಿನಲ್ಲಿ ಆಗುವುದೂ ನಮ್ಮ ದಾಸ್ಯದಿಂದಲೇ. ಕೆಲವರೇ ಆದ ಇಂಗ್ಲಿಷ್ ಜನರಿಗೆ ನಮ್ಮ ದೇಶೀಯ ಭಾಷೆಗಳನ್ನು ಕಲಿಯುವ ತೊಂದರೆಯಾಗಬಾರದೆಂದು ಇಡೀ ಪ್ರಜಾಕೋಟಿಯ ಮೇಲೆ ಇಂಗ್ಲಿಷ್ ಶಿಕ್ಷಣದ ಭಾರಹೊರಿಸುವುದು ನಮ್ಮ ದೇಶವು ಬ್ರಿಟಿಷ್ ರಾಜ್ಯಕ್ಕೆ ಕೊಡುತ್ತಿರುವಂಥ ಒಂದು ಪ್ರಕಾರದ ಕರಭಾರವೆ ಎನಿಸುವುದು.

೪ ಇಂಗ್ಲಿಷು ಅವಶ್ಯವಾಗಿ ಕಲಿಯಬೇಕಾದ ಭಾಷೆಯೆಂದು ನಿಯಮ

ಮಾಡಿ ಬ್ರಿಟಿಷ್‌ರಾಜ್ಯವು ತನ್ನ ತಳಹದಿಯನ್ನು ಹೆಚ್ಚು ಗಟ್ಟಿಮಾಡಿ ಕೊಂಡಿದೆ; ಮತ್ತು ಈ ಭಾಷೆಯ ದಾಸ್ಯವನ್ನು ಸ್ವೀಕರಿಸುವಂತೆ ಮಾಡಿ ಪ್ರಜೆಗಳನ್ನು ಶರೀರದಿಂದ ಮಾತ್ರವಲ್ಲ, ಮನಸ್ಸಿನಿಂದಲೂ ಅಡಿಯಾಳು ಗಳನ್ನಾಗಿ ಮಾಡಿದೆ. ಶಸ್ತ್ರಾಸ್ತ್ರಗಳನ್ನು ಕಸಿದುಕೊಂಡಿದ್ದರಿಂದ ಪ್ರಜೆಗಳಿಗೆ ಆದದ್ದಕ್ಕಿಂತ ಹೆಚ್ಚು ಹಾನಿಯು ಇಂಗ್ಲಿಷನ್ನು ಹೇರಿದ್ದರಿಂದ ಆಗಿದೆ.

೫ ಇಂಗ್ಲಿಷ್ ಭಾಷೆಯ ಜ್ಞಾನವಿಲ್ಲದೆ ದೇಶದ ಮಹತ್ವದ ಕಾರಭಾರ ದಲ್ಲಿ ಪಾಲುಗೊಳ್ಳಲು ಬರುವುದಿಲ್ಲವೆಂದು ಕಟ್ಟುಮಾಡಿರುವುದು ಶಿಕ್ಷಣದ, ಶಿಕ್ಷಣಶಾಸ್ತ್ರದ, ಹಾಗೆಯೆ ರಾಜಕೀಯದ ದೃಷ್ಟಿಯಿಂದ ಅತ್ಯಂತ ಹಾನಿ ಕರವಾಗಿದೆ.

೬ ಯುರೋಪಿನ ಜ್ಞಾನವನ್ನು ಪಡೆಯುವುದಕ್ಕಾಗಿ ಯುರೋಪಿನ ಯಾವುದಾದರೂ ಒಂದು ಭಾಷೆಯನ್ನು ಕಲಿಯುವುದು ಅವಶ್ಯವೆಂಬುದನ್ನು ಒಪ್ಪಬಹುದು. ಆದರೆ ಇಂದು ನಾವು ಅದಕ್ಕಾಗಿ ಕಳೆದುಕೊಳ್ಳುತ್ತಿರುವ ಸಮಯವನ್ನೂ ಪರಿಶ್ರಮವನ್ನೂ ಕಳೆದುಕೊಳ್ಳಲಾಗದು. ಯುರೋಪಿನ ಜ್ಞಾನಾರ್ಜನೆಗೆ ಯುರೋಪಿನ ಭಾಷೆಯು ಎಷ್ಟು ಅಗತ್ಯವೊ ಅಷ್ಟನ್ನೇ ಕಲಿಯಬೇಕು. ತಿಳಿಯುವಷ್ಟು ಬಂದರೆ ಸಾಕೆಂಬುದೆ ಆ ಭಾಷೆಯ ವಿಷಯದಲ್ಲಿ ನಮ್ಮ ಧ್ಯೇಯವಿರಬೇಕು. ಇಂದು, ಇಂಗ್ಲಿಷು ನಮ್ಮ ಮಾತೃ ಭಾಷೆಯೊ ಏನೋ, ಅಥವಾ ಆದಕ್ಕಿಂತಲೂ ಹೆಚ್ಚು ಮಹತ್ವವುಳ್ಳದ್ದೋ ಏನೋ ಎನ್ನುವಂತೆ ಅದರಲ್ಲಿ ಲೇಖ ಬರೆಯಲು ಮತ್ತು ಅದನ್ನು ಸರಿಯಾಗಿ ಉಚ್ಚರಿಸಲು ಕಲಿಯುವುದಕ್ಕಾಗಿ ನಾವು ಭಗೀರಥ ಪ್ರಯತ್ನ ಮಾಡುತ್ತಿರು ತ್ತೇವೆ. ಎಷ್ಟೋ ವರ್ಷಗಳ ವರೆಗೆ ಸತತವಾಗಿ ಪ್ರಯತ್ನಮಾಡಿದರೂ ಆ ಭಾಷೆಯಲ್ಲಿ ನಾವು ಪ್ರಭುತ್ವ ಪಡೆಯುವುದು ಅಪರೂಪ.

೭ ನಮಗೆ ನಮ್ಮ ಭಾಷೆಯನ್ನು ಮತ್ತು ನೆರೆಹೊರೆಯ ಪ್ರಾಂತದ ಭಾಷೆಯನ್ನು ಸರಿಯಾಗಿ ಮಾತಾಡಲು ಬರೆಯಲು ಬರದಿದ್ದರೆ ನಾಚಿಕೆ ಎನಿಸುವುದಿಲ್ಲ. ಆದರೆ ಇಂಗ್ಲಿಷಿನಲ್ಲಿ ತಪ್ಪುಗಳಾದರೋ ನಾವು ತುಂಬಾ ನಾಚಿಕೊಳ್ಳುವೆವು, ತಪ್ಪುಮಾಡಿದವರಿಗೆ ಹಾಸ್ಯ ಮಾಡುವೆವು. ಇದೆಲ್ಲವೂ ಆ ಭಾಷೆಗೆ ನಾವು ಮರುಳಾಗಿರುವೆವೆಂಬುದನ್ನು ತೋರಿಸುವುದು. ವಾಸ್ತ ವಿಕವಾಗಿ ನೋಡಿದರೆ ಇಂಗ್ಲಿಷು ಪೂರ್ಣ ಪರಕೀಯ ಭಾಷೆಯಾಗಿರು ವುದರಿಂದ ನಾವು ತಪ್ಪು ಉಚ್ಚರಿಸಿದರೆ ಆಶ್ಚರ್ಯಪಡತಕ್ಕ, ಹಾಸ್ಯ ಮಾಡತಕ್ಕ ಅಗತ್ಯವೇನೂ ಇಲ್ಲ.

೮ ಆದರೆ ನಾವು ಈ ಭಾಷೆಗೆ ಮರುಳಾಗಿ ನಮ್ಮ ಶಿಕ್ಷಣದ ಅರ್ಧ ಅಥವಾ ಅದಕ್ಕೂ ಹೆಚ್ಚು ಸಮಯವನ್ನು ಅದರ ಪ್ರಭುತ್ವ ಸಂಪಾದನೆಗಾಗಿ ವೆಚ್ಚಮಾಡುತ್ತೇವೆ. ಇದರಿಂದ ವಿದ್ಯಾರ್ಥಿಯ ಎಷ್ಟೋ ಸಮಯವೂ ಶ್ರಮವೂ ವ್ಯರ್ಥವಾಗುವುದು, ದುರ್ವ್ಯಯವಾಗುವುದು.

## ೧೧ ಭಾಷಾಜ್ಞಾನ

೧ ವ್ಯವಸ್ಥಿತವಾಗಿ ನಡೆಯುವ ಶಿಕ್ಷಣಕ್ರಮದಲ್ಲಿ ಭಾಷಾವಿಷಯಗಳಲ್ಲಿ ಸ್ವಭಾಷೆಗೆ ಪ್ರಥಮಸ್ಥಾನವು ದೊರೆಯತಕ್ಕದ್ದು. ಸ್ವಭಾಷೆಯಲ್ಲಿ ಶುದ್ಧವಾಗಿ ಓದಲು ಮಾತನಾಡಲು ಮತ್ತು ಬರೆಯಲು ಬರುವ ವರೆಗೆ ಇಂಗ್ಲಿಷಿನಂಥ ಪರಕೀಯ ಭಾಷೆಯನ್ನು ಕಲಿಯಲು ಪ್ರಾರಂಭಿಸತಕ್ಕದ್ದಲ್ಲ.

೨ ಸ್ವಭಾಷೆಯ ನಂತರದ ಸ್ಥಾನವು ರಾಷ್ಟ್ರಭಾಷೆಗೆ ಇರಬೇಕು. ನಮಗೆ ಹಿಂದುಸ್ತಾನಿಯೆ ರಾಷ್ಟ್ರಭಾಷೆ. ಈ ವಿಷಯವನ್ನು ಕುರಿತು ಹೆಚ್ಚಿನ ಮಾತುಗಳನ್ನು ಮುಂದೆ ಹೇಳಲಾಗುವುದು.

೩ ಮೂರನೆಯ ಸ್ಥಾನವು ಮೂಲ ಭಾಷೆಗೆ ದೊರೆಯುವುದು. ಹಿಂದೂ ವಿದ್ಯಾರ್ಥಿಗಳಿಗೆ ಸಂಸ್ಕೃತ, ಮುಸಲ್ಮಾನ ವಿದ್ಯಾರ್ಥಿಗಳಿಗೆ ಅರಬೀ ಅಥವಾ ಪಾರಸಿ, ಪಾರಸಿ ವಿದ್ಯಾರ್ಥಿಗಳಿಗೆ ಪಹೆಲವಿ, ಮುಂತಾದವು ಮೂಲಭಾಷೆಗಳೆನಿಸುವವು. ಈ ಭಾಷೆಗಳು ಸ್ವಧರ್ಮದ ಮತ್ತು ಸ್ವಭಾಷೆಯ ತಳಹದಿಯಾಗಿರುವುದರಿಂದ ಇವುಗಳ ಜ್ಞಾನವನ್ನು ಪಡೆಯುವುದು ಬಹಳ ಮಹತ್ವದ್ದು. ಒಳ್ಳೇ ಶಿಕ್ಷಿತನೆಂದೆನಿಸಿಕೊಳ್ಳುವ ಮನುಷ್ಯನಿಗೆ ತನ್ನ ಮೂಲ ಭಾಷೆಯ ಸಾಧಾರಣ ಜ್ಞಾನವು ಇರತಕ್ಕದ್ದು.

೪ ಭಾಷೆಗಳನ್ನು ಕಲಿಯುವ ಇಚ್ಛೆ ಇದ್ದವರು, ರುಚಿ ಇದ್ದವರು, ಹಿಂದುಸ್ತಾನದ ಅನ್ಯ ಪ್ರಾಂತೀಯ ಭಾಷೆಗಳನ್ನು ಕಲಿಯುವುದು ಅವಶ್ಯವು. ವಿಶೇಷತಃ ದ್ರವಿಡ ಭಾಷೆಗಳಲ್ಲಿ ಒಂದೆರಡನ್ನು ಕಲಿಯಲು ಪ್ರಯತ್ನಿಸತಕ್ಕದ್ದು. ಸಂಸ್ಕೃತಜನ್ಯ ಭಾಷೆಗಳಲ್ಲಿ ಒಂದೆರಡನ್ನು ಕಲಿಯುವುದಂತೂ ಇದ್ದೇ ಇದೆ.

೫ ಶಿಕ್ಷಣದ ದೃಷ್ಟಿಯಿಂದ ಇಂಗ್ಲಿಷಿಗೆ ಈ ಎಲ್ಲ ಭಾಷೆಗಳ ನಂತರದ ಸ್ಥಾನವಿದೆ. ವ್ಯಾವಹಾರಿಕ ದೃಷ್ಟಿಯಿಂದ ಮಾತ್ರ ಇದರ ಬೆಲೆ ಹೆಚ್ಚು. ಆದರೂ ಇದಕ್ಕೆ ಸ್ವಭಾಷೆ, ರಾಷ್ಟ್ರಭಾಷೆ ಮತ್ತು ಮೂಲಭಾಷೆಯ ನಂತರವೇ ಸ್ಥಾನ ಕೊಡಬೇಕು.

## ೧೨ ರಾಷ್ಟ್ರಭಾಷೆ

ಹಿಂದೀ ಮತ್ತು ಉರ್ದು ಮಿಶ್ರಿತ ಭಾಷೆಯೆ ಹಿಂದುಸ್ತಾನಿ. ಇದನ್ನು ಸಾಮಾನ್ಯವಾಗಿ ದಿಲ್ಲಿ, ಲಖನೌ, ಪ್ರಯಾಗಿನಂಥ ಪಟ್ಟಣಗಳಲ್ಲಿ ಸಾಮಾನ್ಯ ಜನರು ಆಡುತ್ತಾರೆ. ಇದೇ ಹಿಂದುಸ್ತಾನದ ರಾಷ್ಟ್ರಭಾಷೆ. ದಕ್ಷಿಣ ಹಿಂದುಸ್ತಾನವನ್ನು ಹೊರತು ಪಡಿಸಿ ಇಡೀ ದೇಶದ ಜನರಲ್ಲಿ ಇದರ ಬಳಕೆಯು ನೂರಾರು ವರ್ಷಗಳಿಂದ ನಡೆದುಬಂದಿದೆ.

೨ ಶಿಕ್ಷಿತ ಮನುಷ್ಯನಿಗೆ ಈ ಭಾಷೆಯು ಶುದ್ಧವಾಗಿ ಮಾತನಾಡಲಿಕ್ಕೂ ಬರೆಯಲಿಕ್ಕೂ ಓದಲಿಕ್ಕೂ ಬರತಕ್ಕದ್ದು.

೩ ಈ ಭಾಷೆಯನ್ನು ನಾಗರಿ ಮತ್ತು ಉರ್ದು ಲಿಪಿಯಲ್ಲಿ ಬರೆಯುತ್ತಾರೆ. ಆದ್ದರಿಂದ ಪ್ರತಿಯೊಬ್ಬನಿಗೂ ಎರಡೂ ಲಿಪಿಗಳು ಗೊತ್ತಿರುವುದು ಒಳಿತು.

೪ ರಾಷ್ಟ್ರಭಾಷೆಯು ಪ್ರಾಂತೀಯ ಭಾಷೆಯನ್ನು ಗೌಣಮಾಡುವುದಕ್ಕಾಗಿ ಇರುವುದಲ್ಲ. ರಾಷ್ಟ್ರಭಾಷೆಯು ಬೇಕಾಗುವುದು ಇಡೀ ದೇಶದ ವ್ಯವಹಾರಕ್ಕಾಗಿ. ಇದಕ್ಕೆ ಸ್ಥಾನವನ್ನು ಕೊಟ್ಟದ್ದು ಹೊಸದಾಗಿ ಅಲ್ಲ. ವ್ಯವಹಾರದಲ್ಲಿ ಇದ್ದುದಕ್ಕೇ ಇಲ್ಲಿ ನಾವು ಒಪ್ಪಿಗೆ ಕೊಟ್ಟಿದ್ದೇವೆ.

## ೧೩ ಇತಿಹಾಸ

೧ ಇಂದು ಇತಿಹಾಸವನ್ನು ಕಲಿಸುವುದು ತಪ್ಪು ಉದ್ದೇಶದಿಂದ, ತಪ್ಪು ದೃಷ್ಟಿಬಿಂದುಗಳಿಂದ. ಆದ್ದರಿಂದ ಈಗ ನಮಗೆ ಕಲಿಸುತ್ತಿರುವ ಇತಿಹಾಸದ ಸಂಗತಿಗಳು ನಿಜವಿದ್ದರೂ ಅವು ನಮ್ಮ ಪೂರ್ವಜರ ಭೂತಕಾಲದ ಸ್ಥಿತಿಯ ತಪ್ಪು ಕಲ್ಪನೆಯನ್ನು ಮಾಡಿಕೊಡುತ್ತವೆ.

೨ ಜನಾಂಗದ ಇತಿಹಾಸವೆಂದರೆ ಬರಿಯ ಅರಸುಮನೆತನಗಳ ಏರಿ-ಳಿತ ಮತ್ತು ಯುದ್ಧದ ವರ್ಣನೆಯೆ ಅಲ್ಲ. ಇದು ಹಿಂದುಸ್ತಾನದಂಥ ಜನಾಂಗದ ಇತಿಹಾಸವಂತೂ ಅಲ್ಲವೇ ಅಲ್ಲ. ಇದು ಆಗಾಗ ಜನಾಂಗದ ಶರೀರದ ಮೇಲೆ ಎದ್ದ ಗುಳ್ಳೆಗಳ ಇತಿಹಾಸವೆನಿಸುವುದು. ಜನಾಂಗದ ಜೀವನದಲ್ಲಿ ಯುದ್ಧಗಳು ದಿನವೂ ಜರಗುವುದಿಲ್ಲ. ಅವು ಜರಗುವುದು ಎಂದೋ ಒಮ್ಮೆ ಬೀಳುವ ಉಲ್ಕಾಪಾತಗಳಂತೆ. ಅರ್ಥಾತ್ ಯುದ್ಧಗಳು ಜನಾಂಗದ ನಿತ್ಯಜೀವನವಲ್ಲ. ಜನಾಂಗದ ನಿತ್ಯಜೀವನದಲ್ಲಿ ಅರಿವು, ಬಂಧುತ್ವ, ಪರಸ್ಪರ ಕಷ್ಟಸಹನಪ್ರಿಯತೆ ಮತ್ತು ಸಹಕಾರವು ಇರುತ್ತದೆ.

ಈಗಿನ ಇತಿಹಾಸವು ಇವುಗಳಿಂದಾದ ಪ್ರಗತಿಯನ್ನು ಬಹು ಗೌಣರೀತಿ ಯಿಂದ ವರ್ಣಿಸುತ್ತದೆ. ಆದ್ದರಿಂದ ಸದ್ಯಕ್ಕೆ ಇತಿಹಾಸವು ಭೂತಕಾಲದ ಭ್ರಮಾತ್ಮಕ ಚಿತ್ರವನ್ನು ನಮ್ಮೆದುರು ಇಡುತ್ತದೆ.

೩ ಅಂತೂ ಇತಿಹಾಸವನ್ನು ಈ ದೃಷ್ಟಿಯಿಂದ ಪರಿಶೀಲಿಸಿ ನೋಡಿದರೆ ನಮಗೆ ಜನಾಂಗದ ನಿತ್ಯವ್ಯವಹಾರದಲ್ಲಿ ಹಿಂಸಾಮಯ ಕಲಹಗಳಿ ಗಿಂತಲೂ ಅಹಿಂಸಾಮಯ ಸತ್ಯಾಗ್ರಹದ ಪ್ರಯೋಗಗಳೆ ಹೆಚ್ಚಾಗಿ ನಡೆ ದದ್ದು ಕಂಡುಬರುತ್ತದೆ.

೪ ಇತಿಹಾಸದ ಶಿಕ್ಷಣದಲ್ಲಿರುವ ದೋಷವು ಇದೊಂದೆ ಅಲ್ಲ; ಸದ್ಯ ಕ್ಕಂತೂ ಇತಿಹಾಸದ ಶಿಕ್ಷಣವು ತಿಳಿದೂ ತಿಳಿದು ತಪ್ಪು ಕಲ್ಪನೆಯುಂಟಾಗ ಬೇಕೆಂಬ ಉದ್ದೇಶದಿಂದಲೇ ಕೊಡಲ್ಪಡುತ್ತಿದೆ; ಮತ್ತು ಇಂಗ್ಲಿಷರು ಬರುವ ಪೂರ್ವಕಾಲದ ಭಾರತದ ಚಿತ್ರವು ಅತ್ಯಂತ ಕುರೂಪಿಯಾಗುವಂತೆ ಚಿತ್ರಿಸ ಲ್ಪಟ್ಟಿದೆ, ಅತ್ಯಂತ ಕೆಡುಕು ರೀತಿಯಲ್ಲಿ ವರ್ಣಿಸಲ್ಪಟ್ಟಿದೆ. ಇಂಗ್ಲಿಷ್ ರಾಜ್ಯದ ಬಗೆಗೆ ಮೋಹವುಂಟಾಗುವಂತೆ ಚಿಕ್ಕಂದಿನಿಂದಲೆ ಇತಿಹಾಸದ ಶಿಕ್ಷಣವು ಕೊಡಲ್ಪಡುತ್ತಿದೆ. ಅದರಲ್ಲಿ ಅಸತ್ಯವಷ್ಟೆ ಅಲ್ಲ, ಅಪ್ರಾಮಾಣಿಕ ತನವೂ ಇರುವುದು.

## ೧೪ ಶಿಕ್ಷಣದ ಅನ್ಯ ವಿಷಯಗಳು

೧ ಹಿಂದುಸ್ತಾನದಲ್ಲಿ ಸಂಗೀತಕ್ಕೆ ತೀರ ಕಡಿಮೆ ಗಮನವು ಕೊಡಲ್ಪ ಟ್ಟಿದೆ. ಚಿತ್ತದ ಭಾವನೆಗಳನ್ನು ಎಚ್ಚರಿಸಲು ಸಂಗೀತವು ಒಂದು ಉತ್ತಮ ಸಾಧನ. ಅದರಂತೆ ಸಾತ್ವಿಕ ಸಂಗೀತವು ಅಧ್ಯಾತ್ಮಿಕ ವಿಕಾಸಕ್ಕೆ ಅತ್ಯಂತ ಅಗತ್ಯವಾದ ಸಾಧನ. ಬಾಲಕನಲ್ಲಿದ್ದ ಈ ಪ್ರಾಕೃತಿಕ ಶಕ್ತಿಯನ್ನು ಸಾತ್ವಿಕ ಉಪಾಯಗಳಿಂದ ಅರಳಿಸಬೇಕು.

೨ ಕರ್ಮೇಂದ್ರಿಯದ ಕಾರ್ಯಗಳಿಗೂ ಸಾರ್ವಜನಿಕ ಕಾರ್ಯಗಳಿಗೂ ಅಚ್ಚುಕಟ್ಟುತನದ ಶಿಕ್ಷಣವು ಬೇಕು, ಕವಾಯತಿನ ಜ್ಞಾನವು ಬೇಕು. ಇದರ ಕೊರತೆಯ ಮೂಲಕ ಎಷ್ಟೋ ಅವ್ಯವಸ್ಥೆ, ಶಕ್ತಿಯ ಅಪವ್ಯಯ, ಗೊಂದಲ ಹಾಗೂ ವಿತ್ತ-ಜೀವಿತಗಳ ಹಾನಿ ಉಂಟಾಗುವುದು. ಶಿಸ್ತಿನಿಂದ ಏಳುವ, ನಡೆಯುವ ಮತ್ತು ಕೆಲಸಮಾಡುವ, ೮-೧೦ ಜನರು ಒಂದೆಡೆ ಸೇರುತ್ತಲೆ ಕವಾಯತ್ ಮಾಡುವವರಂತೆ ವ್ಯವಸ್ಥಿತವಾಗಿ ಕೆಲಸಮಾಡುವ ಅಭ್ಯಾಸವು ನಮಗೆ ಬೀಳತಕ್ಕದ್ದು. ಆದ್ದರಿಂದ ಪಾಠಶಾಲೆಗಳಲ್ಲಿ ಕವಾ-

ಯಿತು ( ಡ್ರಿಲ್ಲು ) ಶಿಕ್ಷಣವನ್ನು ಕೊಡಬೇಕು ಮತ್ತು ವಯಸ್ಕಾದವರೂ ಇವರ ಶಿಕ್ಷಣವನ್ನು ಪಡೆಯಬೇಕು.

೯ ಹಿಂದುಸ್ತಾನದಲ್ಲಿ ಶಸ್ತ್ರಾಸ್ತ್ರಗಳನ್ನು ಬಲಾತ್ಕಾರದಿಂದ ಕಸಿದು ಕೊಂಡಿದ್ದಾರೆ. ಭಾರತೀಯರು ಅವನ್ನು ತ್ಯಜಿಸಿದ್ದು ತಮ್ಮ ಇಚ್ಛೆಯಿಂದಲ್ಲ. ಶಸ್ತ್ರಾಸ್ತ್ರಗಳನ್ನು ಧರಿಸುವ ಮತ್ತು ಸೈನಿಕ ಶಿಕ್ಷಣವನ್ನು ಪಡೆಯುವ ಅಧಿಕಾರವು ಪ್ರತಿಯೊಬ್ಬನಿಗೂ ಉಂಟು. ಆದ್ದರಿಂದ ಇಷ್ಟಪಟ್ಟವರಿಗೆ ಸೈನಿಕ ಶಿಕ್ಷಣವೂ ಶಿಕ್ಷಣದ ಅನಿವಾರ್ಯ ವಿಷಯವಾಗಬೇಕು.

## ೧೫ ಶಿಕ್ಷಕ

೧ ಶಿಕ್ಷಕನು ತಾನು ಕಲಿಸುವ ವಿಷಯದಲ್ಲಿ ಪ್ರವೀಣನಿರಬೇಕು. ಅವನ ನಡತೆ ಹೇಗಿದ್ದರೂ ಸರಿ ಎಂದು ತಿಳಿಯುವುದು ತೀರ ತಪ್ಪಾದುದು. ಮತ್ತು ದೋಷಯುಕ್ತವಾದದ್ದು.

೨ ಪ್ರವೀಣನಾದ, ಆದರೆ ನಡತೆಯು ಚನ್ನಾಗಿಲ್ಲದ ಶಿಕ್ಷಕನಿಂದ ಶಿಕ್ಷಣವನ್ನು ಹೊಂದಿ ವಿದ್ಯಾರ್ಥಿಯು ಒಂದೆರಡು ವಿಷಯಗಳಲ್ಲಿ ನೈಪುಣ್ಯವನ್ನು ಪಡೆಯುವುದಕ್ಕಿಂತ ಕಡಿಮೆ ಪ್ರವೀಣನಿದ್ದು ಚನ್ನಾದ ನಡತೆಯುಳ್ಳ ಶಿಕ್ಷಕನಿಂದ ಶಿಕ್ಷಣವನ್ನು ಪಡೆಯುವುದು ಸಾವಿರ ಪಾಲು ಶ್ರೇಷ್ಠವಾದದ್ದು.

೩ ತನಗೆ ಒಪ್ಪಿಸಿದ ವಿಷಯವನ್ನು ಚನ್ನಾಗಿ ಕಲಿಸಲು ಮಾತ್ರ ತಾನು ಹೊಣೆಯೆಂದು ತಿಳಿದುಕೊಂಡು ವಿದ್ಯಾರ್ಥಿಯ ನಡತೆಯನ್ನು ತಿದ್ದುವ ಹೊಣೆಯನ್ನು ಹೊರಲು ಒಪ್ಪದಿರುವ ಶಿಕ್ಷಕನು ಶಿಕ್ಷಕನೇ ಅಲ್ಲ.

೪ ಆದರ್ಶ ಶಿಕ್ಷಕನು ವಿದ್ಯಾರ್ಥಿಯ ಅಭ್ಯಾಸದ ಕಡೆಗೆ ಮಾತ್ರವೇ ಗಮನ ಕೊಡುವುದರ ಬದಲು ಅವನ ಇಡೀ ಜೀವನದ ಉನ್ನತಿಯ ಕಡೆಗೆ ಸಂಪೂರ್ಣ ದೃಷ್ಟಿಯನ್ನಿಟ್ಟು ಅವನ ಅಂತರಾಳದಲ್ಲಿ ಇಳಿಯಲು ಪ್ರಯತ್ನಿಸುವನು.

೫ ಇಂತಹ ಶಿಕ್ಷಕನು ವಿದ್ಯಾರ್ಥಿಗೆ ಭಯಂಕರ ಮನುಷ್ಯನಂತೆ ಇಲ್ಲವೆ ಯಮನಂತೆ ಕಾಣುವುದರ ಬದಲು ಪೂಜ್ಯನಾಗಿಯೂ ತಾಯಿಯಂತೆ ಸಮೀಪದ ಬಂಧುವಾಗಿಯೂ ತೋರುವನು.

೬ ಶಿಕ್ಷಕನು ತನ್ನ ಯೋಗ್ಯತೆಯನ್ನು ಬೆಳೆಸಿಕೊಳ್ಳಲು ಸದಾ ಪ್ರಯತ್ನ ಪಡತಕ್ಕದ್ದು. ತಾನು ಹೇಳಬೇಕಾದ ವಿಷಯವನ್ನು ಕುರಿತು ಹೊಸ ಹೊಸ ಜ್ಞಾನವನ್ನು ಸಂಪಾದಿಸಿಕೊಂಡೇ, ವಿಷಯವನ್ನು ಚನ್ನಾಗಿ ತಯಾರಿಸಿಕೊಂಡೇ ಅವನು ವರ್ಗದಲ್ಲಿ ಪ್ರವೇಶಿಸಬೇಕು.

೭ ಶಿಕ್ಷಕನು ವಿದ್ಯಾರ್ಥಿಗಿಂತಲೂ ಹೆಚ್ಚು ಉತ್ತಮವಾದ ವಿದ್ಯಾರ್ಥಿ ಜೀವನವನ್ನು ಕಳೆಯಬೇಕು, ಮತ್ತು ಹೆಚ್ಚು ಅಧ್ಯಯನದಲ್ಲಿ ತೊಡಗಿರ ಬೇಕೆಂಬುದೇ ಮೇಲಿನ ಮಾತಿನ ತಾತ್ಪರ್ಯ.

೮ ಪೂರ್ಣಸಿದ್ಧತೆ ಮಾಡಿಕೊಳ್ಳದೆ ಶಿಕ್ಷಣಕಾರ್ಯವನ್ನು ಕೈಕೊಳ್ಳುವ ಶಿಕ್ಷಕನು ವಿದ್ಯಾರ್ಥಿಗಳ ಅಮೂಲ್ಯ ಸಮಯವನ್ನು ನಷ್ಟಪಡಿಸಿದಂತೆಯೇ ಸರಿ.

೯ ಶಿಕ್ಷಕನು ಶ್ರೇಷ್ಠತರ ಶಿಕ್ಷಣಪದ್ಧತಿಯನ್ನು ಶೋಧಿಸುತ್ತಲೆ ಇರಬೇಕು. ಪ್ರತಿಯೊಬ್ಬ ವಿದ್ಯಾರ್ಥಿಯ ವೈಶಿಷ್ಟ್ಯವನ್ನು ಪರೀಕ್ಷಿಸಿ ಯಾವ ವಿಷಯದಲ್ಲಿ ಅವನಿಗೆ ಹೆಚ್ಚು ಗೀಳು ಇದೆಯೆಂಬುದನ್ನು ಕಂಡುಹಿಡಿಯಬೇಕು; ಅವನಿಗೆ ಆ ಆ ವಿಷಯಗಳಲ್ಲಿ ಹೆಚ್ಚು ರುಚಿಯೂ ಪ್ರಗತಿಯೂ ಆಗುವಂತೆ ಪ್ರಯತ್ನಿಸಬೇಕು. ವಿದ್ಯಾರ್ಥಿಗಳಿಗೆ ಪ್ರಶ್ನೆ ಕೇಳಲು ಆಸ್ಪದ ಕೊಡಬೇಕು, ಅವರಿಗೆ ಸಮರ್ಪಕ ಉತ್ತರಗಳನ್ನಿತ್ತು ಅವರನ್ನು ಸಮಾಧಾನಪಡಿಸಬೇಕು.

೧೦ ಹೊಡೆಯಲು, ಬೈಯಲು, ತಿರಸ್ಕರಿಸಲು ಅಥವಾ ಯಾವುದಾದರೂ ಶಿಕ್ಷೆಯನ್ನು ವಿಧಿಸಲು ಶಿಕ್ಷಕನಿಗೆ ಪ್ರತಿಬಂಧ ಇರಬೇಕು.

೧೧ ತನ್ನ ಕೆಲಸವನ್ನು ಚನ್ನಾಗಿ ಮಾಡಬೇಕೆನ್ನುವ ಶಿಕ್ಷಕನು ಬಹಳ ವಿದ್ಯಾರ್ಥಿಗಳ ದೊಡ್ಡ ವರ್ಗದ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಡಲಾರನೆಂಬುದು ಅನುಭವದ ಮಾತು.

೧೨ ನೂರಾರು ವಿದ್ಯಾರ್ಥಿಗಳುಳ್ಳ ವಿದ್ಯಾಲಯಗಳೂ ಇರಕೂಡದು.

## ೧೬ ವಿದ್ಯಾರ್ಥಿ

೧ ವಿದ್ಯೆಯು ವಿನಯದಿಂದ ಶೋಭಿಸುವುದು. ಇಷ್ಟೇ ಅಲ್ಲ, ವಿನಯವಿಲ್ಲದಿದ್ದರೆ ವಿದ್ಯೆಯು ದೊರೆಯುವುದೂ ಇಲ್ಲ.

೨ ವಿದ್ಯಾರ್ಥಿಯು ಶಿಕ್ಷಕನೊಡನೆ ಗುರುಭಾವನೆಯಿಂದ ವರ್ತಿಸಬೇಕು, ಗುರುವಿನಲ್ಲಿ ಶ್ರದ್ಧೆಯನ್ನಿಡಬೇಕು, ಅವನೊಡನೆ ವಿನಯದಿಂದಲೂ ಸೇವಾಭಾವನೆಯಿಂದಲೂ ನಡೆದುಕೊಳ್ಳಬೇಕು.

೩ ಶಿಕ್ಷಕನು ಇಂಥ ಶ್ರದ್ಧೆಗೆ ಯೋಗ್ಯನಲ್ಲವೆಂದು ಮನವರಿಕೆಯಾದರೆ ವಿದ್ಯಾರ್ಥಿಯು ವಿನಯದಿಂದಲೇ ಅವನನ್ನು ತ್ಯಜಿಸಬೇಕು.

೪ ವಿದ್ಯಾರ್ಥಿಗಳು ಕೇಳಿ ಕೇಳಿ ಶಿಕ್ಷಕರಿಂದ ತಮ್ಮ ಸಂಶಯಗಳನ್ನು ದೂರ ಮಾಡಿಕೊಳ್ಳಬೇಕು.

೫ ವಿದ್ಯಾರ್ಥಿಯು ಶಿಕ್ಷಕನಿಂದ ಸರ್ವಜ್ಞಾನವನ್ನೂ ಹೀರಿಕೊಳ್ಳಲು ಆತುರಪಡುತ್ತಿರುವವನೆಂದು ತೋರಿಸಕೂಡದು. ವಿನಯದಿಂದ ವರ್ತಿಸಿ ಶಿಕ್ಷಕನ ಮನಸ್ಸನ್ನು ಪ್ರಸನ್ನಗೊಳಿಸಲು ಯತ್ನಿಸುವ ವಿದ್ಯಾರ್ಥಿಗೆ ಶಿಕ್ಷಕನು ತನ್ನ ಜ್ಞಾನಭಂಡಾರವನ್ನು ಅರ್ಪಿಸಲು ತಾನಾಗಿ ಸಿದ್ಧನಾಗುವನು, ಆತುರನಾಗುವನು. ಈ ಆತುರತೆಯು ಶಿಕ್ಷಕನಲ್ಲಿ ಉಂಟಾಗುವ ತನಕ ವಿದ್ಯಾರ್ಥಿಯು ತಾಳ್ಮೆಯಿಂದ ಇರಬೇಕು.

೬ ಆದರೆ ಶಿಕ್ಷಕನು ತನ್ನ ಜ್ಞಾನದ ಮಳೆಯನ್ನು ಸುರಿಸಲು ಆರಂಭಿಸಿದಾಗ ವಿದ್ಯಾರ್ಥಿಯು ಸೋಮಾರಿತನದಿಂದ ಆ ಸುಪ್ರಸಂಗವನ್ನು ಕಳೆದುಕೊಳ್ಳತಕ್ಕದ್ದಲ್ಲ.

## ೧೭ ವಿದ್ಯಾರ್ಥಿನಿಲಯ

೧ ವಿದ್ಯಾರ್ಥಿಗಳಿಗೆ ಬರಿಯ ವಾಸಕ್ಕಾಗಿಯೂ ಭೋಜನಕ್ಕಾಗಿಯೂ ಅನುಕೂಲತೆಯನ್ನು ಮಾಡಿಕೊಡುವಂಥ ಭೋಜನಾಲಯವು ವಿದ್ಯಾರ್ಥಿನಿಲಯವೆನಿಸುವುದಿಲ್ಲ.

೨ ಪಾಠಶಾಲೆಗಿಂತಲೂ ವಿದ್ಯಾರ್ಥಿನಿಲಯದ ಮಹತ್ವವು ಬಹಳ ಹೆಚ್ಚು. ವಿದ್ಯಾರ್ಥಿನಿಲಯವು ತಂದೆತಾಯಂದಿರ ಮನೆಯ ಬದಲಾಗಿ ಇರುವುದು, ತವರುಮನೆಯಲ್ಲಿ ದೊರೆಯದ ಸಂಸ್ಕಾರಗಳು ಇಲ್ಲಿ ದೊರೆಯಬಲ್ಲವು ಎಂಬುವನ್ನು ಗೃಹಪತಿಯು ಸಿದ್ಧಮಾಡಬೇಕು.

೩ ಆದ್ದರಿಂದ ಪಾಠಶಾಲೆಯ ಆಚಾರ್ಯರಿಗಿಂತ ಅಥವಾ ವರ್ಗದ ಅಧ್ಯಾಪಕರಿಗಿಂತ ವಿದ್ಯಾರ್ಥಿನಿಲಯದ ಅಧಿಪತಿ ಹೆಚ್ಚು ಯೋಗ್ಯನಾದ ಮನುಷ್ಯನಿರಬೇಕು. ಇವನಲ್ಲಿ ಶಿಕ್ಷಕನ ಗುಣಗಳೂ ಇರಬೇಕು, ತಂದೆತಾಯಂದಿರ ಗುಣಗಳೂ ಇರಬೇಕು.

೪ ವಿದ್ಯಾರ್ಥಿಗಳ ಪ್ರತಿಯೊಂದು ಕಾರ್ಯದ ಮತ್ತು ಸಂಗತಿಯ ಮೇಲೂ ಇವನ ದೃಷ್ಟಿ ಇರತಕ್ಕದ್ದು.

೫ ಹುಡುಗರು ಒಟ್ಟುಗೂಡಿ ಇರುವಾಗ ಅವರ ಗುಪ್ತವಾದ ಮತ್ತು ಬಹಿರಂಗದಲ್ಲಿ ಕಾಣುವ ದೋಷಗಳು ದೃಷ್ಟಿಗೋಚರವಾಗುವವು. ಇತ್ತ ಗೃಹಪತಿಯು ಬಹು ಚಾತುರ್ಯದಿಂದ ಗಮನಕೊಟ್ಟಿರಬೇಕು.

೬ ವಿದ್ಯಾರ್ಥಿನಿಲಯದಲ್ಲಿ ಪಂಕ್ತಿಭೇದವು ಇರಕೂಡದು.

೭ ವಿದ್ಯಾರ್ಥಿನಿಲಯದಲ್ಲಿ ಸಾಧ್ಯವಾದ ಮಟ್ಟಿಗೆ ಆಳುಗಳನ್ನು ಇಡ

ಕೂಡದು. ವಿದ್ಯಾರ್ಥಿಗಳು ತಮ್ಮ ತಮ್ಮ ಕಾರ್ಯಗಳನ್ನು ತಾವೇ ಮಾಡಿಕೊಳ್ಳಬೇಕು.

೮ ಬಡದೇಶಕ್ಕೆ ತಕ್ಕಂತೆ ವಿದ್ಯಾರ್ಥಿನಿಲಯದ ವೆಚ್ಚವಿರಬೇಕು.

೯ ವಿದ್ಯಾರ್ಥಿಗಳಿಗೆ ನಿಯಮಿತವಾಗಿ ಮಿಷ್ಟಾನ್ನವು ದೊರೆಯಲೇ ಬೇಕೆಂಬ ರೂಢಿ ಒಳಿತಾದುದಲ್ಲ.

೧೦ ವಿದ್ಯಾರ್ಥಿನಿಲಯವು ಸರಳತನ, ಮಿತವ್ಯಯ ಮತ್ತು ಸುಲಭ ನಡತೆಯ ಸಂಸ್ಕಾರಗಳ ಗುರಿಯನ್ನು ವಿದ್ಯಾರ್ಥಿಗಳ ಎದುರಿನಲ್ಲಿಡುವಂತಹ ದಿರಬೇಕು. ವಿದ್ಯಾರ್ಥಿನಿಲಯದಲ್ಲಿ ಸೇರಿ ವಿದ್ಯಾರ್ಥಿಯು ವಿನಯಹೀನನೂ ವೆಚ್ಚಬಡಕನೂ ಉಚ್ಛೃಂಖಲನೂ ಆದರೆ ಆ ವಿದ್ಯಾರ್ಥಿನಿಲಯಕ್ಕೆ ಸಫಲತೆ ದೊರೆಯುವುದಿಲ್ಲವೆಂಬುದು ಖಂಡಿತ.

## ೧೮ ಶಿಕ್ಷಣದ ವೆಚ್ಚ

೧ ಶಿಕ್ಷಣಕ್ಕಾಗಿ ಇಂದು ಬಹಳ ವೆಚ್ಚಮಾಡಬೇಕಾಗುತ್ತದೆ. ಆದ್ದರಿಂದ ಶಿಕ್ಷಣವು ವೆಚ್ಚದ ಶಿಕ್ಷಣವಾಗಿದೆ. ಶಿಕ್ಷಣಕ್ರಮವು ಸರಿಯಾಗಿಲ್ಲವೆಂಬು ದನ್ನು ಈ ಸ್ಥಿತಿಯು ತೋರಿಸುತ್ತದೆ.

೨ ಶಿಕ್ಷಕರೂ ವಿದ್ಯಾರ್ಥಿಗಳೂ ತಮ್ಮ ಹೊಟ್ಟೆ ಬಟ್ಟೆಗೆ ತಗಲುವಷ್ಟು ವೆಚ್ಚವನ್ನು ಸ್ವತಃ ದುಡಿದು ಸಂಪಾದಿಸಲು ಸಮರ್ಥರಾಗಬೇಕು. ಶಿಕ್ಷಣದ ಯೋಜನೆಯನ್ನು ಈ ದೃಷ್ಟಿಯಿಂದ ಮಾಡಬೇಕು. ಮನೆ ಮತ್ತು ಸಾಧನಗಳಿಗಾಗಿ ತಗಲುವ ವೆಚ್ಚವನ್ನು ಜನರಿಂದ ಬೇಡಿ ಪಡೆಯಬೇಕು.

೩ ಇಂದು ಇದು ಸಾಧ್ಯವಿಲ್ಲ. ಏಕೆಂದರೆ ವಿದ್ಯಾರ್ಥಿಗಳಿಗೂ ಶಿಕ್ಷಕರಿಗೂ ಪರಿಶ್ರಮಪಡುವ ಅಭ್ಯಾಸವಿಲ್ಲ; ಮತ್ತು ದುಡಿಯಲು ಕಲಿಸಿರುವುದಿಲ್ಲ. ಈ ದಿಕ್ಕಿನಲ್ಲಿ ಪ್ರಯತ್ನವಾಗಬೇಕೆನ್ನುವುದರಲ್ಲಿ ಏನೂ ಸಂದೇಹವಿಲ್ಲ.

೪ ಬಾಲಕನಿಗೆ ಮನೆಯಲ್ಲಿ ದೊರೆಯಲು ಸಾಧ್ಯವಿರುವ ಶಿಕ್ಷಣವನ್ನು ಕೊಡುವುದಕ್ಕಾಗಿ ಪಾಠಶಾಲೆಗಳು ಬೇಕಾಗುವುದಿಲ್ಲ. ಆದುದರಿಂದ ತಂದೆ ತಾಯಿಗಳು ಸುಸಂಸ್ಕೃತರಾಗುವಂತೆ ಶಿಕ್ಷಣ ಕೊಟ್ಟರೆ ಶಿಕ್ಷಣದ ವೆಚ್ಚವು ಕಡಿಮೆಯಾಗುವುದು.

೫ ಪ್ರಾಥಮಿಕ ಶಿಕ್ಷಣವು ಹೆಚ್ಚಾಗಿ ಮನೆಯಲ್ಲಿಯೆ ದೊರೆಯಬೇಕು.

## ೧೯ ಉಪಸಂಹಾರ

ಪೂಜ್ಯ ಗಾಂಧೀಜಿಯವರು 'ಸತ್ಯಾಗ್ರಹಾಶ್ರಮದ ಇತಿಹಾಸ' ವನ್ನು ಬರೆಯಲಾರಂಭಿಸಿದ್ದಾರೆ. ಅದರಲ್ಲಿ ಶಿಕ್ಷಣವನ್ನು ಕುರಿತ ಪ್ರಕರಣದಲ್ಲಿ ಅವರು ತಮ್ಮ ಅಭಿಪ್ರಾಯಗಳ ಉಪಸಂಹಾರ ಮಾಡಿದ್ದಾರೆ. ಅದನ್ನೆ ಈ ಖಂಡಕ್ಕೆ ಜೋಡಿಸಿದೆ. ಅವರ ಆ ಹಸ್ತಲಿಖಿತ ಭಾಷೆಯಲ್ಲಿಯೂ ಕೆಳಗೆ ಕೊಟ್ಟಭಾಷೆಯಲ್ಲಿಯೂ ಅಲ್ಲಲ್ಲಿ ಸ್ವಲ್ಪ ಅಂತರವಿದೆ. ಆ ಅಂತರವು ಗಾಂಧೀಜಿಯವರೇ ಪುಸ್ತಕವನ್ನು ತಿದ್ದುವಾಗ ಆಗಿದೆ. ಈ ಪ್ರಕರಣದಲ್ಲಿಯ ವಿಚಾರಗಳು ಹಿಂದಿನ ಪ್ರಕರಣಗಳಲ್ಲಿ ಒಂದಿಲ್ಲೊಂದು ರೂಪದಲ್ಲಿ ಬಂದೇಬಿಟ್ಟಿವೆ. — ಕಿ. ಘ. ಮ.

ಶಿಕ್ಷಣದ ವಿಷಯದಲ್ಲಿ ನನ್ನ ಅಭಿಪ್ರಾಯವು ಕೆಳಗಿನಂತಿದೆ:

ಪ್ರಥಮ ಕಾಲ

೧ ಬಾಲಕ ಬಾಲಿಕೆಯರಿಗೆ ಜೊತೆಯಲ್ಲಿಯೆ ಶಿಕ್ಷಣ ಕೊಡತಕ್ಕದ್ದು.

೨ ಅವರು ತಮ್ಮ ವೇಳೆಯನ್ನು ವಿಶೇಷವಾಗಿ ಶಾರೀರಿಕ ಕಾರ್ಯಗಳಲ್ಲಿಯೆ ವೆಚ್ಚಮಾಡುತ್ತಿರಬೇಕು. ಅವರು ಮಾಡುವ ಕಾರ್ಯಗಳು ಕೂಡ ಶಿಕ್ಷಣ ಕೊಡುವವನ ಎದುರಿನಲ್ಲಿಯೆ ಆಗುತ್ತಿರಬೇಕು. ಶಾರೀರಿಕ ಕಾರ್ಯಗಳು ಶಿಕ್ಷಣದ ವಿಭಾಗವೆನಿಸಬೇಕು.

೩ ಪ್ರತಿಯೊಬ್ಬ ಬಾಲಕ ಬಾಲಿಕೆಯ ಒಲವನ್ನು ಪರೀಕ್ಷಿಸಿ ಕೆಲಸವನ್ನು ಒಪ್ಪಿಸಬೇಕು.

೪ ಕೆಲಸವನ್ನು ತೆಗೆದುಕೊಳ್ಳುತ್ತಿರುವಾಗಲೇ ಆ ಕೆಲಸದ ತಿಳಿವಳಿಕೆ ಕೊಡಬೇಕು.

೫ ಬಾಲಕನಿಗೆ ತಿಳಿವಳಿಕೆ ಬಂದ ಮೇಲೆ ಸಾಮಾನ್ಯ ಜ್ಞಾನವನ್ನು ಮಾಡಿಕೊಡಬೇಕು. ಈ ಜ್ಞಾನದಾನವು ಅಕ್ಷರಜ್ಞಾನದ ಮೊದಲೇ ಪ್ರಾರಂಭವಾಗತಕ್ಕದ್ದು.

೬ ಅಕ್ಷರಜ್ಞಾನವು ಲೇಖನ (ಚಿತ್ರ) ಕಲೆಯ ಭಾಗವೆಂದೆಣಿಸಿ ಮೊದಲು ಬಾಲಕನಿಗೆ ಭೂಮಿತಿಯ ಆಕೃತಿಗಳನ್ನು ತೆಗೆಯಲು ಕಲಿಸಿ, ಬೆರಳುಗಳಿಗೆ ಚನ್ನಾಗಿ ಅಭ್ಯಾಸವಾದ ಮೇಲೆ ಅಕ್ಷರಗಳನ್ನು ಕಲಿಸಬೇಕು. ಅರ್ಥಾತ್ ಮೊದಲಿನಿಂದಲೆ ಶುದ್ಧ ಅಕ್ಷರಗಳನ್ನು ಬರೆಯಲು ಕಲಿಸಬೇಕು.

೭ ಬರಹಕ್ಕಿಂತ ಮೊದಲು ಬಾಲಕನು ಓದಲು ಕಲಿಯಬೇಕು. ಅಕ್ಷರಗಳು ಚಿತ್ರಗಳೆಂದು ತಿಳಿದು ಅವನ್ನು ಗುರುತಿಸಲು ಕಲಿತನಂತರ ಬರೆಯಲು ಕಲಿಯಬೇಕು.

೮ ಈ ರೀತಿ ಶಿಕ್ಷಕನ ಮುಖದಿಂದ ಜ್ಞಾನವನ್ನು ಪಡೆದ ಬಾಲಕನು ಎಂಟು ವರ್ಷದಲ್ಲಿ ತನ್ನ ಯೋಗ್ಯತೆಗೆ ತಕ್ಕಂತೆ ಹೆಚ್ಚು ಜ್ಞಾನ ವನ್ನು ಪಡೆಯಬೇಕು.

೯ ಬಾಲಕನಿಗೆ ಬಲಾತ್ಕಾರದಿಂದ ಏನನ್ನೂ ಕಲಿಸಕೂಡದು.

೧೦ ತಾನು ಯಾವುದನ್ನು ಕಲಿಯುವನೊ ಅದರಲ್ಲಿ ಬಾಲಕನಿಗೆ ರುಚಿ ಯುಂಟಾಗಬೇಕು.

೧೧ ಬಾಲಕನಿಗೆ ಶಿಕ್ಷಣವು ಆಟದಂತೆ ತೋರಬೇಕು. ಆಟವು ಕೂಡ ಶಿಕ್ಷಣದ ಒಂದು ಅನಿವಾರ್ಯ ಅಂಗವೇ ಆಗಿದೆ.

೧೨ ಬಾಲಕನ ಎಲ್ಲ ಶಿಕ್ಷಣವು ಮಾತೃಭಾಷೆಯ ಮುಖಾಂತರವೇ ನಡೆಯತಕ್ಕದ್ದು.

೧೩ ಬಾಲಕನಿಗೆ ಹಿಂದಿ ಮತ್ತು ಉರ್ದುವನ್ನು ರಾಷ್ಟ್ರಭಾಷೆಯೆಂದು ಕಲಿಸಬೇಕು. ಈ ಭಾಷೆಗಳನ್ನು ಕೂಡ ಅಕ್ಷರಜ್ಞಾನಕ್ಕಿಂತ ಪೂರ್ವದಲ್ಲಿಯೆ ಪ್ರಾರಂಭಿಸಬೇಕು.

೧೪ ಧಾರ್ಮಿಕ ಶಿಕ್ಷಣವು ಅನಿವಾರ್ಯವೆಂದು ತಿಳಿಯಬೇಕು. ಈ ಶಿಕ್ಷಣವನ್ನು ಬಾಲಕನು ಪುಸ್ತಕದಿಂದ ಪಡೆಯುವುದರ ಬದಲು ಶಿಕ್ಷಕನ ವರ್ತನೆಯಿಂದ ಮತ್ತು ಅವನ ಮುಖದಿಂದ ಪಡೆಯಬೇಕು.

ದ್ವಿತೀಯ ಕಾಲ

೧೫ ೯ ರಿಂದ ೧೬ ವರ್ಷಗಳ ವರೆಗಿನ ಕಾಲವು ದ್ವಿತೀಯ ಕಾಲವೆನಿಸು ವುದು.

೧೬ ದ್ವಿತೀಯ ಕಾಲದ ಕೊನೆಯ ವರೆಗೂ ಬಾಲಕ–ಬಾಲಿಕೆಯರ ಶಿಕ್ಷಣವು ಜೊತೆಯಲ್ಲಿಯೆ ಸಾಗಿದರೆ ಒಳಿತು.

೧೭ ದ್ವಿತೀಯ ಕಾಲದಲ್ಲಿ ಹಿಂದೂ ಬಾಲಕನಿಗೆ ಸಂಸ್ಕೃತಜ್ಞಾನವೂ ಮುಸಲ್ಮಾನ ಬಾಲಕನಿಗೆ ಅರಬ್ಬಿಯ ಜ್ಞಾನವೂ ಆಗಬೇಕು.

೧೮ ಈ ಕಾಲದಲ್ಲಿಯೂ ಶಾರೀರಿಕ ಕೆಲಸವು ಹಾಗೆಯೆ ಮುಂದುವರಿ ಯಬೇಕು. ಅಕ್ಷರಜ್ಞಾನಕ್ಕಾಗಿ ಸಮಯವನ್ನು ಬೇಕಾದಂತೆ ಬೆಳೆಸಿಕೊಳ್ಳ ಬೇಕು.

೧೯ ಬಾಲಕರ ತಂದೆ–ತಾಯಂದಿರು ಯಾವ ನಿಶ್ಚಿತ ಉದ್ಯೋಗವನ್ನು ಮಾಡಲು ತೊಡಗಿರುತ್ತಾರೊ ಆ ಉದ್ಯೋಗದ ಜ್ಞಾನವನ್ನೂ ಬಾಲಕನಿಗೆ ಈ ಕಾಲದಲ್ಲಿ ಮಾಡಿಕೊಡಬೇಕು. ತಮ್ಮ ಮಾತಾಪಿತೃಗಳು ಮಾಡುವ

ಉದ್ಯೋಗವನ್ನೆ ಮಾಡಿ ಹೊಟ್ಟೆ ತುಂಬಿಕೊಳ್ಳಲು ಬಯಸುವಂತೆ ಅವನಿಗೆ ಆ ಉದ್ಯೋಗದ ಶಿಕ್ಷಣವನ್ನಿತ್ತು ತಯಾರು ಮಾಡಬೇಕು. ಈ ನಿಯಮವು ಬಾಲಿಕೆಯರಿಗೆ ಅನ್ವಯಿಸುವುದಿಲ್ಲ.

೨೦ ಹದಿನಾರನೆ ವರ್ಷವು ಮೊದಲಾಗುವುದರೊಳಗಾಗಿ ಬಾಲಕಬಾಲಿಕೆಯರಿಗೆ ಜಗತ್ತಿನ ಇತಿಹಾಸ, ಭೂಗೋಲ, ವನಸ್ಪತಿಶಾಸ್ತ್ರ, ಆಕಾಶ ದರ್ಶನ, ಗಣಿತ, ಭೂಮಿತಿ ಮತ್ತು ಬೀಜಗಣಿತದ ಸಾಮಾನ್ಯ ಜ್ಞಾನವಾಗಿರಬೇಕು.

೨೧ ಹದಿನಾರು ವರ್ಷದ ಬಾಲಕ-ಬಾಲಿಕೆಯರಿಗೆ ಹೊಲಿಯಲು, ಅಡಿಗೆಮಾಡಲು ಬರುತ್ತಿರಬೇಕು.

ತೃತೀಯ ಕಾಲ

೨೨ ೧೬ರಿಂದ ೨೫ ವರ್ಷಗಳ ವರೆಗಿನ ಕಾಲವು ತೃತೀಯ ಕಾಲ. ಈ ಕಾಲದಲ್ಲಿ ಪ್ರತಿಯೊಬ್ಬ ಯುವಕ-ಯುವತಿಗೆ ಅವರವರ ಇಚ್ಛೆಯಂತೆ ಮತ್ತು ಅನುಕೂಲತೆಯ ಮೇರೆಗೆ ಶಿಕ್ಷಣವು ದೊರೆಯಬೇಕು.

೨೩ ೯ ವರ್ಷದ ಮೇಲೆ ಪ್ರಾರಂಭಿಸತಕ್ಕ ಶಿಕ್ಷಣವು ಸ್ವಾವಲಂಬಿ ಶಿಕ್ಷಣವಾಗಿರತಕ್ಕದ್ದು. ವಿದ್ಯಾರ್ಥಿಗಳು ಕಲಿಯುತ್ತಿರುವಾಗಲೆ ಕೆಲವೊಂದು ಉದ್ಯೋಗಗಳಲ್ಲಿ ತೊಡಗಿ ಅವುಗಳಿಂದ ದೊರೆತ ಉತ್ಪನ್ನದಿಂದ ತಮ್ಮ ಶಿಕ್ಷಣಕ್ಕೆ ತಗಲುವ ವೆಚ್ಚವನ್ನು ಸಾಗಿಸಿಕೊಂಡು ಹೋಗಬೇಕು.

೨೪ ಪಾಠಶಾಲೆಗಳಲ್ಲಿ ಉತ್ಪನ್ನವು ಮೊದಲಿನಿಂದಲೆ ಬರಲು ತೊಡಗಬೇಕು. ಆದರೆ ಮೊದಲನೆ ವರ್ಷದಲ್ಲಿ ವೆಚ್ಚಕ್ಕೆ ಸಾಕಾಗುವಷ್ಟು ಉತ್ಪನ್ನವು ಬರಲಿಕ್ಕಿಲ್ಲ.

೨೫ ಶಿಕ್ಷಕವರ್ಗದ ಸಂಬಳವು ಹೆಚ್ಚಾಗಿರಕೂಡದು. ಅವರ ಹೊಟ್ಟೆ ಬಟ್ಟೆಗೆ ಸಾಕಾಗುವಷ್ಟು ದೊರೆಯಬೇಕು. ಅವರಲ್ಲಿ ಸೇವಾವೃತ್ತಿಯು ಇರಬೇಕು. ಮನಬಂದಂಥ ಶಿಕ್ಷಕನಿಂದ ಪ್ರಾಥಮಿಕ ಶಿಕ್ಷಣವನ್ನು ಪ್ರಾರಂಭಿಸುವ ಪರಿಪಾಠವು ನಿಂದನೀಯವಾಗಿದೆ. ಶಿಕ್ಷಕರೆಲ್ಲರೂ ಸುಚರಿತ್ರೆಯುಳ್ಳವರಿರಬೇಕು.

೨೬ ಶಿಕ್ಷಕರಿಗೋಸ್ಕರ ದೊಡ್ಡ ಮತ್ತು ಹೆಚ್ಚು ಬಾಡಿಗೆಯ ಮನೆಗಳ ಅವಶ್ಯಕತೆಯು ಇರುವುದಿಲ್ಲ.

೨೭ ಇಂಗ್ಲಿಷನ್ನು ಭಾಷಾವಿಷಯವೆಂದು ಕಲಿಯಬೇಕು. ಶಿಕ್ಷಣಕ್ರಮದಲ್ಲಿ ಅದಕ್ಕೆ ಸ್ಥಾನವೂ ಇರತಕ್ಕದ್ದು. ಹಿಂದಿಯು ಹೇಗೆ ರಾಷ್ಟ್ರಭಾಷೆಯೊ

ಹಾಗೆಯೆ ಇಂಗ್ಲಿಷು ಪರರಾಷ್ಟ್ರಗಳೊಡನೆ ವ್ಯವಹಾರ ಮತ್ತು ವ್ಯಾಪಾರ ಮಾಡುವ ಭಾಷೆ.

### ಸ್ತ್ರೀಶಿಕ್ಷಣ *

(೨೮) ಸ್ತ್ರೀಯರಿಗೆ ಒಂದು ವಿಶಿಷ್ಟ ತರದ ಶಿಕ್ಷಣವು ಯಾವುದು, ಅದನ್ನು ಎಲ್ಲಿಂದ ಪ್ರಾರಂಭಿಸಬೇಕು, ಎಂಬ ವಿಷಯದಲ್ಲಿ ನಾನು ಯೋಚನೆ ಮಾಡಿದ್ದೇನೆ, ಬರೆದಿದ್ದೇನೆ. ಆದರೆ ಅವೆಲ್ಲ ವಿಚಾರಗಳು ಇನ್ನೂ ಧೃಡವಾಗಿಲ್ಲ. ಆದರೂ ಶಿಕ್ಷಣವನ್ನು ಕುರಿತು ಪುರುಷರಿಗೆ ಇರುವಷ್ಟೆ ಅನುಕೂಲತೆಗಳು ಸ್ತ್ರೀಯರಿಗೂ ಇರಬೇಕೆಂದು ನನ್ನ ದೃಢ ಅಭಿಪ್ರಾಯ. ಅಗತ್ಯವಿದ್ದಲ್ಲಿ ವಿಶೇಷ ಅನುಕೂಲತೆಗಳನ್ನೂ ಒದಗಿಸಿ ಕೊಡಬೇಕು.

### ಪ್ರೌಢಶಿಕ್ಷಣ

(೨೯) ವಯಸ್ಸಿಗೆ ಬಂದು ಕಲಿಯದ್ರೆ ಇಷ್ಟ ಸ್ತ್ರೀ-ಪುರುಷರಿಗೆ ವರ್ಗಗಳು ಬೇಕೇಬೇಕು. ಇವರೆಲ್ಲರಿಗೂ ಅಕ್ಷರಜ್ಞಾನವು ಇರಲೇಬೇಕೆಂದು ನನ್ನ ಅಭಿಪ್ರಾಯವಲ್ಲ. ಅವರಿಗೆ ವ್ಯಾಖ್ಯಾನ ಮುಂತಾದವುಗಳ ಮುಖಾಂತರ ಸಾಮಾನ್ಯ ಜ್ಞಾನವು ದೊರೆಯಬೇಕು, ಇದಕ್ಕಾಗಿ ಅನುಕೂಲತೆಗಳು ಇರಬೇಕು. ಅಕ್ಷರಜ್ಞಾನದ ಬಯಕೆ ಇದ್ದವರಿಗಂತೂ ಸಾಕಷ್ಟು ಅನುಕೂಲತೆಗಳು ಇರಬೇಕು.

## ದ್ವಾದಶ ಖಂಡ

## ಸಾಹಿತ್ಯವೂ ಕಲೆಯೂ



### ೧ ಸಾಮಾನ್ಯ ಟೀಕೆ

೧ ಸಾಹಿತ್ಯ ಮತ್ತು ಕಲೆ ಇವೆರಡೂ ಸತ್ಯವೂ ಕಲ್ಯಾಣಕರವೂ ಮತ್ತು ಉಪಯುಕ್ತತೆಯ ಒರೆಗಲ್ಲಿಗೆ ಹತ್ತಿ ಪಾರಾದವೂ ಇರಬೇಕು.

---

* ೨೮-೨೯ ನೇ ಸೂತ್ರಗಳನ್ನು ಗಾಂಧಿಜಿಯವರು ಉಪಸಂಹಾರದ ಕ್ರಮದಲ್ಲಿ ಬರೆದಿಲ್ಲ, ಇದೇ ಪ್ರಕರಣದಲ್ಲಿ ಸ್ವತಂತ್ರವಾಗಿ ಬರೆದಿದ್ದಾರೆ. ಆದ್ದರಿಂದಲೆ ಈ ಸೂತ್ರಗಳ ಅಂಕೆಗಳನ್ನು ಕೌಂಸಿನಲ್ಲಿ ( ) ಬರೆದಿದೆ.

೨ ಇಲ್ಲಿ 'ಸತ್ಯ'ವನ್ನು ವ್ಯಾಪಕಾರ್ಥದಲ್ಲಿ ಉಪಯೋಗಿಸಿದೆಯೆಂದು ತಿಳಿಯಬೇಕು. ಬರಿಯ ವಿವರಣೆ ಅಥವಾ ಸಂಗತಿ ಸತ್ಯವಿದ್ದರೆ ಅದು ಸತ್ಯವೆನ್ನಲಾಗದು. ಇವರ ಜೊತೆಗೆ ಸಿದ್ಧಾಂತಗಳೂ ಅಥವಾ ಗುರಿಯೂ ಸತ್ಯವಿದ್ದರೆ ಮಾತ್ರವೇ ಅದು ಸತ್ಯ. ಇಲ್ಲಿ ಸತ್ಯವೆಂಬ ಶಬ್ದವನ್ನು ಈ ಅರ್ಥದಿಂದ ಉಪಯೋಗಿಸಿದೆ. ಉದಾಹರಣೆಗೆ ಹರಿಶ್ಚಂದ್ರನ ಅಥವಾ ರಾಮಚಂದ್ರನ ಕತೆ. ಈ ಕತೆ ಕೇವಲ ಕಾಲ್ಪನಿಕವಿರಬಹುದು. ಆದರೆ ಅದರೊಳಗಿನ ಸಿದ್ಧಾಂತಗಳು ಮತ್ತು ಗುರಿಗಳು ಸತ್ಯವೂ ಹಿತಕರವೂ ಉಪಯುಕ್ತವೂ ಆಗಿವೆ. ಆದುದರಿಂದ ಈ ಕತೆಯ ಸಾಹಿತ್ಯವು ಈ ಸತ್ಯದ ಒರೆಗಲ್ಲಿಗೆ ತಾಗಿ ಉತ್ತೀರ್ಣವಾಗುವುದು.

೩ ಸಂಗತಿಗಳು ಮತ್ತು ವರ್ಣನೆಗಳು ಸತ್ಯವಿರಬಹುದು. ಅವು ಚಿತ್ರವನ್ನು ಇದ್ದಕ್ಕಿದ್ದ ಹಾಗೆ ನಮ್ಮೆದುರು ಇಡಬಹುದು. ಆದರೆ ಅಷ್ಟರಿಂದಲೆ ಅವು ಯೋಗ್ಯ ಸಾಹಿತ್ಯವಾಗಿವೆ, ಕಲಾತ್ಮಕವಾಗಿವೆಯೆಂದು ಹೇಳಲಾಗುವುದಿಲ್ಲ. ಎಷ್ಟೋ ಸಂಗತಿಗಳು ನಿಜವಿದ್ದರೂ ಅವು ಅಹಿತಕರವೂ ನಿರುಪಯುಕ್ತವೂ ಇರುವವು ಅಥವಾ ಹಾನಿಕರವಿರುವವು. ಅವುಗಳನ್ನು ಜನರೆದುರು ಇಡುವಂಥ ಸಾಹಿತ್ಯವು ಮತ್ತು ಕಲೆಯು ಹಾನಿಕರವೆ ಸರಿ. ಉದಾಹರಣೆಗೆ: ವೇಶ್ಯಾಸದನಗಳ ಚಿತ್ರಗಳು, ವರ್ಣನೆಗಳು.

೪ ಎಷ್ಟೋ ಸಲ ಕೊನೆಯಲ್ಲಿ ಸತ್ಯ, ನೀತಿ, ಮತ್ತು ಧರ್ಮವೆ ಜಯ ಪಡೆದದ್ದನ್ನು ತೋರಿಸಿದರೂ ಮೊದಲು ಚಿತ್ರಿಸಲ್ಪಡುವ ಅಸತ್ಯದ, ಅನೀತಿಯ, ಅಧರ್ಮದ ಭೀಭತ್ಸ ದೃಶ್ಯಗಳು ಜನರ ಅಧಮಪ್ರವೃತ್ತಿಗಳಿಗೆ ಉತ್ತೇಜನವನ್ನೀಯುವವು. ಇಂಥ ಸಾಹಿತ್ಯವೂ ಕಲೆಯೂ ಹೇಸಿಕೆಯೆನಿಸುವವು.

## ೨ ಸಾಹಿತ್ಯದ ಶೈಲಿ

೧ ಎಷ್ಟೋ ಸಾಹಿತ್ಯವು ವಿದ್ವಾಂಸರಿಗೆ ಇಲ್ಲವೆ ಪರಂಪರೆಯಿಂದ ಅದನ್ನು ಅರಿತವರಿಗೆ ಮಾತ್ರ ತಿಳಿಯುವುದು. ಇಷ್ಟು ಗಹನವಿದ್ದರೂ ಅದು ಉತ್ಕೃಷ್ಟವಿರುವುದು ನಿಜವು. ಸಾಹಿತ್ಯದ ಈ ಸ್ವಭಾವವು ಒಂದು ಗುಣವಲ್ಲ, ಕುಂದು. ವಿಶಿಷ್ಟ ಕಾರಣಗಳೇನಾದರೂ ಇಲ್ಲದಿದ್ದಲ್ಲಿ ಜನಸಾಮಾನ್ಯರಿಗೂ ಅರ್ಥವಾಗುವಂತಹ ಶೈಲಿಯನ್ನೆ, ಭಾಷೆಯನ್ನೆ ಸಾಹಿತ್ಯಕಾರನು ಉಪಯೋಗಿಸಲು ಯತ್ನಿಸಬೇಕು.

೨ ಇದಕ್ಕೆ ಈ ಕೆಳಗಿನ ಕೆಲವು ಅಪವಾದಗಳೂ ಉಂಟು. ಅವುಗಳಲ್ಲಿ ಕೆಲವು ಈ ರೀತಿ ಇರುವವು:

(ಅ) ಭಾಷೆಯು ಸುಲಭ ಮತ್ತು ಸುಬೋಧವಿದ್ದರೂ ಸಾಹಿತ್ಯದ ವಿಷಯವು ಹೊಸದು, ಅಸಾಧಾರಣ, ಕಠಿಣ ಮತ್ತು ಗಹನವಾದದ್ದು ಇದ್ದರೆ ಅದನ್ನು ಸಾಮಾನ್ಯ ಜನರು ಬಲ್ಲಿದರ ಸಹಾಯವಿಲ್ಲದೆ ತಿಳಿದುಕೊಳ್ಳಲಾರರು. ಉದಾಹರಣೆಗೆ: ಭಗವದ್‌ಗೀತೆ. ಗೀತೆಯ ಭಾಷೆಯು ಸಾಧಾರಣ ಸಂಸ್ಕೃತ ಬಲ್ಲ ಸಾಮಾನ್ಯ ಜನರಿಗೂ ತಿಳಿಯುವಂಥದು. ಆದರೂ ಅದರ ತಾತ್ಪರ್ಯವು ಸಾಮಾನ್ಯ ಜನರಿಗೆ ತಿಳಿಯುವುದಿಲ್ಲ. ಇದಕ್ಕಾಗಿ ವಿದ್ವಾಂಸರ ಟೀಕೆಗಳ ಸಹಾಯವನ್ನು ಕೋರಬೇಕಾಗುತ್ತದೆ. ಏಕೆಂದರೆ ಅದರ ವಿಷಯವು ಕಠಿಣವಿರುವುದು, ವಿಚಾರಗಳು ಗಹನವಿರುವವು. ಬರಿಯ ಸಂಸ್ಕೃತ ಭಾಷಾಜ್ಞಾನದಿಂದ ಅದನ್ನು ತಿಳಿದುಕೊಳ್ಳಲಾಗುವುದಿಲ್ಲ.

(ಆ) ಇದೇ ರೀತಿಯ ಶಾಸ್ತ್ರೀಯ ಗ್ರಂಥಗಳೂ ಉಂಟು. ಅವುಗಳಲ್ಲಿ ಒಂದು ವಿಶಿಷ್ಟ ತರದ ಪರಿಭಾಷೆಯು ಉಪಯೋಗಿಸಲ್ಪಟ್ಟಿದೆ. ಆದ್ದರಿಂದ ಅವು ಸಾಮಾನ್ಯ ಜನರಿಗೆ ತಿಳಿಯುವುದಿಲ್ಲ. ಇದರಲ್ಲಿ ಆ ಗ್ರಂಥಗಳ ದೋಷವೇನೂ ಇಲ್ಲ. ಉದಾಹರಣೆಗೆ: ತರ್ಕಶಾಸ್ತ್ರ, ಕಾನೂನು, ವೈದ್ಯ ಗ್ರಂಥಗಳು ಇತ್ಯಾದಿ.

(ಇ) ಮನೋರಂಜನೆಗಾಗಿ ರಚಿಸಿದ ಒಗಟುಗಳು, ಸಮಸ್ಯೆಗಳು, ಗೂಢೋಕ್ತಿಗಳು, ಕಬೀರನಂಥವರ ಗೂಢ ಕಾವ್ಯಗಳು, ತಿರುವು ಮುರುವು ವಾಕ್ಯಗಳು ಮುಂತಾದವುಗಳ ಅರ್ಥವು ಸಾಮಾನ್ಯವಾಗಿ ಪರಂಪರೆಯಿಂದಲೆ ತಿಳಿಯಬಲ್ಲದು. ಇಂಥ ಸಾಹಿತ್ಯವು ಅಲ್ಪ ಪ್ರಮಾಣದಲ್ಲಿದ್ದು ಜ್ಞಾನವನ್ನು ಕೊಡುವಂಥದೂ ದೋಷವಿಲ್ಲದ್ದೂ ಇದ್ದರೆ ಅದನ್ನು ಯಾರೂ ವಿರೋಧಿಸುವುದಿಲ್ಲ.

೩ ಮೊದಲಿನ ಎರಡು ಪ್ರಕಾರದ ಅಪವಾದಗಳಲ್ಲಿ ತೋರಿಸಿದ ಸಾಹಿತ್ಯದಿಂದ ಸಾಮಾನ್ಯ ಜನರಿಗೆ ಅವಶ್ಯಕವಾದ ಮತ್ತು ಉಪಯೋಗಿಯಾದಷ್ಟನ್ನೇ ಆಯ್ದುಕೊಂಡು ಅದನ್ನು ಸರಳವೂ ಸುಲಭವೂ ಆದ ಭಾಷೆಯಲ್ಲಿ ಬರೆಯುವುದು ಆ ಆ ವಿಷಯಗಳಲ್ಲಿ ಪ್ರವೀಣರಾದವರ ಕರ್ತವ್ಯ.

## ೩ ಭಾಷಾಂತರಗಳು

೧ ಅನ್ಯ ಭಾಷೆಗಳಲ್ಲಿದ್ದ ಉತ್ಕೃಷ್ಟ ಸಾಹಿತ್ಯದ ಪರಿಚಯುವನ್ನು ತನ್ನ ಭಾಷೆಯ ಜನರಿಗೂ ಮಾಡಿಕೊಡುವುದು ಕೂಡ ಸಾಹಿತ್ಯದ ಒಂದು ಉಪಯುಕ್ತ ಅಂಗ.

೨ ಉತ್ತಮ ಭಾಷಾಂತರದಲ್ಲಿ ಕೆಳಗಿನ ಗುಣಗಳಿರಬೇಕು:

(ಅ) ಶೈಲಿಯು ಸ್ವಭಾಷೆಯಲ್ಲಿಯೆ ಯೋಚಿಸಿ ಬರೆದಷ್ಟು ಸರಲವೂ ಸುಬೋಧವೂ ಉತ್ತಮೋತ್ತಮ ವಾಕ್ಪ್ರಯೋಗಗಳಿಂದ ಕೂಡಿದ್ದೂ ಇರಬೇಕು. ಅನುವಾದವು, ಮೂಲಕಾವ್ಯದ ವಿಶಿಷ್ಟ ಶಬ್ದಗಳ ಮತ್ತು ವಾಕ್ಪ್ರಯೋಗಗಳ ಅರ್ಥವು ತಿಳಿಯದಿದ್ದವರಿಗೆ ಕೂಡ ತಿಳಿಯುವಂತಿರಬೇಕು.

(ಆ) ಅನುವಾದದಲ್ಲಿ ಇಂಥ ವಿಶಿಷ್ಟ ಶಬ್ದಗಳನ್ನೂ ವಾಕ್ಪ್ರಯೋಗಗಳನ್ನೂ ಉಪಯೋಗಿಸಬೇಕಾದ ಸಂದರ್ಭದಲ್ಲಿ ಅಥವಾ ಅಪರಿಚಿತ ರೂಪಗಳನ್ನೂ ದೃಷ್ಟಾಂತಗಳನ್ನೂ ದಂತಕಥೆಗಳನ್ನೂ ಉಲ್ಲೇಖಿಸಲೆಬೇಕಾದ ಸಂದರ್ಭದಲ್ಲಿ ಟಿಪ್ಪಣಿಗಳಲ್ಲಿ ಅವುಗಳ ಸ್ಪಷ್ಟೀಕರಣ ಮಾಡಬೇಕು.

(ಇ) ಭಾಷಾಂತರಕಾರನು ಮೂಲ ಪುಸ್ತಕವನ್ನು ಅರೆದು ಕುಡಿದು ಚನ್ನಾಗಿ ಪಚನಮಾಡಿಕೊಂಡ ಬಳಿಕ ತನ್ನ ಭಾಷೆಗೆ ರೂಪಾಂತರಿಸಿರುವನೊ ಏನೊ ಎನ್ನುವಂತೆ ಅನುವಾದವು ಎನಿಸುತ್ತಿರಬೇಕು.

(ಈ) ಮೂಲ ಪುಸ್ತಕದ ವೈಶಿಷ್ಟ್ಯವೂ ಗುಣಗಳೂ ಅನುವಾದದಲ್ಲಿ ಇಳಿಯದಿದ್ದರೆ ಅದು ಸಾಧಾರಣ ತರಗತಿಯ ಅನುವಾದವೆನಿಸುವುದು.

೩ ಆದ್ದರಿಂದ ಅನುವಾದಿಸುವ ಕಾರ್ಯವು ಸ್ವತಂತ್ರ ಗ್ರಂಥರಚನೆಗಿಂತ ಹಗುರಾದದ್ದಲ್ಲ. ಮೂಲ ಲೇಖಕನೊಡನೆ ಸಂಪೂರ್ಣ ಸಮಭಾವನೆಯನ್ನಿಡದ, ಸಮರಸನಾಗದ ಮತ್ತು ಅವನ ಮನೋಗತವನ್ನು ಗ್ರಹಿಸಲು ಅಸಮರ್ಥನಾದ ಮನುಷ್ಯನು ಅವನ ಪುಸ್ತಕವನ್ನು ಅನುವಾದಿಸಬಾರದು.

೪ ಭಾಷಾಂತರಿಸುವಾಗ ಹಲವು ಬಗೆಯ ವಿಚಾರಗಳನ್ನು ಮಾಡಬೇಕಾಗುವುದು, ವಿವೇಕವನ್ನು ಉಪಯೋಗಿಸಬೇಕಾಗುವುದು. ಎಷ್ಟೋ ಪುಸ್ತಕಗಳನ್ನು ಅಕ್ಷರಶಃ ಅನುವಾದಿಸಬೇಕಾಗುವುದು; ಎಷ್ಟೋ ಪುಸ್ತಕಗಳ ಸಾರವನ್ನು ತೆಗೆದರೆ ಸಾಕಾಗುವುದು; ಎಷ್ಟೋ ಪುಸ್ತಕಗಳನ್ನು ತಮ್ಮ ಸಮಾಜಕ್ಕೆ ತಿಳಿಯುವಂತೆ ವೇಷಾಂತರ ಮಾಡಿಕೊಡಬೇಕಾಗುವುದು; ಎಷ್ಟೋ ಪುಸ್ತಕಗಳು ಅತ್ಯಂತ ಉತ್ಕೃಷ್ಟವಾಗಿದ್ದರೂ ನಮ್ಮ ಸಮಾಜವು ಆ ಗ್ರಂಥಕ್ಕೆ ಸಂಬಂಧಪಟ್ಟ ಸಮಾಜಕ್ಕಿಂತ ತೀರ ಭಿನ್ನವಾಗಿರಬಹು

ದಾದ್ದರಿಂದ ಅವುಗಳ ಭಾಷಾಂತರವು ನಮಗೆ ಬೇಕಾಗುವುದೆ ಇಲ್ಲ. ಎಷ್ಟೋ ಪುಸ್ತಕಗಳನ್ನು ಅಕ್ಷರಶಃ ಭಾಷಾಂತರಿಸುವುದಲ್ಲದೆ ಅವರ ಸಾರಾಂಶ ವನ್ನು ಅನುವಾದಿಸುವುದೂ ಅವಶ್ಯವೆನಿಸಬಹುದು.

## ೪ ಶುದ್ಧ ಲೇಖನ

೧ ಭಾಷೆಯ ವೃದ್ಧಿಯೊಡನೆಯೆ ವ್ಯಾಕರಣದ ಲೇಖನದ ನಿಯಮ ಗಳು ಸ್ವಲ್ಪ ಹೆಚ್ಚುಕಡಿಮೆ ಬದಲಾಗುತ್ತಿರುವುದು ಸ್ವಾಭಾವಿಕ. ಆದರೂ ಸಾಮಾನ್ಯ ವ್ಯವಹಾರದಲ್ಲಿ ಉಪಯೋಗಿಸುತ್ತಿರುವ ಶಬ್ದಗಳ, ವ್ಯಾಕರಣದ, ಮತ್ತು ಶುದ್ಧಲೇಖನದ ನಿಯಮಗಳು ನಿಶ್ಚಿತವಾಗುವುದು ಅವಶ್ಯ.

೨ ವಿರಳ ಶಬ್ದಗಳ ಶುದ್ಧತೆಯನ್ನು ಕುರಿತು ವಿದ್ವಾಂಸರಲ್ಲಿ ಮತಭೇದ ವಿರುವ ಸಂದರ್ಭವಿದೆ. ಆದರೆ ಸರ್ವಸಾಮಾನ್ಯ ಶಬ್ದಗಳ ಶುದ್ಧತೆಯ ಬಗೆಗೆ ವಿದ್ವಾಂಸರೆಲ್ಲರೂ ಒಂದೇ ಧೋರಣೆ ಸ್ವೀಕರಿಸಬೇಕು.

೩ ಹೀಗೆ ಶಬ್ದಗಳ ರೂಪವನ್ನು ನಿಶ್ಚಯಿಸುವಾಗ ರೂಢಿ, ಬರೆಯುವ ಮತ್ತು ಅಚ್ಚು ಹಾಕುವ ಅನುಕೂಲತೆ, ಉಚ್ಚಾರ, ವ್ಯುತ್ಪತ್ತಿ, ವ್ಯಾಕ ರಣದ ನಿಯಮ ಮುಂತಾದ ವಿಷಯಗಳತ್ತ ಗಮನ ಕೊಡಲೇ ಬೇಕಾಗು ವುದು. ಹಲವೊಂದು ಶಬ್ದಗಳ ರೂಪವನ್ನು ನಿಶ್ಚಯಿಸುವಾಗ ಹಲವೊಂದು ವಿಷಯಗಳನ್ನು ಗಮನಿಸಬೇಕಾದೀತು. ಹೇಗಿದ್ದರೂ ಸಾಮಾನ್ಯ ಜನರಿಗೆ ತಬ್ಬಿಬ್ಬಾಗದಂತೆ ಶಬ್ದಗಳ ರೂಪಗಳು ನಿಶ್ಚಯಿಸಲ್ಪಡಬೇಕು; ಮತ್ತು ಬರಹವು ಎಲ್ಲರಿಗೂ ಸರಳವೂ ಸುಲಭವೂ ಆಗಿರಬೇಕು.

## ೫ ವೃತ್ತಪತ್ರಿಕೆಗಳು

೧ ವರ್ತಮಾನಪತ್ರಿಕೆ, ಮಾಸಪತ್ರಿಕೆ ಮುಂತಾದವು ಕೂಡ ಸಾಹಿ ತ್ಯದ ಅಂಗಗಳು. ಸಾಮಾನ್ಯ ಜನತೆಯಲ್ಲಿ ವಿದ್ಯಾಪ್ರಸಾರ ಮಾಡುವು ದಕ್ಕೆ ಇವು ಅತ್ಯಂತ ಬಲವಾದ ಸಾಧನಗಳು.

೨ ಆದರೆ ಈಗ ಈ ಸಾಧನಗಳ ದುರುಪಯೋಗವು ಬಹಳವಾಗಿದೆ. ಜನತೆಗೆ ನಿಜವಾದ ಸುದ್ದಿಗಳನ್ನು ನಿಜವಾದ ಜ್ಞಾನವನ್ನು ನಿಜವಾದ ಸಲಹೆಯನ್ನು ಕೊಡುವುದರ ಬದಲು, ಬುದ್ಧಿಪೂರ್ವಕವಾಗಿ ಸುಳ್ಳು ಅರ್ಧಸತ್ಯ ಅರ್ಧಸುಳ್ಳು ಅಪೂರ್ಣ ಅಥವಾ ನಿಜವಾದ ಸಮಾಚಾರ

ವನ್ನು ತಪ್ಪುಗ್ರಹಿಕೆಯಾಗುವಂತೆ ಎದುರಿಗೆ ಇಟ್ಟು ಜನತೆಯನ್ನು ಅಡ್ಡ ದಾರಿಗೆ ಒಯ್ಯುವ ಕಾರ್ಯವು ವ್ಯವಸ್ಥಿತವಾಗಿ ನಡೆದಿದೆ.

೩ ಮತ್ತು ಇವು, ಪ್ರಕಟನೆಗಳ ಮೂಲಕ ಹಣ ಗಳಿಸಬೇಕೆಂಬ ಆಶೆಯಿಂದ ಅನೇಕ ಪ್ರಕಾರದ ಸುಳ್ಳು ಸಂಗತಿಗಳನ್ನೂ ಅನೀತಿಯನ್ನೂ ಹರಡುವ ಸಾಧನಗಳಾಗಿವೆ.

೪ ಓದುವ ಚಟವಿದ್ದ ಮನುಷ್ಯನಿಗೆ ಬಿಡುವು ದೊರಿತು ಅದನ್ನು ಹರಟೆಯಲ್ಲಿ ಕಳೆಯಲು ಸಂಗಡಿಗರು ಇಲ್ಲದಿದ್ದರೆ ಬೇಸರವಾಗುವುದು. ಅವನು ಬೇಸರದಿಂದ ಹೊತ್ತು ಕಳೆದರೂ ಚಿಂತೆಯಿಲ್ಲ. ಸ್ವಲ್ಪ ಸಮಯ ಹಾಗೆಯೆ ಇದ್ದುಕೊಂಡು ಬಳಿಕ ಯಾವುದಾದರೂ ಒಂದು ಕೆಲಸವನ್ನು ಹುಡುಕಿಕೊಂಡು ಅದರಲ್ಲಿ ತೊಡಗುವುದು ಒಳಿತು. ಬರಿಯ ಬಿಡುವಿನ ಸಮಯವನ್ನು ಕಳೆಯುವ ದೃಷ್ಟಿಯಿಂದಲೆ ಹುಟ್ಟಿದ ಪತ್ರಿಕೆ, ಮಾಸಪತ್ರಿಕೆ, ಅಥವಾ ಕತೆ-ಕಾದಂಬರಿಗಳನ್ನು ಓದುತ್ತ ಕುಳಿತರೆ ಮನೋರಂಜನೆಯಾಯಿತೆಂದು ಆಭಾಸವಾಗುವುದು. ಆದರೆ ಅವನು ಹೆಚ್ಚು ಸಮಯವನ್ನು ಅಪ್ರತ್ಯಕ್ಷವಾಗಿ ಹರಟೆಯಲ್ಲಿ, ಎಂದರೆ ಆಲಸ್ಯದಲ್ಲಿ, ಕಳೆದಂತಾಗುವುದು; ಅಲ್ಲದೆ ಮನಸ್ಸಿನಲ್ಲಿ ಹೀನ ಭಾವನೆಗಳನ್ನು ತುಂಬಿಕೊಳ್ಳುವುದು ಮತ್ತು ಕುಸಂಸ್ಕಾರಗಳನ್ನು ಬೆಳೆಸಿಕೊಳ್ಳುವುದು ಖಂಡಿತ. ಪತ್ರಿಕೆ, ಮಾಸಪತ್ರಿಕೆ ಮತ್ತು ಕಾದಂಬರಿಗಳಿಂದ ಎಷ್ಟೋ ಯುವಕ ಯುವತಿಯರು ವಿಕಾರಗಳ ಸೆಳೆತಕ್ಕೆ ಸಿಕ್ಕಿದ ಮತ್ತು ದುರ್ಮಾರ್ಗವನ್ನು ಹಿಡಿದ ಅನೇಕ ಉದಾಹರಣೆಗಳು ನಮಗೆ ದೊರೆಯುತ್ತವೆ. ಇಂಥ ಸಾಹಿತ್ಯವು ಅಗ್ನಿನಾರಾಯಣನಿಗೆ ಸಮರ್ಪಿಸುವುದೇ ಯೋಗ್ಯ.

೫ ತನಗೇ ತೋರಿದ ಇಲ್ಲವೆ ಬೇರೆಯವರಿಂದ ದೊರೆತ ಸತ್ಯವನ್ನೂ ಹಿತಕರವಾದ ಮತ್ತು ಉಪಯುಕ್ತ ಸಂದೇಶಗಳನ್ನೂ ತಾನೇ ಜನತೆಗೆ ಮುಟ್ಟಿಸಬೇಕಾಗಿದೆಯೆಂದು ಯಾರಿಗೆ ಎನಿಸುವುದೋ ಅವರೇ ಪತ್ರಿಕಾವ್ಯವಸಾಯದಲ್ಲಿ ಇಲ್ಲವೆ ಲೇಖನ ವ್ಯವಸಾಯದಲ್ಲಿ ತೊಡಗಬೇಕು. ಅವರು ಸತ್ಯಕ್ಕೆ ಅಂಟಿಕೊಂಡಿರಬೇಕು, ತಮಗೆ ವಿರುದ್ಧವಾಗಿದ್ದರೂ ಸತ್ಯವಿದ್ದ ಸಂಗತಿಗಳನ್ನೂ ದೂರುಗಳನ್ನೂ ಪ್ರಕಟಿಸಬೇಕು; ಅಲ್ಲದೆ ತಮ್ಮ ತಪ್ಪುಗಳನ್ನೂ ಪ್ರಾಮಾಣಿಕತನದಿಂದ ಒಪ್ಪಿಕೊಳ್ಳಬೇಕು. ಜಾಹೀರಾತಿನ ಮೂಲಕ ತಮ್ಮ ವೆಚ್ಚವನ್ನು ತುಂಬಿಕೊಳ್ಳಲು ಬಯಸತಕ್ಕದ್ದಲ್ಲ; ಸಮಾಜಕ್ಕೆ ತಮ್ಮ ಉಪಯುಕ್ತತೆಯನ್ನು ತೋರಿಸಿ, ವೆಚ್ಚವು ಮೈಮೇಲೆ ಬರದಂಥ ಸ್ಥಿತಿ

ಯನ್ನು ಲೋಕಪ್ರಿಯತೆಯಿಂದಲೇ ತಂದುಕೊಳ್ಳತಕ್ಕದ್ದು. ಆದ್ದರಿಂದ ವೃತ್ತಪತ್ರಿಕೆಗಳು ಕೇವಲ ಕೆಲವೇ ಜನರ ಅವಶ್ಯಕತೆಗಳನ್ನು ಕೊರತೆಗಳನ್ನು ಚರ್ಚಿಸುವುದರ ಬದಲು, ಸಮಸ್ತ ಜನತೆಯ ಅವಶ್ಯಕತೆಯನ್ನೂ ಕೊರತೆ ಸುಖದುಃಖಗಳನ್ನೂ ಚರ್ಚಿಸಬೇಕು.

## ೬ ಕಲೆ

೧ ಸೃಷ್ಟಿಸೌಂದರ್ಯದ ಎದುರು ಮನುಷ್ಯನಿರ್ಮಿತ ಸರ್ವ ಕಲೆಗಳ ಸೌಂದರ್ಯವೂ ತುಚ್ಛವೆನಿಸುವುದು. ಕಲಾಪ್ರಿಯರಿಗೆ ಆಕಾಶದ ಮತ್ತು ಪೃಥ್ವಿಯ ಸೌಂದರ್ಯವು ಸಾಕಷ್ಟು ಆನಂದವನ್ನೀಯಬಲ್ಲದು. ಇಂಥ ಕಲೆಯ ಆನಂದವು ರುಚಿಸದ ಮನುಷ್ಯನು ಒಂದು ವೇಳೆ ಮಾನವ ನಿರ್ಮಿತ ಕಲೆಯ ಅಭಿಮಾನಿಯೆಂದು ಭಾವಿಸಿದರೆ ಮೋಹಕ ದೃಶ್ಯಗಳೆ ಕಲೆಯೆಂದು ಅವನು ತಿಳಿದುಕೊಂಡಂಥವನಿರಬಹುದು. ಅವನಿಗೆ ನಿಜವಾದ ಕಲೆಯ ಜ್ಞಾನವೆ ಇರಲಿಕ್ಕಿಲ್ಲ.

೨ ನಿಜವಾದ ಕಲೆಯು ಉತ್ಕೃಷ್ಟವಾದ ಸಾಹಿತ್ಯದಂತೆ ವಿಚಾರಗಳನ್ನು ಮಂಡಿಸುವ ಸಾಧನ. ಹಿಂದೆ ಸಾಹಿತ್ಯಶೈಲಿಯನ್ನು ಕುರಿತು ಯಾವ ವಿಚಾರಗಳನ್ನು ಹೇಳಲಾಗಿದೆಯೊ ಅವೇ ವಿಚಾರಗಳು ಹೆಚ್ಚುಕಡಿಮೆಯಾಗಿ ಕಲೆಗೂ ಅನ್ವಯಿಸುವವು.

೩ ಕಲೆಯ ಸಂಬಂಧವಿರುವುದು ಕೇವಲ ಸೌಂದರ್ಯದೊಡನೆ; ನೀತಿ ಕಲ್ಯಾಣ ಉಪಯೋಗಿತೆಗಳೊಡನೆ ಅಲ್ಲ ಎಂದು ಯಾರಾದರೂ ಹೇಳಿದರೆ ಅವರಿಗೆ ಸೌಂದರ್ಯವನ್ನೂ ಕಲೆಯನ್ನೂ ಅರಿತುಕೊಳ್ಳುವ ಶಕ್ತಿಯು ಇಲ್ಲವೆಂಬುದನ್ನು ಒಪ್ಪಿಕೊಂಡಂತೆಯೆ ಸೈ. ಸತ್ಯ ಮತ್ತು ಶ್ರೇಷ್ಠ ಸೌಂದರ್ಯವೇ ಉಚ್ಚತಮವಾದ ಕಲೆ. ಮತ್ತು ಅದು ನೀತಿ ಹಿತ ಮತ್ತು ಉಪಯೋಗಿತೆಯಿಂದ ರಹಿತವಾಗಿಲ್ಲ.

೪ ಆದ್ದರಿಂದ ಕಲೆಯು ಮನುಷ್ಯನ ಜೀವನೋಪಯೋಗಿ ಸಾಧನ ಸಾಮುಗ್ರಿಗಳಲ್ಲಿ ವ್ಯಕ್ತವಾಗಬೇಕು; ಮತ್ತು ಆ ಸಾಧನಸಾಮುಗ್ರಿಗಳು ಕೇವಲ ಸುಂದರವಾಗಿ ಕಾಣುವುದು ಮಾತ್ರವೇ ಅಲ್ಲದೆ ಒಳ್ಳೇ ಉಪಯುಕ್ತವೂ ಇರಬೇಕು.

೫ ಯಾವ ಕಲೆಗಾಗಿ ಪ್ರಾಣಿಗಳ ಮೇಲೆ ಒತ್ತಾಯ ಹಿಂಸೆ ಮುಂತಾದ್ದು ನಡೆಯುವುದೊ ಆ ಕಲೆಯು ಎಷ್ಟೇ ಸುಂದರವಾಗಿ ಕಂಡರೂ ಅದು ಕಲೆಯಲ್ಲ ಕಲಿ, ಯಮ.

೬ ಯಾವ ಕಲೆಯು ಮನುಷ್ಯನ ಕೀಳು ಪ್ರವೃತ್ತಿಗೆ ಉತ್ತೇಜನ ಕೊಡುವುದೋ ಮತ್ತು ಭೋಗದ ಇಚ್ಛೆಯನ್ನು ಇಮ್ಮಡಿಸುವುದೊ ಅಂಥ ಕಲೆಯು ಬೀಭತ್ಸ ಸಾಹಿತ್ಯದಂತೆಯೆ ಅಸಹ್ಯವೆನಿಸುವುದು.

## ತ್ರಯೋದಶ ಖಂಡ

## ಲೋಕಸೇವಕ

### ೧ ಲೋಕಸೇವಕನ ಸಾಮಾನ್ಯ ಲಕ್ಷಣಗಳು

೧ ಪ್ರಾಮುಖ್ಯವಾಗಿ ಜನಸೇವೆಯನ್ನು ಮಾಡುವ ಅಭಿಲಾಷೆಯುಳ್ಳವನೇ ಲೋಕಸೇವಕನು; ಉಪಜೀವನಕ್ಕಾಗಿ ಯಾವುದೊಂದು ಉದ್ಯೋಗವನ್ನು ಮಾಡಲೇಬೇಕೆಂದು ಜನಸೇವೆಯ ಕಾರ್ಯವನ್ನು ಸ್ವೀಕರಿಸುವವನಲ್ಲ.

೨ ಲೋಕಸೇವಕನು ತನ್ನ ಎಲ್ಲ ಸಮಯವನ್ನೂ ದೇಶಕಾರ್ಯದಲ್ಲಿ ಜನತೆಯ ಸೇವೆಯಲ್ಲಿ ವೆಚ್ಚಮಾಡುತ್ತಿರುವುದರಿಂದ, ಅವನು ತನ್ನ ಉಪಜೀವನಕ್ಕಾಗಿ, ಜನತಾಸೇವೆಯನ್ನು ಮಾಡುತ್ತಿರುವ ಸಂಸ್ಥೆಗಳಿಂದ ಸ್ವಲ್ಪ ಧನವನ್ನು ಪಡೆದುಕೊಂಡರೆ ಅದರಲ್ಲಿ ಯಾವ ದೋಷವೂ ಇಲ್ಲ. ಸೇವಾಕಾರ್ಯವು ಸುಸೂತ್ರವಾಗಿ ಸಾಗಬೇಕಾದರೆ ಇಂಥ ಲೋಕಸೇವಕರು ಅವಶ್ಯವಾಗಿ ಬೇಕೇಬೇಕು.

೩ ಆದರೆ ಲೋಕಸೇವಕನ ನಿರ್ವಾಹದ ಧೋರಣೆಯು ಅನ್ಯ ಸೇವಕರ ನಿರ್ವಾಹದ ಧೋರಣೆಗಿಂತ ಭಿನ್ನವಾಗಿರಬೇಕು. ಅವನು ಈ ಕಾರ್ಯದಲ್ಲಿ ತೊಡಗುವುದು ತನ್ನ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಬೇಕೆಂಬ ಇಚ್ಛೆಯಿಂದಲ್ಲ. ಆದ್ದರಿಂದ ತನ್ನ ಸಂಬಳವು ಹೆಚ್ಚಾಗಬೇಕೆಂದು ಅವನು ಬಯಸುವುದಿಲ್ಲ, ಮತ್ತು ತನ್ನನ್ನು ಅವಲಂಬಿಸಿದವರನ್ನು ಸಲಹುವ

ಹೊಣೆಯು ಹೆಚ್ಚಾಗದಂತೆ ಆದಷ್ಟು ಎಚ್ಚರದಿಂದ ಇರುವನು. ಅವನು ತನ್ನ ಕೆಲವು ಪ್ರತ್ಯಕ್ಷ ಅಥವಾ ಭಾವೀ ಆತೆ-ಆಕಾಂಕ್ಷೆಗಳನ್ನು ತ್ಯಜಿಸಿದವನೆಂದು ತಿಳಿಯಬಹುದು. ತನ್ನ ಸಂಬಳವನ್ನು ಗೊತ್ತುಪಡಿಸಿಕೊಳ್ಳುವಾಗ ಅವನಿಗೆ ತನ್ನ ಗಳಿಕೆಯಲ್ಲಿ ಸ್ವಲ್ಪವನ್ನು ಉಳಿಸಿಕೊಳ್ಳುವ ಧ್ಯೇಯವಿರುವುದಿಲ್ಲ. ಆದರೆ ಸಂಕಟಕಾಲದಲ್ಲಿ ಪರಮೇಶ್ವರನು ತನಗೆ ಸಹಾಯವನ್ನು ಮಾಡಿಯೆ ಮಾಡುವನೆಂಬ ಶ್ರದ್ಧೆಯು ಮಾತ್ರ ಅವನಿಗೆ ಇದ್ದೇ ಇರುತ್ತದೆ.

೪ ತಾನು ಸ್ವಲ್ಪ ತ್ಯಾಗಿ, ಪ್ರಜರ ಸೇವಕ, ಅಥವಾ ಆಜೀವ ಸೇವಕ ಎಂಬ ಭಾವನೆ ಇಲ್ಲವೇ ಅಭಿಮಾನ ಯಾರಿಗೆ ಇದೆಯೋ ಅವನು ಲೋಕಸೇವಕನಿದ್ದರೂ ತನ್ನ ಕೀಳುತನವನ್ನು ವ್ಯಕ್ತಮಾಡಿದಂತೆಯೇ ಸರಿ.

೫ ಲೋಕಸೇವಕನು ಅತ್ಯಂತ ನಮ್ರನಾಗಿರುವನು, 'ಶೂನ್ಯ'ನಾಗಿರುವನು. ಸಂಬಳವನ್ನು ತೆಗೆದುಕೊಂಡು ಇಲ್ಲವೆ ತಮ್ಮ ಉದ್ಯೋಗವನ್ನು ಮಾಡಿಕೊಂಡು ಉಳಿದ ಸಮಯದಲ್ಲಿ ಸೇವೆ ಮಾಡುವವರಿಗಿಂತಲೂ ತಾನು ಶ್ರೇಷ್ಠನೆಂದು ಅವನು ತಿಳಿಯುವುದಿಲ್ಲ, ಅವರ ಮೇಲೆ ತನ್ನ ಅಧಿಕಾರ ನಡೆಸಲು ಯತ್ನಿಸುವುದಿಲ್ಲ.

೬ ಲೋಕಸೇವಕನು ಯಾವುದಾದರೂ ಸ್ವಾರ್ಥದ ಮಹತ್ವಾಕಾಂಕ್ಷೆಯನ್ನು, ಎಂದರೆ, ಯಶಸ್ಸು ಅಧಿಕಾರ ಮುಂತಾದ್ದನ್ನು ಪೂರ್ತಿಗೊಳಿಸುವುದಕ್ಕೆಂದು ಜನತಾಸೇವೆಯ ಕಾರ್ಯದಲ್ಲಿ ಬೀಳತಕ್ಕದ್ದಲ್ಲ. ಧಾರ್ಮಿಕ ಭಾಷೆಯಲ್ಲಿ ಹೇಳುವುದಾದರೆ ಲೋಕಸೇವೆಯ ಮುಖಾಂತರ ಈಶ್ವರೋಪಾಸನೆ ಮಾಡುವ ಇಚ್ಛೆಯಿಂದಲೂ, ವ್ಯವಹಾರಿಕ ಭಾಷೆಯಲ್ಲಿ ಹೇಳುವುದಾದರೆ ತನ್ನ ದೇಶಬಂಧುಗಳನ್ನು ಅಧಿಕ ಸುಖಕರವಾದ ಮಾರ್ಗಕ್ಕೆ ಹಚ್ಚಲು ತಾನು ನಿಮಿತ್ತಮಾತ್ರನಾಗಬೇಕೆಂಬ ಇಚ್ಛೆಯಿಂದಲೂ ಲೋಕಸೇವಾಕಾರ್ಯದಲ್ಲಿ ತೊಡಗಬೇಕು.

೭ ಹೀಗೆ, ಜನತೆಯ ಸೇವಕನು ಮಧುರವಾದ ಮತ್ತು ವಿನಯಪೂರಿತವಾದ ನಡತೆಯಿಂದ ಜನತೆಯ ಮತ್ತು ತನ್ನ ಸಂಗಡಿಗರ ಮನಸ್ಸನ್ನು ತನ್ನ ಕಡೆಗೆ ಸೆಳೆದುಕೊಳ್ಳಬೇಕು; ತನ್ನ ಕಾರ್ಯಕ್ಷೇತ್ರದಲ್ಲಿ ದೊರೆತ ಯಶಸ್ಸನ್ನು ತನ್ನ ಉಳಿದ ಸಂಗಡಿಗರಿಗೆ ಕೊಡಬೇಕು. ತನ್ನ ಸೇವೆಯ ಬಲದಿಂದಲೆ ಅವರ ಪ್ರೇಮಾದರಗಳಿಗೆ ಪಾತ್ರನಾಗಬೇಕು.

೮ ನಿಸ್ವಾರ್ಥಿಯಾದ, ನಮ್ರನಾದ, ಪ್ರಾಮಾಣಿಕನಾದ ಮತ್ತು ಸಚ್ಚರಿತ್ರಯುಳ್ಳ ಲೋಕಸೇವಕನು ಲೋಕಪ್ರಿಯನಾಗಿಲ್ಲವೆಂಬ ಉದಾ

ಹರಣೆಯನ್ನು ಈ ವರೆಗೂ ನಾವು ಕಂಡಿಲ್ಲ. ಆದರೆ ಇದಕ್ಕೆ ವಿರುದ್ಧವಾಗಿ, ಜನತೆಯ ವಿಶ್ವಾಸಕ್ಕೆ ಪಾತ್ರನಾದ ಲೋಕಸೇವಕನು ತನ್ನ ಕಾರ್ಯಕ್ಷೇತ್ರದಲ್ಲಿ ಸರ್ವಾಧಿಕಾರಿಯ ಪದವನ್ನು ಅನುಭೋಗಿಸುತ್ತಿರುವನೆಂಬ ಅನುಭವವು ಬಂದಿರುವುದು. ಇವನು ಹೇಳಿದ್ದನ್ನು ಜನತೆಯು ಕೇಳುವುದು. ಇವನು ಯಾರ ಅನಾದರಕ್ಕೂ ಈರ್ಷೆಗೂ ಪಾತ್ರನಾಗುವುದಿಲ್ಲ. ಯಾರಿಗೂ ಕಷ್ಟ ದಾಯಕನೆನಿಸುವುದಿಲ್ಲ.

೯ ಜನತೆಯು ಅಥವಾ ಅನ್ಯ ಸಂಗಡಿಗರು ಅಥವಾ ಮುಂದಾಳುಗಳು ಅಥವಾ ಲೋಕಸೇವಕ ಮಂಡಳದ ಹೊರಗಿನ ಕಾರ್ಯಕರ್ತರು ಕೃತಘ್ನರಿರುವ ರೆಂದು ಮತ್ತು ಕಾರ್ಯದಲ್ಲಿ ವಿಘ್ನಸ್ವರೂಪರಿರುವರೆಂದು ಯಾವ ಲೋಕ ಸೇವಕನಿಗೆ ಆಗಾಗ ಎನಿಸುವುದೊ ಅವನು ತನ್ನಲ್ಲಿಯೆ ದೋಷವಿದೆಯೆಂದು ನಿಶ್ಚಯವಾಗಿ ತಿಳಿದುಕೊಳ್ಳಬೇಕು. ಏಕೆಂದರೆ ಜನತೆಯು ಸಾಮಾನ್ಯ ವಾಗಿ ಕೃತಜ್ಞವಾಗಿಯೆ ಇರುವುದು; ಇಷ್ಟೇ ಅಲ್ಲ, ಲೋಕಸೇವಕನಿಗೆ ಅತ್ಯಂತ ಉದಾರತೆಯಿಂದ ಆದರ ಸತ್ಕಾರ ಮಾಡಬೇಕೆಂಬ ಬುದ್ಧಿಯುಳ್ಳ ದ್ದಿರುವುದು. ಇದು ಅನುಭವದ ಮಾತು.

೧೦ ಜನತೆಯ ಸೇವಕನಲ್ಲಿ ಕೆಳಗಿನ ಗುಣಗಳು ಇರತಕ್ಕದ್ದು :

(ಅ) ಅವನು ಧಾರ್ಮಿಕ ಪ್ರವೃತ್ತಿಯುಳ್ಳವನಿರಬೇಕು. ಸತ್ಯಾಗ್ರಹ, ಸತ್ಕರ್ಮ, ಸದ್ವಾಣಿ ಮತ್ತು ಸದ್ವರ್ತನೆಯಲ್ಲಿ ಅವನ ಪೂರ್ಣ ವಿಶ್ವಾಸವಿರ ಬೇಕು. ಅವುಗಳಂತೆ ನಡೆಯುವ ಉತ್ಕಟ ಇಚ್ಛೆ, ಅದರಲ್ಲಿ ತಪ್ಪಾದರೆ ಪಶ್ಚಾತ್ತಾಪಪಡುವ ಮನಸ್ಸು ಮತ್ತು ಅವುಗಳಲ್ಲಿಯೆ ತನ್ನ ಮತ್ತು ಜನ ತೆಯ ಶ್ರೇಯಸ್ಸು ಇರುವುದೆಂಬ ದೃಢವಾದ ನಂಬಿಕೆ ಇರಬೇಕು.

(ಆ) ಸ್ತ್ರೀಯರು ಅವನ ಹತ್ತಿರ ನಿರ್ಭಯದಿಂದ ಹೋಗುವಷ್ಟು ಮತ್ತು ಜನರು ಅವನ ಬಳಿ ತಮ್ಮ ಸ್ತ್ರೀಯರನ್ನು ಕಳಿಸಲು ಸಂದೇಹಪಡದಷ್ಟು ಅವನ ಚರಿತ್ರೆ ಶುದ್ಧವಾಗಿರಬೇಕು, ನಿರ್ಮಲವಾಗಿರಬೇಕು.

(ಇ) ಅವನ ಆರ್ಥಿಕವ್ಯವಹಾರವು ಬಹಳ ಚೊಕ್ಕಾಗಿರಬೇಕು. ಎಷ್ಟೋ ಜನರು ದೊಡ್ಡ ದೊಡ್ಡ ವ್ಯವಹಾರಗಳಲ್ಲಿ ಪ್ರಾಮಾಣಿಕತನವನ್ನು ತೋರಿಸಿ ದರೂ ಹೃದಯದಲ್ಲಿ 'ಪೈಗಳ್ಳ'ರಾಗಿರುತ್ತಾರೆ. ಎಷ್ಟೋ ಜನರು ಪೈಗೆ ಪೈ ಲೆಕ್ಕವಿಡುತ್ತಾರೆ, ಆದರೆ ದೊಡ್ಡ ಮೊತ್ತದ ಲೆಕ್ಕದಲ್ಲಿ ಮೋಸಮಾಡುತ್ತಾರೆ. ಲೋಕಸೇವಕನು ಇವೆರಡೂ ಆಕ್ಷೇಪಗಳಿಂದ ದೂರದಲ್ಲಿರಬೇಕು; ಮತ್ತು ತನಗೆ ದೊರೆತ ಒಂದೊಂದು ಪೈಯ ಲೆಕ್ಕವನ್ನೂ ಸರಿಯಾಗಿ ಇಡಬೇಕು.

(ಈ) ಅವನು ಯಾವಾಗಲೂ ಉದ್ಯೋಗಿಯಾಗಿರಬೇಕು. ಹರಟೆ ಯಲ್ಲಿ ವ್ಯರ್ಥವಾದ ಮಾತುಗಳಲ್ಲಿ ಮತ್ತು ನಿಂದಾಸ್ತುತಿಯಲ್ಲಿ ಕಾಲತಳ್ಳು ವವನಾದರೆ ಅವನಿಗೆ ಎಂದೂ ಪ್ರತಿಷ್ಠೆಯೂ ಸನ್ಮಾನವೂ ದೊರೆಯದು. ಅವನ ಉದ್ಯೋಗತತ್ಪರತೆ ಮತ್ತು ತಲ್ಲೀನತೆ ಜನತೆಗೆ ಉದಾಹರಣೆ ಯಾಗಿರಬೇಕು.

(ಉ) ಸಮಯಕ್ಕೆ ಸರಿಯಾಗಿ ಕೆಲಸ ಮಾಡುವ ಅಭ್ಯಾಸವು ಅವನಲ್ಲಿ ಇರಲೇಬೇಕು. ಯಾವ ಕಾಲದಲ್ಲಿ ಯಾವ ಕೆಲಸವನ್ನು ಮಾಡುವು ದಿದೆಯೋ ಆ ಕಾಲದಲ್ಲಿ ಅದನ್ನು ಮಾಡಲು ಎಂದೂ ತಪ್ಪಬಾರದು.

(ಊ) ಅವನು ಸರಿಯಾಗಿ ನಿಯಮಪಾಲನೆಯನ್ನು ಮಾಡಬೇಕೆಂದು ಇದರ ಅರ್ಥ. ಮುಂಜಾವಿನಿಂದ ಸಂಜೆಯ ವರೆಗಿನ ಎಲ್ಲ ಕೆಲಸಗಳು ಗಡಿಯಾರದಂತೆ ಯಥಾಕ್ರಮದಿಂದ ಸಾಗುತ್ತಿರಬೇಕು.

(ಎ) ಅವನು ತನ್ನ ಸಂಸ್ಥೆಯ ಸಿದ್ಧಾಂತಗಳನ್ನು ಮತ್ತು ನಿಯಮ ಗಳನ್ನು, ತನ್ನ ಮೇಲಿನವರ ಆಜ್ಞೆಯನ್ನು, ಮನಃಪೂರ್ವಕವಾಗಿಯೂ ಸರಿ ಯಾಗಿಯೂ ಪಾಲಿಸಬೇಕು. ಆಜ್ಞೆಯನ್ನು ಚನ್ನಾಗಿ ಪಾಲಿಸಲಾರದವನು ಆಜ್ಞೆಯನ್ನೀಯುವ ಯೋಗ್ಯತೆಯನ್ನು ಪಡೆಯಲಾರನು.

(ಏ) ಲೋಕಸೇವಕನು ದೇಹಗೇಹದ ಚಿಂತೆಯನ್ನು ಪರಮಾತ್ಮನಿಗೆ ಒಪ್ಪಿಸಿ ನಿಶ್ಚಿಂತನಾಗಿರಬೇಕು. ಲೋಕಸೇವೆಗೋಸ್ಕರ ತನ್ನ ಧನ, ಪ್ರಾಣ, ಕುಟುಂಬ, ಸುಖಾನುಕೂಲತೆಗಳು, ಮತ್ತು ಸ್ವಾತಂತ್ರ್ಯ ಮೊದಲಾದವು ಗಳನ್ನು ಮೊದಲಿಗೇ ಬಿಡುವ ಹೊಣೆಯನ್ನು ಹೊರಬೇಕು. ಸಂದರ್ಭದಲ್ಲಿ ಎಷ್ಟೇ ಸಂಕಟಗಳು ಬಂದರೂ ಅವನ್ನು ಎದುರಿಸಿ ಲೋಕಸೇವಾಕಾರ್ಯದಲ್ಲಿ ದುಮುಕಬೇಕು.

(ಐ) ತಾನು ಮೊದಲು ಅತ್ಯಂತ ಸ್ವಚ್ಛನಾಗಿರಬೇಕು ; ಅಸ್ವಚ್ಛವಾದ ಜನರೊಡನೆ ಕೂಡಿಕೊಂಡು ಕೆಲಸ ಮಾಡಲು ಮತ್ತು ಅಸ್ವಚ್ಛತೆಯನ್ನು ಹೋಗಲಾಡಿಸುವ ಕಾರ್ಯವನ್ನು ಮಾಡಲು ಅವನು ಹೇಸಬಾರದು.

(ಒ) ಲೋಕಸೇವಕನು ದಿನವೂ ದಿನಚರಿಯನ್ನು ಬರೆಯುವ ಅಭ್ಯಾಸ ವನ್ನಿಡಬೇಕು. ಅದರಲ್ಲಿ ತಾನು ಮಾಡಿದ ಕಾರ್ಯಗಳನ್ನು ಸರಿಯಾಗಿ ಉಲ್ಲೇಖಿಸಬೇಕು.

(ಓ) ದಿನದ ಕಾರ್ಯವನ್ನು ಪರಮಾತ್ಮನ ಸ್ಮರಣೆಯಿಂದ ಪ್ರಾರಂಭಿಸಿ ತಾನು ಇಡೀ ದಿನ ಮಾಡಿದ ಕಾರ್ಯಗಳನ್ನೆಲ್ಲ ರಾತ್ರಿಯಲ್ಲಿ ನಿರೀಕ್ಷಿಸಿ ಮತ್ತು

ಮನನಮಾಡಿ ಪರಮಾತ್ಮನನ್ನು ಸ್ಮರಿಸುತ್ತಾ ಮಲಗುವ ಲೋಕಸೇವಕನು ಜನತೆಯ ಸೇವೆ ಮಾಡುತ್ತಿರುವಾಗಲೇ ಶ್ರೇಯಸ್ಸನ್ನು ಹೊಂದುವನು.

(೩೦) ಇಂಥ ಸೇವಕನು ಯೋಚಿಸಿ ನೋಡಿದರೆ ಲೋಕಸೇವಕನಾದ ತಾನು ಬ್ರಹ್ಮಚರ್ಯದಿಂದ ಇರಬೇಕಾಗುವುದೆಂದು ಅವನಿಗೆ ತಿಳಿಯುವುದು. ಈ ಮಾತು ಎಂದು ಮನದಟ್ಟಾಗುವುದೊ ಅಂದಿನಿಂದಲೆ ಅವನು ಇತ್ತ ಹೆಜ್ಜೆಯನ್ನಿಡಲಾರಂಭಿಸುವನು.

## ೨ ಗ್ರಾಮಸೇವಕನ ಕರ್ತವ್ಯಗಳು *

೧ ಗ್ರಾಮನಿವಾಸಿಗಳಿಗೆ ಸ್ವಚ್ಛತೆಯ ಶಿಕ್ಷಣವನ್ನು ಕೊಡುವುದು ಗ್ರಾಮಸೇವಕನ ಮೊದಲನೆಯ ಕರ್ತವ್ಯ. ಈ ಶಿಕ್ಷಣಪದ್ಧತಿಯಲ್ಲಿ ವ್ಯಾಖ್ಯಾನ ಮತ್ತು ಪತ್ರಿಕೆಗಳು ಉಚ್ಚ ಸ್ಥಾನವನ್ನು ಪಡೆಯುವ ಸಾಧನಗಳಲ್ಲ. ಈ ಶಿಕ್ಷಣವನ್ನು ವಸ್ತುಪಾಠದಿಂದಲೆ ಕೊಡಬೇಕು. ಈ ಕಾರ್ಯವನ್ನು ಮಾಡಲು ತಾಳ್ಮೆಯು ಬೇಕೇಬೇಕು. ಗ್ರಾಮಸೇವಕನು, ಒಂದೆರಡು ದಿನಗಳಲ್ಲೇ ಜನರು ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳಲಾರಂಭಿಸುವರೆಂದು ತಿಳಿಯಬಾರದು.

೨ ಗ್ರಾಮಸೇವಕನು ಮೊದಲು ಗ್ರಾಮನಿವಾಸಿಗಳನ್ನು ಒಂದೆಡೆ ಒಟ್ಟುಗೂಡಿಸಿ ಅವರಿಗೆ ಅವರ ಧರ್ಮವನ್ನು ತಿಳಿಸಿಕೊಡಬೇಕು. ಬಳಿಕ ಹಳ್ಳಿಯಿಂದಲೆ ಗುದ್ದಲಿ, ಸಲಿಕೆ, ಬುಟ್ಟಿ, ಬಕೇಟು, ಪೊರಕೆ ಮೊದಲಾದುವನ್ನು ಹುಟ್ಟಿಸಿಕೊಂಡು ಸ್ವತಃ ಸ್ವಚ್ಛತೆಯ ಕಾರ್ಯವನ್ನು ಪ್ರಾರಂಭಿಸಬೇಕು.

೩ ಮಾರ್ಗಗಳನ್ನು ನಿರೀಕ್ಷಿಸಿ, ಮೊದಲು ಮಲವನ್ನು ಸಲಿಕೆಯಿಂದ ಬುಟ್ಟಿಯಲ್ಲಿ ತುಂಬಬೇಕು. ಬಳಿಕ ಮಲವು ಬಿದ್ದ ಸ್ಥಾನವನ್ನು ಹುಡಿಮಣ್ಣಿನಿಂದ ಮುಚ್ಚಬೇಕು. ಮೂತ್ರ ಬಿದ್ದ ಸ್ಥಾನವನ್ನು ಕೂಡ ಸಲಿಕೆಯಿಂದ ಕೆದರಿ ಮೂತ್ರ ಬೆರೆತ ಮಣ್ಣನ್ನು ಅದೇ ಬುಟ್ಟಿಯಲ್ಲಿ ತುಂಬಬೇಕು. ಮತ್ತು ಆ ಮೂತ್ರಸ್ಥಳವನ್ನು ಸುತ್ತುಮುತ್ತಲಿನ ಒಣ ಮಣ್ಣಿನಿಂದ ಮುಚ್ಚಬೇಕು.

೪ ಒಕ್ಕಲಿಗನಿಗೆ ಮಲವೆಂದರೆ ಬಂಗಾರದಂತೆ. ಅದನ್ನು ಹೊಲದಲ್ಲಿ ಹೂಳುವುದರಿಂದ ಉತ್ತಮವಾದ ಗೊಬ್ಬರವಾಗುವುದು. ಮತ್ತು ಬೆಳೆಯು ಚನ್ನಾಗಿ ಬರುವುದು. ಈ ಮಾತನ್ನು ಒಕ್ಕಲಿಗನಿಗೆ ತಿಳಿಸಿ ಹೇಳಬೇಕು.

* ‘‘ಗಾಮ್‌ಡಾನೀ ವಹಾರಿ’’ ಲೇಖನಮಾಲೆಯ ಆಧಾರದಿಂದ.

ಹೊಲದಲ್ಲಿ ಸುಮಾರು ಒಂಬತ್ತು ಇಂಚು ಮಾತ್ರ ಹೊಂಡ ತೆಗೆಯಬೇಕು. ಆ ಹೊಂಡದಲ್ಲಿ ಮಲವನ್ನು ಹಾಕಿ ಅದರ ಮೇಲೆ ಒಣ ಮಣ್ಣಿನಿಂದ ಚೆನ್ನಾಗಿ ಮುಚ್ಚಬೇಕು.

೫ ಈ ರೀತಿ ಮಲದ ವ್ಯವಸ್ಥೆಯನ್ನು ಮಾಡಿದ ಬಳಿಕ ಕಸದ ವ್ಯವಸ್ಥೆಯನ್ನು ಮಾಡಬೇಕು. ಕಸವು ಎರಡು ತರದ್ದಿರುವುದು: (೧) ಗೊಬ್ಬರಕ್ಕೆ ಯೋಗ್ಯವಾದುದು—ಉದಾಹರಣೆಗೆ: ಸಗಣಿ, ಮೂತ್ರ, ಕಾಯಿಪಲ್ಲೆಗಳ ಕಸುರು, ಎಂಜಲು ಇತ್ಯಾದಿ. (೨) ಕಟ್ಟಿಗೆಯ ತುಂಡು, ಕಬ್ಬಿಣದ ತುಂಡು, ತಗಡಿನ ಚೂರು, ಬಟ್ಟೆಯ ಚಿಂದಿ ಮುಂತಾದ್ದು.

೬ ಗೊಬ್ಬರಕ್ಕೆ ಯೋಗ್ಯವಾದ ಕಸವನ್ನು ಬೇರೆಯಾಗಿ ಒಟ್ಟುಗೂಡಿಸಿ ಅದನ್ನು ಹೊಲದಲ್ಲಿ ಹುಗಿಯಬೇಕು ಇಲ್ಲವೆ ತಿಪ್ಪೆಯಲ್ಲಿ ಸಂಗ್ರಹಿಸಬೇಕು.

೭ ಎರಡನೆಯ ತರದ ಕಸವನ್ನು ಹುಗಿಯಬೇಕಾದ ಆಳುಪ್ಪ ಹೊಂಡದಲ್ಲಿ ಚಲ್ಲಬೇಕು; ಹೊಂಡ ಮುಚ್ಚಿದ ಬಳಿಕ ಅದರ ಮೇಲೆ ತಕ್ಕಷ್ಟು ಮಣ್ಣು ಹಾಕಿ ನೆಲಸಮ ಮಾಡಬೇಕು. ಈ ಕಸದೊಳಗಿನ ಕಟ್ಟಿಗೆಯ ಚೂರು, ದಂತಧಾವನದ ಚೂರು, ಇದ್ದಲಿ ಮುಂತಾದ್ದನ್ನು ತೊಳೆದು ಒಣಗಿಸಿ ಉರುವಲಿಗೆ ಉಪಯೋಗಿಸಬಹುದು, ಹರುಕು ಬಟ್ಟೆಗಳನ್ನು ಮಾರಬಹುದು.

೮ ತಿಪ್ಪೆಯ ಬಳಿಯಲ್ಲಿ ಕಕ್ಕಸು ಕಟ್ಟಿಸಬೇಕೆಂದು ಈ ಮೊದಲು (ಆರೋಗ್ಯ ಖಂಡದಲ್ಲಿ) ಸೂಚಿಸಲಾಗಿದೆ. ಈ ತರದ ವ್ಯವಸ್ಥೆಯು ಇದ್ದ ಸ್ಥಳದಲ್ಲಿ ಒಟ್ಟುಗೂಡಿದ ಮಲವನ್ನು ಉಪಯೋಗಿಸಿಕೊಳ್ಳಲು ಎಲ್ಲಿಯ ವರೆಗೆ ಒಕ್ಕಲಿಗನು ಕಲಿಯುವುದಿಲ್ಲವೊ ಅಲ್ಲಿಯ ವರೆಗೆ ಗ್ರಾಮಸೇವಕನು ಮಾರ್ಗವನ್ನು ಸ್ವಚ್ಛಮಾಡುವಂತೆ ತಿಪ್ಪೆಯನ್ನೂ ಸ್ವಚ್ಛಮಾಡಬೇಕು.

೯ ಗ್ರಾಮದ ಮಾರ್ಗಗಳನ್ನು ಪಕ್ಕಾ ಮತ್ತು ಸರಿಯಾಗಿ ಮಾಡಿಸುವುದಕ್ಕಾಗಿ ಉಪಾಯಗಳನ್ನು ಯೋಜಿಸುವ ಕಾರ್ಯವು ಗ್ರಾಮಸೇವಕನದು. ಈ ಉಪಾಯಗಳು ಒಂದೇ ಬಗೆಯವಾಗಿರಲಾರವು, ಭಿನ್ನ ಭಿನ್ನ ರೀತಿಯವಾಗಬಹುದು. ಈ ಕಾರ್ಯದಲ್ಲಿ ಹಳ್ಳಿಯ ವೃದ್ಧರು ಸಲಹೆಗಳನ್ನು ಕೊಟ್ಟು ನೆರವಾಗಬಹುದು.

೧೦ ಸ್ವಚ್ಛತೆಯ ಕೆಲಸವು ಮುಗಿದ ಬಳಿಕ ಗ್ರಾಮಸೇವಕನು ಅವಶ್ಯವಿದ್ದ ಉಪಕರಣ ಮತ್ತು ಸಾಧನಗಳನ್ನು ತೆಗೆದುಕೊಂಡು ಗ್ರಾಮದಲ್ಲಿ ನಡೆಯುವ ರಾಟಿ, ಹತ್ತಿಕಾಳು ತೆಗೆಯುವ ಮತ್ತು ಹಿಂಜುವ ಕಾರ್ಯ ಮುಂತಾದ್ದನ್ನು ನಿರೀಕ್ಷಿಸಲು ಹೊರಡಬೇಕು. ರಾಟಿ ಮುಂತಾದವು

ಗಳನ್ನು ಸುಧಾರಿಸುವುದು, ಸರಿಪಡಿಸುವುದು ಅವಶ್ಯವಿದ್ದಲ್ಲಿ ಸರಿಪಡಿಸಬೇಕು; ಮತ್ತು ಸರಿಪಡಿಸುವುದಕ್ಕೆ ಕಲಿಸಬೇಕು. ಹೊಸದಾಗಿ ಕಲಿಯಲು ಆರಂಭಿಸಿದವರಿಗೆ ಅವರ ಕೆಲಸವನ್ನು ನಿರೀಕ್ಷಿಸಿದ ಬಳಿಕ ಅವಶ್ಯಕಂಡರೆ ಯೋಗ್ಯ ಸಲಹೆಗಳನ್ನೂ ಸೂಚನೆಗಳನ್ನೂ ಕೊಡಬೇಕು. ಹೊಸದಾಗಿ ಕಲಿಯಬೇಕೆನ್ನುವವರಿಗೆ ಒಂದು ಪ್ರತ್ಯೇಕ ಸಮಯವನ್ನು ಗೊತ್ತುಪಡಿಸಬೇಕು. ಆದ್ದರಿಂದ ಹಳ್ಳಿಯಲ್ಲಿ ಈ ಉದ್ಯೋಗಗಳು ಯಾವ ವೇಳೆಯಲ್ಲಿ ನಡೆಯುತ್ತಿರುವವೊ ಆ ವೇಳೆಯಲ್ಲಿಯೇ ಅವುಗಳ ನಿರೀಕ್ಷಣೆಗೆ ಹೊರಡಬೇಕು.

೧೧ ನೂಲುವ, ನೇಯುವ ಮತ್ತು ಇತರ ಉದ್ಯೋಗಗಳು ಗ್ರಾಮಸೇವಕನ ಪರವಾಗಿಯೇ ನಡೆಯುತ್ತಿದ್ದರೆ ಇವುಗಳಿಗೋಸ್ಕರ ಒಂದು ಸಮಯವನ್ನು ಗೊತ್ತುಪಡಿಸಿ ಅದೇ ವೇಳೆಯಲ್ಲಿ ತನ್ನನ್ನು ಕಾಣಲು ಜನರಿಗೆ ಹೇಳಬೇಕು. ಅದೇ ಸಮಯದಲ್ಲಿ ಬರುವ ಅಭ್ಯಾಸವನ್ನು ಅವರಿಂದ ಮಾಡಿಸಬೇಕು. ಆ ವೇಳೆಯಲ್ಲಿಯೆ ಕೆಲಸವನ್ನು ಪರೀಕ್ಷಿಸಿ ಅವಶ್ಯ ಕಂಡ ಯೋಗ್ಯ ಸುಧಾರಣೆಗಳನ್ನು ಮಾಡುವ ಬಗೆಗೆ ಸಲಹೆ ಸೂಚನೆಗಳನ್ನು ಕೊಡಬೇಕು.

೧೨ ದಿನದಲ್ಲಿ ಕನಿಷ್ಟ ಒಂದು ಸಲವಾದರೂ ಗ್ರಾಮಕ್ಕೆ ಅನುಕೂಲವಿದ್ದ ಸಮಯದಲ್ಲಿ ಜನರನ್ನೆಲ್ಲ ಒಂದು ಕಡೆ ಕೂಡಿಸಿ ಗ್ರಾಮಸೇವಕನು ಸಾಮೂಹಿಕ ಪ್ರಾರ್ಥನೆಯನ್ನು ಮಾಡಬೇಕು. ಪ್ರಾರ್ಥನೆಯು ಸರ್ವರಿಗೂ ತಿಳಿಯುವಂಥ ಭಾಷೆಯಲ್ಲಿ ಇರಬೇಕು. ಗ್ರಾಮಸೇವಕನಿಗೆ ಸಂಗೀತದ ಜ್ಞಾನವಿರುವುದು ಒಳಿತು. ಒಂದು ವೇಳೆ ಅವನಿಗೆ ಆ ಜ್ಞಾನವಿರದಿದ್ದರೆ ಗ್ರಾಮದಲ್ಲಿ ಸರಿಯಾಗಿ ಹಾಡುವವರು ಬೇರೆ ಯಾರಾದರೂ ಇದ್ದರೆ ಅವರಿಂದ ಭಜನೆಯ ಪದಗಳನ್ನು ಹಾಡಿಸಬೇಕು. ಪರಮಾತ್ಮನ ನಾಮಸ್ಮರಣೆಯನ್ನು ಮಾಡಿಸಬೇಕು. ಮತ್ತು ಜನರೂ ಅವನಂತೆಯೇ ಹೇಳುವಂತೆ ಮಾಡಬೇಕು. ಸಾಮಾನ್ಯವಾಗಿ ಎಲ್ಲ ಹಳ್ಳಿಗಳಲ್ಲಿ ಭಜನಮಂಡಳಗಳು ಇರುವವು. ಹೊಸ ಹೊಸ ಭಜನೆಯ ಪದಗಳನ್ನು ಕಲಿಸಿ ಅವುಗಳನ್ನು ಸಾಮೂಹಿಕ ಪ್ರಾರ್ಥನೆಯಲ್ಲಿ ಸೇರಿಸಿಕೊಂಡು ಅವುಗಳಿಂದ ಉಪಯೋಗವನ್ನು ಪಡೆಯಬೇಕು.

೧೩ ಪ್ರಾರ್ಥನೆಯು ಮುಗಿದ ನಂತರ ವರ್ತಮಾನಪತ್ರಗಳಲ್ಲಿನ ಉಪಯುಕ್ತ ಸುದ್ದಿಗಳನ್ನು, ಲೇಖಗಳನ್ನು ಓದಿ ಹೇಳಬೇಕು; ಪುಸ್ತಕಗನ್ನು,

ಧಾರ್ಮಿಕ ಗ್ರಂಥಗಳನ್ನು ಓದಿ ಹೇಳಬೇಕು; ಒಳ್ಳೊಳ್ಳೆ ಕಥೆಗಳನ್ನು ಹೇಳಬೇಕು, ಇಲ್ಲವೆ ಹೇಳಿಸಬೇಕು.

೧೪ ಗ್ರಾಮಸೇವಕನು ಕೆಳಗಿನ ಸೂಚನೆಗಳನ್ನು ನೆನಪಿನಲ್ಲಿಟ್ಟುಕೊಂಡಿರಬೇಕು :

(ಅ) ಗ್ರಾಮದಲ್ಲಿ ಪಕ್ಷಗಳು ಇದ್ದರೆ ಗ್ರಾಮಸೇವಕನು ಯಾವ ಪಕ್ಷದಲ್ಲಿಯೂ ಸೇರಕೂಡದು. ತಟಸ್ಥನಿದ್ದುಕೊಂಡು ಎಲ್ಲರ ಸೇವೆಯನ್ನು ಸಮನಾಗಿ ಮಾಡಬೇಕು, ಎಲ್ಲರೊಡನೆ ಸಮನಾದ ಮಿತ್ರತ್ವದಿಂದ ಇರಬೇಕು. ಶಕ್ಯವಿದ್ದರೆ ತನ್ನ ಪ್ರತಿಭೆಯಿಂದ ಆ ಪಕ್ಷಗಳನ್ನು ಮುರಿದು ಎಲ್ಲರನ್ನೂ ಒಂದುಗೂಡಿಸಲು ಯತ್ನಿಸಬೇಕು.

(ಆ) ಸಾಮಾನ್ಯವಾಗಿ ಮಿಷ್ಟಾನ್ನದ ಆಮಂತ್ರಣಗಳು ಬಂದರೆ ಸ್ವೀಕರಿಸಬಾರದು. ಗ್ರಾಮನಿವಾಸಿಗಳು ಗ್ರಾಮಸೇವಕನ ಮೇಲಿನ ಪ್ರೀತಿಯಿಂದ, ಆ ತಮ್ಮ ಪ್ರೀತಿಯನ್ನು ವ್ಯಕ್ತಮಾಡುವುದಕ್ಕಾಗಿ ಆಗಾಗ ಗ್ರಾಮಸೇವಕನಿಗೆ ಆಮಂತ್ರಣವನ್ನು ಕೊಡುವರು; ಗ್ರಾಮಸೇವಕನು ಅವರ ಮನಸ್ಸನ್ನು ನೋಯಿಸಬಾರದೆಂದು ಅದನ್ನು ಸ್ವೀಕರಿಸುವನು. ಇದರಿಂದ ಎಷ್ಟೋ ಗ್ರಾಮಸೇವಕರು ಸ್ವಾದಲೋಲುಪ್ತರಾಗಿ ಯಾವಾಗಲೂ ಇಂಥ ಮನೆಗಳನ್ನೆ ಹುಡುಕುತ್ತಿರುತ್ತಾರೆ. ಅಲ್ಲದೆ ಇಂಥ ಮಿಷ್ಟಾನ್ನದ ಔತಣಗಳನ್ನು ತಾವಾಗಿಯೇ ಕೇಳಲು ಕೂಡ ಹಿಂಜರಿಯುವುದಿಲ್ಲ. ಆದರೆ ಪರಿಸ್ಥಿತಿಯು ಚನ್ನಾಗಿದ್ದ ಗ್ರಾಮವಾಸಿಗಳು ಕೂಡ ಇಂಥ ಸಂದರ್ಭಗಳಲ್ಲಿ ತಮ್ಮ ಶಕ್ತಿಮೀರಿ ವೆಚ್ಚ ಮಾಡುತ್ತಾರೆಂಬುದನ್ನು ಗ್ರಾಮಸೇವಕರು ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಗ್ರಾಮನಿವಾಸಿಗಳ ಮೇಲೆ ಅತಿಥಿಸತ್ಕಾರದ ಭಾರವು ವಿಪರೀತವಾಗಿ ಬೀಳುತ್ತದೆ. ಆದ್ದರಿಂದ ಗ್ರಾಮಸೇವಕನು, ಅತಿಥಿ ಸತ್ಕಾರವನ್ನು ಅತ್ಯಂತ ಸಾದಾ ರೀತಿಯಿಂದಲೆ ಮಾಡುವ ರೂಢಿಯನ್ನು ಗ್ರಾಮನಿವಾಸಿಗಳು ಆಚರಣೆಯಲ್ಲಿ ತರುವಂತೆ ಯತ್ನಿಸುವುದು ಅವಶ್ಯ. ಇದಕ್ಕಾಗಿ ಗ್ರಾಮಸೇವಕನು ಮಿಷ್ಟಾನ್ನದ ಔತಣವನ್ನು ಸ್ವೀಕರಿಸದಿರುವುದೆ ಒಳ್ಳೆಯದು. ಒಂದು ವೇಳೆ ಇಂಥ ಔತಣವನ್ನು ಸ್ವೀಕರಿಸಲೇ ಬೇಕಾದ ಸಂದರ್ಭಬಂದರೆ, ಬೇರೆ ಸಂದರ್ಭಗಳಲ್ಲಿ ಮಿಷ್ಟಾನ್ನವನ್ನು ಉಣ್ಣುತ್ತಿದ್ದರೂ ಇಲ್ಲಿ ಅದನ್ನು ತ್ಯಜಿಸಿ ಸಾದಾ ಆಹಾರವನ್ನು ತೆಗೆದುಕೊಳ್ಳಬೇಕು.

(ಇ) ತೀರ ಬಡವರೂ ಇವನಿಗಾಗಿ ವಿಶೇಷ ಊಟದ ಸಿದ್ಧತೆಯಲ್ಲಿ ತೊಡಗುವ, ಶ್ರಮವಹಿಸುವ ಸಂದರ್ಭ ಬಾರದಂತೆ ಗ್ರಾಮಸೇವಕನು

ಸಾದಾ ಊಟ ಉಡಿಗೆಯ ಅಭ್ಯಾಸವನ್ನು ಸದಾ ಇಟ್ಟುಕೊಂಡಿರಬೇಕು.

(ಈ) ಗ್ರಾಮಸೇವಕನು ಸಂಯಮನಪೂರ್ಣವಾದ ಮತ್ತು ತಪೋ ವ್ರತಮಯವಾದ ಜೀವನವನ್ನು ಕಳೆಯಬೇಕು. ಗ್ರಾಮಸೇವೆಯನ್ನು ಮಾಡಬೇಕಾಗಿರುವವನ ವ್ರತೋಪವಾಸಗಳು ಗ್ರಾಮದ ಪರಿಸ್ಥಿತಿಯನ್ನು ಯೋಚಿಸಿ ಗ್ರಹಣಮಾಡಿದವುಗಳಿರಬೇಕು. ಇಲ್ಲದಿದ್ದರೆ ವ್ರತಗಳು ಸ್ವಚ್ಛಂದವಾಗಿ ಗ್ರಾಮವಾಸಿಗಳನ್ನು ತೊಂದರೆಗೆ ಈಡುಮಾಡುತ್ತವೆ. ಉದಾಹರಣೆಗೆ : ಗ್ರಾಮಸೇವಕನು ಸಕ್ಕರೆ-ಬೆಲ್ಲವನ್ನು ತ್ಯಜಿಸಿ ಹಾಲಿಗೆ ಜೇನುತುಪ್ಪವನ್ನು ಕೇಳುವುದು, ಚಹಾ ಬಿಟ್ಟು ಕಾಫಿ ಅಥವಾ ಯಾವು ದಾದರೂ ಮಸಾಲೆಯ ಕಷಾಯವನ್ನು ಕೇಳುವುದು ಮುಂತಾದ್ದು.

## ಚತುರ್ದ್ದಶ ಖಂಡ

## ಸಂಸ್ಥೆಗಳು



### ೧ ಸಂಸ್ಥೆಯ ಸಫಲತೆ

೧ ಯಾವ ಸಂಸ್ಥೆಯಾದರೂ ಅದರ ಸಫಲತೆಯು ಕೆಳಗಿನ ಮಾತು ಗಳನ್ನು ಅವಲಂಬಿಸಿದೆ:

(ಅ) ಸಂಸ್ಥೆಯ ಉದ್ದೇಶದಲ್ಲಿ ಅತ್ಯಂತ ಪ್ರಾಮಾಣಿಕ ನಿಷ್ಠೆ ಮತ್ತು ಆ ಉದ್ದೇಶಪೂರ್ತಿಗಾಗಿ ತಳಮಳ.

(ಆ) ಸಂಸ್ಥೆಯ ನಿಯಮಗಳ ಸ್ಥೂಲ ಪಾಲನೆಯಷ್ಟೇ ಅಲ್ಲ, ಭಾವ ಗಳ ಪಾಲನೆ.

(ಇ) ಸಂಸ್ಥೆಯ ಸಂಚಾಲಕ, ಸದಸ್ಯ, ಸೇವಕ ಮುಂತಾದ ಕಾರ್ಯಕರ್ತ ರಲ್ಲಿ ಬಂಧುಭಾವ ಮತ್ತು ಒಂದೇ ಮನಸ್ಸು.

೨ ಯಾವ ಸಂಸ್ಥೆಯಲ್ಲಿ ಈ ಮೂರು ಮಾತುಗಳಲ್ಲಿ ಒಂದಾದರೂ ಪಾಲಿಸಲ್ಪಡುವುದಿಲ್ಲವೊ ಆ ಸಂಸ್ಥೆಯು ಉಳಿದ ಎಲ್ಲ ಅನುಕೂಲತೆ ಗಳಿದ್ದರೂ ತೇಜಸ್ವಿಯಾಗಲಾರದು.

## ೨ ಸಂಸ್ಥೆಯ ಸಂಚಾಲಕ

೧ ಸಂಸ್ಥೆಯ ಸಂಚಾಲಕನು ಸಂಸ್ಥೆಯ ಪ್ರಾಣಸ್ವರೂಪನೆಂದು ಹೇಳ ಬಹುದು.

೨ ಇವನು ಸಂಸ್ಥೆಯ ಉದ್ದೇಶದಲ್ಲಿಟ್ಟುಕೊಂಡ ನಿಷ್ಠೆ ಮತ್ತು ತಳ ಮಳ, ಇವನ ನಿಯಮಪಾಲನೆ, ಉಳಿದ ಸದಸ್ಯರೊಡನೆ ಇಟ್ಟುಕೊಂಡ ವರ್ತನೆ, ಉದ್ಯೋಗತತ್ಪರತೆ ಮೊದಲಾದವುಗಳ ಮೇಲೆಯೇ ಸಂಸ್ಥೆಯ ಸಫಲತೆಯು ಕಾಲೂರಿದೆ.

೩ ಸಂಚಾಲಕನಿಗೆ ತನ್ನ ಅಧಿಕಾರದ ಗರ್ವವುಂಟಾದರೆ ಅಥವಾ ಅವನು ಸಂಸ್ಥೆಯ ಅನ್ಯ ಸದಸ್ಯರೊಡನೆ ಅನಾದರದಿಂದ ಮತ್ತು ಅಪ್ರಸನ್ನತೆಯಿಂದ ವರ್ತಿಸಿದರೆ ಸಂಸ್ಥೆಗೆ ಹಾನಿ ತಟ್ಟುವುದು.

೪ ಒಳ್ಳೆಯ ಸೇನಾಪತಿಯು ಹೇಗೆ ನಿಯಮಗಳ ಪಾಲನೆಯನ್ನು ಮಾಡಿಸುವಾಗ ಆಗ್ರಹಿಯೂ ಕಠೋರನೂ ಇರುವನೊ, ಅಲ್ಲದೆ ತನ್ನ ಸೈನಿಕರ ಪ್ರೇಮವನ್ನು ಸಂಪಾದಿಸುವ ಚಿಂತನೆಯನ್ನು ಮಾಡುವನೊ, ತನ್ನ ಸೈನಿಕರ ಬಗೆಗೆ ಅಭಿಮಾನವನ್ನು ತಾಳುವನೊ ಹಾಗೆಯೇ ಸಂಸ್ಥೆಯ ಸಂಚಾಲಕನ ನಡತೆಯೂ ಇರಬೇಕು.

೫ ಸಂಸ್ಥೆಯ ಚಿಕ್ಕ ಚಿಕ್ಕ ವಿಷಯಗಳ ಕಡೆಗೂ ಸಂಚಾಲಕನ ಗಮನ ವಿರಬೇಕು. ಹೇಗೆ ತಾಯಿಯು ಬಾಲಕನ ಸುಖದುಃಖದ ಚಿಂತನೆಯನ್ನು ಮಾಡುವಳೊ ಹಾಗೆಯೇ ಸಂಚಾಲಕನೂ ಸಂಸ್ಥೆಯ ಮನುಷ್ಯರ ಮತ್ತು ಪ್ರಾಣಿಗಳ ಸುಖದುಃಖಗಳ ಕಡೆಗೆ ಗಮನಕೊಡತಕ್ಕದ್ದು.

೬ ಸಂಚಾಲಕನು ಸಂದರ್ಭಾನುಸಾರವಾಗಿ ತನ್ನ ಅಧಿಕಾರವನ್ನು ನಡೆಸಿದರೂ ತನ್ನ ಕೈಕೆಳಗಿನವರೊಡನೆ ಸರಿಸಮಾನತೆಯ ಅಥವಾ ಗೆಳೆ ತನದ ಸಂಬಂಧವನ್ನಿಟ್ಟುಕೊಂಡಿರಬೇಕು. ಚಿಕ್ಕವರಲ್ಲಿ ಚಿಕ್ಕವನನ್ನು ಕೂಡ ತನ್ನಗೆಳೆಯನೆ ಎಂದು ತಿಳಿಯಬೇಕು. ತನಗೆ ಸಂಚಾಲಕತ್ವವು ದೊರೆತದ್ದು ತನ್ನ ಬಗೆಗೆ ಇರುವ ತನ್ನ ಸಂಗಡಿಗರ ಪಕ್ಷಪಾತದಿಂದ ಅಥವಾ ಆದರದಿಂದಲೆ ಹೊರತು ತನ್ನ ವಿಶೇಷ ಯೋಗ್ಯತೆಯಿಂದ ಅಲ್ಲವೆಂದು ಸಂಚಾಲಕನು ತಿಳಿದುಕೊಳ್ಳತಕ್ಕದ್ದು.

೭ ಆದ್ದರಿಂದ ಸಂಚಾಲಕನು ಚಿಕ್ಕವರಲ್ಲಿ ಚಿಕ್ಕವನ ಸೂಚನೆಯನ್ನೂ ಆದರದಿಂದ ಕೇಳಿಕೊಂಡು ಯೋಗ್ಯವಾದದಿದ್ದರೆ ಅದನ್ನು ಸ್ವೀಕರಿಸಲು

ಸಿದ್ಧನಾಗಿರಬೇಕು. ಅಯೋಗ್ಯವೆನಿಸಿದರೆ ಅದರ ಅಯೋಗ್ಯತೆಯನ್ನು ತಿಳಿಸಿಕೊಡಲು ಯತ್ನಿಸಬೇಕು.

೮ ಸಂಚಾಲಕನು ಅರಗಿನ ಕಿವಿಯವನಾಗಕೂಡದು. ಯಾರ ವಿಷಯದಲ್ಲಿಯೂ ತತ್‌ಕ್ಷಣವೆ ಪ್ರತಿಕೂಲ ಅಭಿಮತವನ್ನು ಮಾಡಿಕೊಳ್ಳಬಾರದು. ಪ್ರತಿಕೂಲ ಅಭಿಪ್ರಾಯವನ್ನು ಮಾಡಿಕೊಳ್ಳುವ ಮೊದಲು ದೀರ್ಘವಾಗಿ ಯೋಚಿಸಿ ಸ್ಪಷ್ಟ ಪ್ರಮಾಣವು ದೊರೆಯದಿದ್ದರೆ ಪ್ರತಿಕೂಲ ಅಭಿಪ್ರಾಯವನ್ನು ಮಾಡಿಕೊಳ್ಳಬಾರದು.

೯ ತನ್ನ ಕೈಕೆಳಗೆ ಕೆಲಸ ಮಾಡುವವರಲ್ಲಿ ಯಾರೊಬ್ಬರ ಮೇಲೂ ವಿಶೇಷ ಪ್ರೇಮವನ್ನು ವ್ಯಕ್ತಮಾಡಬಾರದು; ಯಾರ ಪಕ್ಷವನ್ನೂ ಕಟ್ಟಬಾರದು, ಪಕ್ಷಪಾತ ಮಾಡಬಾರದು; ಒಬ್ಬನನ್ನು ಅವಮಾನಿಸುವುದಕ್ಕಾಗಿ ಅಥವಾ ಒಬ್ಬನ ಕೀಳುತನವನ್ನು ತೋರಿಸುವುದಕ್ಕಾಗಿ ಇನ್ನೊಬ್ಬನನ್ನು ಹೊಗಳಬಾರದು.

೧೦ ನಿಯಮಗಳ ಸರಿಯಾದ ಪಾಲನೆ ಮಾಡಿಸುವುದಕ್ಕಾಗಿ ಕಠೋರ ವರ್ತನೆಯನ್ನಿಡಬಾರದು, ಕಠೋರವಾಗಿ ನುಡಿಯಬಾರದು, ಶಿಕ್ಷೆಯನ್ನು ಕೊಡುವುದು ಕೂಡ ಅವಶ್ಯವಿಲ್ಲ ಎಂದು ತಿಳಿದಿರಬೇಕು. ನಿಯಮಪಾಲನೆಗೆ ಕಠೋರ ವರ್ತನೆ, ಕಠೋರ ನುಡಿ, ಶಿಕ್ಷೆ ಅವಶ್ಯವೆಂದು ತಿಳಿಯುವ ಸಂಚಾಲಕನ ಯೋಗ್ಯತೆಯಲ್ಲಿ ಕೊರತೆಯಿರುವುದೆಂಬುದು ಸಿದ್ಧವಾಗುವ ಮಾತು.

## ೩ ಸಂಸ್ಥೆಯ ಸದಸ್ಯರು

೧ ಯಾವ ಸಂಸ್ಥೆಯ ಸದಸ್ಯರಲ್ಲಿ ಪರಸ್ಪರ ಬಂಧುಭಾವವು ಮತ್ತು ಆದರವು ಇರುವುದಿಲ್ಲವೊ ಆ ಸಂಸ್ಥೆಯು ಬಹುಕಾಲದ ವರೆಗೆ ವೈಭವದಿಂದ ಬಾಳಲಾರದು. ಅದರಲ್ಲಿ ವಿಭಾಗಗಳೂ ಪಕ್ಷಗಳೂ ಉಂಟಾಗುವವು; ಅದು ತನ್ನ ಧ್ಯೇಯವನ್ನು ಮರೆತು ಕಲಹದಲ್ಲಿಯೆ ತೊಡಗುವುದು.

೨ ಯಾವ ಸಂಸ್ಥೆಯ ಸದಸ್ಯರು ತಮ್ಮ ಮೇಲಧಿಕಾರಿಗಳ ಆಜ್ಞೆಯನ್ನು ಹರ್ಷದಿಂದ ಪಾಲಿಸಲು ಸಿದ್ಧರಾಗುವುದಿಲ್ಲವೊ ಆ ಸಂಸ್ಥೆಯು ಬಹಳ ಸಮಯದ ವರೆಗೆ ತೇಜಸ್ವಿಯಾಗಿ ಬಾಳಲಾರದು. ಅದರಲ್ಲಿ ಆಲಸ್ಯವೂ ಸಡಿಲೂ ಹುಟ್ಟುವುದು ಮತ್ತ ಸದಸ್ಯರು ಅಲಕ್ಷಿಗಳೂ ಆಗುವರು.

೩ ಸಂಚಾಲಕರಲ್ಲಿ ಮತ್ತು ಸದಸ್ಯರಲ್ಲಿ ಸ್ಥೂಲ ಹಾಗೂ ಮಾನಸಿಕ ಸಹಕಾರವು ಇರತಕ್ಕದ್ದು. ಸದಸ್ಯರು ಸಂಚಾಲಕನ ಇಚ್ಛೆಗೆ ಮತ್ತು ಆಜ್ಞೆಗೆ

ಒಳಪಟ್ಟಿರಬೇಕೆಂದಿಷ್ಟೇ ಇದರ ತಾತ್ಪರ್ಯವಲ್ಲ. ಆದರೆ ಆ ಇಚ್ಛೆಯು ಅಥವಾ ಆಜ್ಞೆಯು ಉಚಿತವಾದುದೆಂದು ತಿಳಿಯುತ್ತಿದ್ದರೆ ಅವನು ಆಜ್ಞಾಪಿಸಿದ ಕೆಲಸವನ್ನು ತಾವೇ ಕಲ್ಪಿಸಿಕೊಂಡು ಮಾಡಲು ನಿಶ್ಚಯಿಸಿರುವರೋ ಏನೋ ಎನ್ನುವಂತೆ ನಡತೆಯನ್ನಿಡಬೇಕು.

೪ ಯಾವ ನಿಯಮದ ಮತ್ತು ಆಜ್ಞೆಯ ಔಚಿತ್ಯದ ವಿಷಯದಲ್ಲಿ ಸದಸ್ಯರಿಗೆ ಸಂತೋಷ ಮತ್ತು ವಿಶ್ವಾಸವೆನಿಸುವುದಿಲ್ಲವೊ ಆ ನಿಯಮ ಮತ್ತು ಆಜ್ಞೆಯ ವಿಷಯವನ್ನು ಕುರಿತು ಸಂಚಾಲಕನೊಡನೆ ಮನಬಿಚ್ಚಿ ಮಾತನಾಡಿಕೊಳ್ಳಬೇಕು. ತಮಗೆ ಎಲ್ಲಿಯ ವರೆಗೆ ವಿಶ್ವಾಸವೆನಿಸುವುದಿಲ್ಲವೊ ಅಲ್ಲಿಯ ವರೆಗೆ ತಮಗೆ ವಿಶ್ವಾಸವಾಗಿದೆಯೆಂಬ ಆಭಾಸವನ್ನು ಸಂಚಾಲಕನಲ್ಲಿ ಹುಟ್ಟಗೊಡಬಾರದು.

೫ ಒಂದು ವೇಳೆ ಇಂಥ ಒಂದು ನಿಯಮವು ಅಥವಾ ಆಜ್ಞೆಯು ಸತ್ಯಕ್ಕೆ ಅಥವಾ ಧರ್ಮಕ್ಕೆ ವಿರುದ್ಧವೆಂದು ಎನಿಸದಿದ್ದರೆ, ಆದರೆ ಕೇವಲ ವ್ಯಾವಹಾರಿಕ ದೃಷ್ಟಿಯಿಂದ ಅಯೋಗ್ಯವೆನಿಸಿದರೆ ಅಂಥ ನಿಯಮದ ಅಥವಾ ಆಜ್ಞೆಯ ಯೋಗ್ಯತೆಯ ವಿಷಯದಲ್ಲಿ ವಿಶ್ವಾಸವುಂಟಾಗದಿದ್ದರೂ ಅವನ್ನು ಸದಸ್ಯನು ಪಾಲಿಸತಕ್ಕದ್ದು. ಒಂದು ವೇಳೆ ಅದು ಸತ್ಯಕ್ಕೆ ಅಥವಾ ಧರ್ಮಕ್ಕೆ ವಿರುದ್ಧವಾದುದೆಂದು ಎನಿಸಿದರೆ ಅವನು ಸಂಸ್ಥೆಯನ್ನು ಬಿಡಲು ಸಿದ್ಧನಾಗಬೇಕು.

೬ ಒಂದು ವೇಳೆ ನಿಯಮವು ಅಥವಾ ಆಜ್ಞೆಯು ಸತ್ಯಕ್ಕೆ ಅಥವಾ ಧರ್ಮಕ್ಕೆ ವಿರುದ್ಧವಾದದ್ದಲ್ಲದಿದ್ದರೂ ಅದನ್ನು ಪಾಲಿಸುವುದು ತನ್ನ ದೌರ್ಬಲ್ಯದ ಮೂಲಕ ಕಠಿಣವೆನಿಸಿದರೆ ಸದಸ್ಯರು ಸಂಸ್ಥೆಯ ಏಳಿಗೆಯ ದೃಷ್ಟಿಯಿಂದ ಸಂಸ್ಥೆಯನ್ನು ಬಿಡುವುದೆ ಒಳಿತು.

೭ ಸದಸ್ಯರಲ್ಲಿ ಪರಸ್ಪರ ಮತಭೇದವುಂಟಾದರೆ, ನಡತೆಯ ವಿಷಯದಲ್ಲಿ ಸಂಶಯವು ಬಂದರೆ, ಮತ್ತು ಅದರಿಂದ ಅಸಂತೋಷವೂ ದುಃಖವೂ ಆಗಿದ್ದರೆ, ಯಾರೊಬ್ಬನ ಮನಃಪ್ರವೃತ್ತಿಯ ವಿಷಯದಲ್ಲಿ ಸಂಶಯವು ಬಂದಿದ್ದರೆ ಮೊಟ್ಟ ಮೊದಲು ಅವರು ಆ ವ್ಯಕ್ತಿಯೊಡನೆಯೆ ಇಂಥ ಸರ್ವ ವಿಷಯದಲ್ಲೂ ಮಾತನಾಡಿ ಸಂಶಯವನ್ನು ದೂರಮಾಡಿಕೊಳ್ಳತಕ್ಕದ್ದು. ಆದರೆ ಇಷ್ಟರಿಂದಲೂ ಒಂದು ವೇಳೆ ತಮ್ಮ ಸಂಶಯವು ದೂರವಾಗದಿದ್ದರೆ, ಅವನ ವಿಷಯವಾಗಿ ತಮ್ಮ ಅಭಿಪ್ರಾಯವು ಹೆಚ್ಚು ದೃಢವಾಗುತ್ತಹೋದರೆ ಅವನ ಅಥವಾ ತಮ್ಮ ಮೇಲಿನ ಅಧಿಕಾರಿಗೆ ಆ ವಿಷಯವನ್ನು ತಿಳಿಸ

ಬೇಕು; ಈ ವಿಷಯದಲ್ಲಿ ಯೋಗ್ಯವೆನಿಸಿದ ಶಾಸನವನ್ನು ಮಾಡಲು ಮೇಲಧಿಕಾರಿಗೆ ಒಪ್ಪಿಸಿಬಿಡಬೇಕು.

೮ ಯಾವ ವ್ಯಕ್ತಿಯ ವಿಷಯದಲ್ಲಿ ಸಂಶಯವುಂಟಾಗಿರುತ್ತದೊ ಅದೇ ಮನುಷ್ಯನೊಡನೆ ಸ್ಪಷ್ಟವಾಗಿ ಮಾತನಾಡಿಕೊಳ್ಳಲು ಪ್ರಯತ್ನಿಸದೆ, ಅವನ ಮೇಲಧಿಕಾರಿಗೆ ಅಥವಾ ಉಳಿದ ಸದಸ್ಯರಿಗೆ ಅಥವಾ ತನ್ನ ಮೇಲಧಿಕಾರಿಗೆ ತಿಳಿಸದೆ ಕೂಡಲೆ ವರಿಷ್ಠ ಅಧಿಕಾರಿಗೆ ತಿಳಿಸುವುದು ಯೋಗ್ಯವಲ್ಲ.

೯ ತನ್ನ ಮನಸ್ಸಿನಲ್ಲಿ ಯಾವನೊಬ್ಬನ ವಿಷಯದಲ್ಲಿ ಕುಕಲ್ಪನೆ ಇದ್ದಲ್ಲಿ ಅದರ ನಿವಾರಣೆಯನ್ನು ಮಾಡಿಕೊಳ್ಳದೆ ಮನಸ್ಸಿನಲ್ಲಿಯೆ ತುಂಬಿ ಕೊಳ್ಳುವುದು ಮತ್ತು ಮೇಲಧಿಕಾರಿಗೆ ತಿಳಿಸುವ ಸಂದರ್ಭವು ಬಂದಾಗಲೂ ತಿಳಿಸದಿರುವುದು ಸಂಸ್ಥೆಯಲ್ಲಿ ಹೊಲಸು ಸೇರಲು ಇಂಬುಗೊಟ್ಟಂತೆಯೇ ಸರಿ.

೧೦ ಯಾವ ಸಂಸ್ಥೆಯಲ್ಲಿ ಸದಸ್ಯರ ದೋಷಗಳು ಗುಪ್ತವಾಗಿಯೆ ಚರ್ಚಿಸಲ್ಪಡುತ್ತವೊ ಅವು ಮೇಲಧಿಕಾರಿಗಳ ಕಿವಿಯ ವರೆಗೂ ಹೋಗುವು ದಿಲ್ಲವೊ ಮತ್ತು ಯಾರ ವಿಷಯದಲ್ಲಿ ಸಂಶಯ ಬಂದರೂ ಅವರೊಡನೆ ಮಾತನಾಡಿ ಸಂಶಯ ಪರಿಹಾರ ಮಾಡಿಕೊಳ್ಳುವುದಿಲ್ಲವೊ ಅಂಥ ಸಂಸ್ಥೆಯು ತೇಜಸ್ವಿಯಾಗಿ ಬದುಕಲಾರದು. ಅದರಲ್ಲಿ ಪಾಪ, ದುರಭಿಮಾನ, ಡಾಂಭಿಕತನ, ಅಸತ್ಯ, ನಾಚಿಕೆಗೇಡಿತನ ಮೊದಲಾದವು ಸೇರಿ ಅದನ್ನು ಕೊಂದುಬಿಡುವವು.

## ೪ ಸಂಸ್ಥೆಯ ಆರ್ಥಿಕ ವ್ಯವಹಾರ

೧ ಕಲ್ಯಾಣಕಾರಕವಾದ ಯಾವುದೊಂದು ನಿಜವಾದ ಕಾರ್ಯವು ಹಣ ವಿಲ್ಲದ್ದರಿಂದ ನಿಂತುಹೋಯಿತೆಂದು ನಾನು ಇನ್ನೂ ಕೇಳಿಲ್ಲ.

೨ ಬಂಡವಲು ಒಟ್ಟುಗೂಡಿಸಿ ಅದರ ಬಡ್ಡಿಯಿಂದಲೆ ವೆಚ್ಚವನ್ನು ಸಾಗಿಸಬೇಕೆಂಬ ಪ್ರವೃತ್ತಿಯು ಇರಬಾರದು. ಯಾವ ಸಂಸ್ಥೆಯು ಪ್ರಜೆ ಗಳಿಗೆ ಉಪಯೋಗವಾಗುವುದೆಂದು ತೋರುವುದೊ ಅದಕ್ಕೆ, ಅದರ ನಿರ್ವಾಹಕ್ಕೆ ಹಣವು ದೊರೆಯುವುದೆಂಬ ದೃಢವಾದ ವಿಶ್ವಾಸವು ಸಂಸ್ಥೆಯ ಸಂಚಾಲಕರಲ್ಲಿರಬೇಕು.

೩ ಸಂಸ್ಥೆಯ ಉಪಯುಕ್ತತೆಯ ಬಗೆಗೆ ಜನತೆಯಲ್ಲಿ ಎಲ್ಲಿಯ ವರೆಗೆ ವಿಶ್ವಾಸವುಂಟಾಗುವುದಿಲ್ಲವೊ ಅಲ್ಲಿಯ ವರೆಗೆ ಅದರ ಸಂಚಾಲಕರು ಹೆಚ್ಚು